ಬಾಣ

# ಕಾದಂಬರಿ




ಕನ್ನಡದಲ್ಲಿ ಸಂಗ್ರಹಿಸಿದವರು:

ಕೈ. ವಾ. ಗಂಗಾಧರ ಮಡಿವಾಳೇಶ್ವರ ತುರಮರಿ

( ಮೂರನೆಯ ಆವೃತ್ತಿ – ೩೦೦೦ ಪ್ರತಿಗಳು )

೧೯೫೩



ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ಬೆಲೆ: ಎರಡು ರೂಪಾಯಿ

| | | |
|---|---|---|
| First Edition | | ? |
| Second | ,, | ? |
| Third | ,, | 1905 |
| Fourth | ,, | 1910 |
| Fifth | ,, | 1919 |
| Sixth | ,, | 1926 |
| Seventh | ,, | 1953 |

Printed by H. R. Moharay, at the Samyukta Karnatak Press, Hubli
and Published by B. G. Gokhale & V. H. Laxmeshwar
Hon. Secretaries, Karnatak Vidyavardhaka Sangha,
in its Office, at Dharwar.

# ಮೊದಲು ಮಾತು

ಈ ಮೊದಲು ಪ್ರಕಟವಾದ ಆವೃತ್ತಿಗಳಲ್ಲಿ ಪ್ರಚಲಿತ ಭಾಷಾನುರೂಪವಾಗಿ ತಿದ್ದುಪಡಿ ಮಾಡುತ್ತ ಬಂದಿರುವಂತೆ ಈ ಬಾರಿಯ ಆವೃತ್ತಿಯಲ್ಲಿಯೂ ತುಸು ತಿದ್ದುಪಡಿ ಮಾಡಲಾಗಿದೆ.

ಕರ್ನಾಟಕ ವಿಶ್ವವಿದ್ಯಾನಿಲಯದವರು ಈ ಪುಸ್ತಕವನ್ನು ಮೂರು ವರುಷಗಳ ಮಟ್ಟಿಗೆ ಎಫ್. ವಾಯ್. ( ಆರ್ಟ್ಸ ಮತ್ತು ಸಾಯನ್ಸ ) ವರ್ಗಕ್ಕೆ ಪಠ್ಯಪುಸ್ತಕವನ್ನಾಗಿ ಗೊತ್ತುಮಾಡಿ ಶ್ರೀ. ವಾ. ಕೊರವುರಿಯವರ ಈ ಬಗೆಯ ಗ್ರಂಥಕ್ಕೆ ತಕ್ಕ ಸನ್ಮಾನವನ್ನು ನೀಡಿದ್ದಾರೆಂದು ಭಾವಿಸುತ್ತೇವೆ. ಇಂತಹ ಗ್ರಂಥಗಳನ್ನು ಪಠ್ಯ ಮಾಡಿ ಭಾಷಾಭಿವೃದ್ಧಿಯ ಇತಿಹಾಸವನ್ನು ಪ್ರಸಂಗಿಕವಾಗಿ ಬಿಂಬಿಸಲು ಅನುಕೂಲ ಒದಗಿಸಿದ್ದಕ್ಕಾಗಿ ಕರ್ನಾಟಕ ವಿಶ್ವವಿದ್ಯಾನಿಲಯದ ಪಠ್ಯಪುಸ್ತಕ ಸಮಿತಿಗೆ ಕರ್ನಾಟಕ ವಿದ್ಯಾವರ್ಧಕ ಸಂಘವು ಕೃತಜ್ಞತೆಯನ್ನು ಈ ಮೂಲಕ ಸೂಚಿಸುತ್ತದೆ.

ಅತ್ಯಲ್ಪಕಾಲದಲ್ಲಿ ಅಂದವಾಗಿ ಅಚ್ಚುಮಾಡಿಕೊಟ್ಟು ಸಹಕರಿಸಿದ ಸಂಯುಕ್ತ ಕರ್ನಾಟಕ ಮುದ್ರಣಾಲಯದವರಿಗೂ ಅಭ್ಯಾಸಿಗಳಿಗೆ ಅನುಕೂಲವಾಗುವಂತೆ ಮುನ್ನುಡಿ ಬರೆದುಕೊಟ್ಟು ಉಪಕರಿಸಿದ ಸಂಘದ ಕಾರ್ಯಕಾರಿ ಮಂಡಳದ ಸದಸ್ಯರಾದ ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ. ಅವರಿಗೂ, ಕೊರವುರಿಯವರ ಬಗ್ಗೆ ವೈಯಕ್ತಿಕ ವಿವರಗಳನ್ನು ಕೊಟ್ಟ, ಬೆಳಗಾಂವಿಯ ಪ್ರೊ. ಪಿ. ಸಾಂಗಲಿಯವರಿಗೂ, ಮುದ್ರಣದ ವ್ಯವಸ್ಥೆಯ ಸಕಲಭಾರವನ್ನು ಹೊತ್ತು ಸಕಾಲದಲ್ಲಿ ಪುಸ್ತಕದ ಪ್ರತಿಗಳನ್ನು ಒದಗಿಸಲು ಸರ್ವವಿಧದಿಂದ ನೆರವಾದ ಸಂಘದ ಕಾರ್ಯಕಾರಿ ಮಂಡಳದ ಸದಸ್ಯರಾದ ಶ್ರೀ. ಜೋಶಿ ಗಣಪತರಾಯರಿಗೂ ನಾವು ಕೃತಜ್ಞರಾಗಿದ್ದೇವೆಂದು ಈ ಮೂಲಕ ಹೇಳ ಬಯಸುತ್ತೇವೆ.

ಕರ್ನಾಟಕ ವಿದ್ಯಾವರ್ಧಕ ಸಂಘ
ಧಾರವಾಡ
೧-೬-೧೯೬೪

ಧಾ. ಗೋ. ಗೋಖಲೆ
ಡಿ. ಹ. ಲಕ್ಷ್ಮೇಶ್ವರ
ಗೌರವ ಕಾರ್ಯದರ್ಶಿಗಳು

# ಪ್ರಸ್ತಾವನೆ

ಕಾವ್ಯಗಳಲ್ಲಿ ಗದ್ಯರೂಪ, ಪದ್ಯರೂಪವೆಂಬ ಎರಡು ಪ್ರಕಾರಗಳುಂಟು. ಗದ್ಯರೂಪ, ಪದ್ಯರೂಪಗಳೆಂದರೆ ಏನೆಂಬ ಬಗ್ಗೆ, ಹಲವರು ಭ್ರಾಂತಿಗೊಳ್ಳಬಹುದು. ಆದರೆ, 'ಗದ್ಯ'—'ಪದ್ಯ'ಗಳೆಂಬ ಶಬ್ದಗಳ ಮೂಲಾರ್ಥಗಳನ್ನೂ, 'ರಸಾತ್ಮಕಂ ಕಾವ್ಯಂ' ಎಂಬ ಕಾವ್ಯ ಲಕ್ಷಣವನ್ನೂ ಸ್ವಲ್ಪ ಶೋಧಿಸಿದರೆ, ಆಗಲೇ ಅವರ ಭ್ರಾಂತಿಯು ದೂರಾಗುವದು. 'ಗದ್ಯ' (ಗದ್-ಮಾತಾಡು) ಅಂದರೆ ಸಾಧಾರಣವಾಗಿ ವ್ಯವಹಾರದಲ್ಲಿ ಮಾತಾಡುವ ಭಾಷೆಯ ರಚನೆಯಂತೆ ರಚನೆಯು; 'ಪದ್ಯ' (ಪದ್-ಛಂದದ ಪ್ರಕಾರ ರಚಿಸು) ಅಂದರೆ ಛಂದೋಬದ್ಧವಾದ ಕೃತ್ರಿಮ ರಚನೆಯು; 'ರಸಾತ್ಮಕಂ ಕಾವ್ಯಂ' ಅಂದರೆ ರಸಯುಕ್ತವಾದದ್ದೇ ಕಾವ್ಯವು; ರಸವಿಲ್ಲದಿದ್ದರೆ ಕಾವ್ಯವೆನಿಸದು. ಗದ್ಯಗ್ರಂಥಕ್ಕೂ ಪದ್ಯಗ್ರಂಥಕ್ಕೂ ರಸವೇ ಪ್ರಧಾನವು. ರಸವು ಸ್ವತಂತ್ರವಾದದ್ದು. ಅದಕ್ಕೂ, ಯಮಕಪ್ರಾಸಶ್ಲೇಷವರ್ಣಮಾಧುರ್ಯಗಳೆಂಬ ಶಬ್ದರಚನೆಗೂ ಏನೂ ಸಂಬಂಧವಿಲ್ಲ.

ಪದ್ಯಗ್ರಂಥಗಳು ಹುಟ್ಟಿದ ತರುವಾಯ ಗದ್ಯಗ್ರಂಥಗಳು ಹುಟ್ಟುವದೊಂದು ಸಾಧಾರಣ ನಿಯಮವಿದೆ. ಇದಕ್ಕೆ ಕಾರಣವಾದರೂ ಹೀಗೆಯೇ ತೋರುತ್ತದೆ. ತಿಳುವಳಿಕೆಯಿಲ್ಲದಾಗ ಮನುಷ್ಯರಿಗೆ ಹುಚ್ಚು ಕಲ್ಪನೆಗಳು ಹುಟ್ಟಿದ ಹಾಗೆ ತಿಳುವಳಿಕೆಯಾದಾಗ ಹುಟ್ಟುವದಿಲ್ಲ; ಆಗ ವಿಚಾರಶಕ್ತಿಯು ಹುಟ್ಟುತ್ತದೆ. ವಿಚಾರಶಕ್ತಿಯು ಹುಟ್ಟಿದ ಹಾಗೆ, ಮನುಷ್ಯರ ಮನಸ್ಸು ಸತ್ಯಾಸತ್ಯಗಳನ್ನು ಪ್ರತಿಪಾದಿಸುವ ವಿಷಯಗಳಿಗೆ ಎಳಿಸುತ್ತದೆ. ಅಂಥ ವಿಷಯಗಳ ಗ್ರಂಥಗಳಿಗೆ ಛಂದೋಬದ್ಧವಾದ ಕೃತ್ರಿಮ ರಚನೆಯು ಮೊದಲೇ ಒಪ್ಪುವದಿಲ್ಲ; ವ್ಯವಹಾರದೊಳಗಿನ ಭಾಷೆಯೇ ಸಲ್ಲುವದು. ಈ ಕಾರಣದಿಂದ ಪದ್ಯಗ್ರಂಥಗಳು ಹಿಂದಕ್ಕೆ ಬಿದ್ದು, ಗದ್ಯಗ್ರಂಥಗಳು ಮುಂದಕ್ಕೆ ಬರುವವು.

ಈ ಮೇರೆಗೆ ಗದ್ಯಗ್ರಂಥಗಳ ಪರಿಪಾಠವಾಗಿ, ಗ್ರಂಥ ರಚಿಸುವ ರೀತಿಯು ಇದೇ ಎಂದು ಗೊತ್ತಾಗುವದು ವಿದ್ಯಾಭಿವೃದ್ಧಿಯ ಕುರುಹೇ ಸರಿ. ಕೇಳುವವರ ಕಿವಿಗೆ ಇಂಪಾಗುವ ಸ್ವರಸಂಯೋಗ, ಶಬ್ದಾಲಂಕಾರ, ಅರ್ಥಾಲಂಕಾರ ಮುಂತಾದ ಬಾಹ್ಯ ಸಾಧನಗಳು, ಕವಿತೆಗೆ ಬೇಕಾದ ಹಾಗೆ,

ಗದ್ಯಗ್ರಂಥಗಳಿಗೆ ಬೇಕಾಗುವದಿಲ್ಲ; ಒಳ್ಳೇ ಬಗೆಗಿನ ಅರ್ಥದ ಸೌಂದರ್ಯ-ದಿಂದಲೂ, ಸಮಂಜಸತನದಿಂದಲೂ ಗದ್ಯಗ್ರಂಥಗಳು ಓದುವವರ ಮನಸ್ಸು ರಂಜನೆಗೊಳಿಸುತ್ತವೆ.

ಇಂಥ ಗದ್ಯಗ್ರಂಥಗಳನ್ನು ಪ್ರಾಚೀನಕಾಲದಲ್ಲಿ ಬಾಣ, ಸುಬಂಧು, ದಂಡಿ ಎಂಬ ಕವಿಗಳು ಸಂಸ್ಕೃತ ಭಾಷೆಯಲ್ಲಿ ರಚಿಸಿದರು. ಈ ಕವಿಗಳಲ್ಲಿ ಬಾಣನೇ ವಿಶೇಷ ಪ್ರಸಿದ್ಧನು.

ಬಾಣಕವಿಯ ತಂದೆ ಚಿತ್ರಭಾನು; ತಾಯಿ ರಾಜದೇವಿ. ಇವನು ಹದಿನಾಲ್ಕು ವರ್ಷದವನಿರುವಾಗ ತಂದೆ ತೀರಿದನು. ಭದ್ರನಾರಾಯಣ, ಈಶಾನ, *ಮಯೂರರೆಂಬವರು ಬಾಣಕವಿಯ ಬಾಲಮಿತ್ರರು. ಬಾಣನ ಮನೆಯು ಶೋಣನದಿಯ ಪಡುವಣಕ್ಕೆ ಪ್ರೀತಿಕೂಟವೆಂಬ ಊರೊಳಗಿತ್ತು. ಇದೇ ಹೊಳೆಯ ದಂಡೆಯ ಮೇಲೆ ಯಷ್ಟಿಗೃಹವೆಂಬದೊಂದು ಗ್ರಾಮವದೆ. ಈ ಊರಿಂದ ಮುಂದಕ್ಕೆ ಹೋದರೆ ಶ್ರೀಕಂಠವೆಂಬ ದೇಶವದೆ. ಆ ನಾಡೊಳಗೆ ಹರ್ಷರಾಜನ ರಾಜಧಾನಿಯಿತ್ತು. ಬಾಣಕವಿಯು ಆ ಹರ್ಷರಾಜನ ಆಶ್ರಯದಲ್ಲಿದ್ದನು. ಸನ್ ೬೫೦ ನೇ ಇಸವಿಯಲ್ಲಿ ಬಾಣನು ಜೀವಂತನಿದ್ದನೆಂಬದಾಗಿ ಒಂದು ಇತಿಹಾಸದಿಂದ ತಿಳಿಯಬಂದಿದೆ.

ಬಾಣಕವಿಯು 'ಕಾದಂಬರಿ,' 'ಹರ್ಷಚರಿತ,' 'ಚಂಡಿಕಾಶತಕ,' 'ಪಾರ್ವತೀಪರಿಣಯನಾಟಕ,' 'ರತ್ನಾವಲೀನಾಟಕ,' ಎಂಬ ಐದು ಗ್ರಂಥಗಳನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದನು. ಈ ಐದು ಗ್ರಂಥಗಳಲ್ಲಿ ಕಾದಂಬರೀ ಗ್ರಂಥವೇ ಲೋಕದಲ್ಲಿ ಬಹು ಪ್ರಸಿದ್ಧ. ಇದು ಸಂಪೂರ್ಣ ಗದ್ಯರೂಪವದೆ. ಇದರೊಳಗೆ ಅತಿ ಮನೋಹರವಾದ ಕಥೆಯುಂಟು. ಈ ಕಥೆಯೊಳಗೆ ಕಾದಂಬರಿಯೆಂಬ ಗಂಧರ್ವಕನ್ನಿಕೆಯು ನಾಯಿಕೆಯಿರುವದರಿಂದ, ಕವಿಯು ಈ ಗ್ರಂಥಕ್ಕೆ ಕಾದಂಬರಿಯೆಂತಲೇ ಹೆಸರಿಟ್ಟಿರುವನು.

ಈ ಕಾವ್ಯದಲ್ಲಿ ಸಂಸ್ಕೃತ ಭಾಷೆಯೊಳಗಿನ ಯಾವತ್ತೂ ಅಲಂಕಾರಗಳೂ ಗುಣಗಳೂ ಉಂಟು. ಶೃಂಗಾರ ಕರುಣಾರಸಗಳಂತೂ ತಾವೇ ಮೂರ್ತಿಮತ್ತಾಗಿವೆ; ಅದು ಹಾಸ್ಯವೂ ತಕ್ಕಮಟ್ಟಿಗೆ ಉಂಟು; ನಡುನಡುವೆ ನೀತಿಯ ಉಪದೇಶಗಳುಂಟು; ಸಂವಿಧಾನ ಸಾಧಿಸಿದ ಕಲ್ಪನೆಗೆ ವಿದ್ವಾಂಸರು ತಲೆದೂಗುತ್ತಾರೆ. ಬಣ್ಣಿಸುವ ಲೋಕೋತ್ತರವಾದ ರೀತಿಯು ಬಾಣನಿಗೇ

* ಈ ಮಯೂರನು ಮುಂದೆ ಪ್ರಸಿದ್ಧ ಕವಿಯಾದನು. ಇವನು ರಚಿಸಿದ ಸೂರ್ಯಶತಕವೆಂಬ ಕಾವ್ಯವು ಇಂದಿಗೂ ಪ್ರಸಿದ್ಧವದೆ.

ಸಲ್ಲುವದೆಂಬದು "ಬಾಣೋಚ್ಛಿಷ್ಟಂ ಜಗತ್ಸರ್ವಂ" ಎಂಬ ವಚನದ ಮೇಲಿಂದಲೇ ಕಂಡುಬರುತ್ತದೆ. ಗೀರ್ವಾಣಭಾಷೆಯು ಮೊದಲೇ ಮನೋಹರವು; ಅದರೊಳಗೆ *ಬಾಣನಂಥ ಬಾಣನ ಕೈವಶವಾದ ಬಳಿಕ ಕೇಳುವದೇನು!

ಈ ಗ್ರಂಥದಲ್ಲಿ ಎರಡು ಭಾಗಗಳಿವೆ; ಅವು ಕವಿಯಿಂದಾಗಲಿಲ್ಲ; ಕಾಲನಿಂದಾದವು! ತುಸು ಹೆಚ್ಚುಕಡಿಮೆ ಮುಕ್ಕಾಲುವರೆಗೆ ಈ ಕಾವ್ಯವು ಆಗಿತ್ತು. ಅಷ್ಟರೊಳಗೆ ಬಾಣನನ್ನು ಕಾಲನು ಒಮ್ಮಿಂದೊಮ್ಮೆಲೆ ಒಯ್ದನು.

ಬಳಿಕ ಬಾಣನ ಮಗನು ಅಷ್ಟಕ್ಕೆ 'ಪೂರ್ವಾರ್ಧ'ವೆಂದು ಹೆಸರಿಟ್ಟು ಮುಂದೆ ತಾನು 'ಉತ್ತರಾರ್ಧ'ವನ್ನು ರಚಿಸಿ, ಕಾದಂಬರೀ ಕಾವ್ಯವನ್ನು ಮುಗಿಸಿದನು. ತಂದೆಯ ವರ್ಷಶ್ರಾದ್ಧವಾಗುವದರೊಳಗೆ ಮುಗಿಸಬೇಕೆಂದು ಸಂಕಲ್ಪಮಾಡಿ, ಅದರಂತೆ ಮುಗಿಸಿದನೆಂದು ಹೇಳುತ್ತಾರೆ. ಈ ಸಂಪೂರ್ಣ ಗ್ರಂಥವು ತನ್ನ ತಂದೆಯ ಹೆಸರಿನಿಂದ ಪ್ರಸಿದ್ಧವಾಗಲೆಂಬ ಮನಸ್ಸಿನಿಂದ ಆತನು ಉತ್ತರಾರ್ಧದಲ್ಲೆಲ್ಲಿಯೂ ತನ್ನ ಹೆಸರು ತಂದಿಲ್ಲ. ಇದು ಆತನ ವಿನಯಗುಣಕ್ಕೂ ಪಿತೃಭಕ್ತಿಗೂ ಭೂಷಣವೇ ಸರಿ.

ಈ ಕಾದಂಬರೀ ಕಥೆಯನ್ನು ಆರಂಭದಿಂದ ಕಡೆತನಕ ಓದಿ, ಇದರೊಳಗೆ ಸಾಧಿಸಿದ ಸಂವಿಧಾನಕವನ್ನು ಸ್ಮರಣೆಗೆ ತಂದರೆ ಮನಸ್ಸಿಗೆ ಆನಂದವೂ, ಆಶ್ಚರ್ಯವೂ ಆಗದೆ ಇರದೆಂದು ಸ್ವಾನುಭವದಿಂದ ಹೇಳುತ್ತೇವೆ. ಎಷ್ಟು ಸಾರೆ ಓದಿದರೂ ಮತ್ತೂ ಓದಬೇಕೆನಿಸುವಂಥ ಚಮತ್ಕಾರಿಕವಾದ ಸಂವಿಧಾನಕವೂ, ವರ್ಣನೆಗಳೂ ಇದರಲ್ಲಿ ಉಂಟು. ಈ ಮೇರೆಗೆ ಅನೇಕ ಗುಣಗಳಿಂದ ರಮಣೀಯವಾದುದರಿಂದಲೂ, ಈ ಗ್ರಂಥವು ಹನ್ನೆರಡು ನೂರು ವರ್ಷಗಳ ಪೂರ್ವದಲ್ಲಿ ಹುಟ್ಟಿದ್ದರಿಂದಲೂ, ಓದುವವರಿಗೆ ಪ್ರಾಚೀನ ಕವಿಗಳ ಕಲ್ಪನೆಗಳೂ, ಆ ಕಾಲದ ಅರಸರ ಐಶ್ವರ್ಯ, ನಡೆನುಡಿ ಮುಂತಾದವುಗಳೂ ಇದರಿಂದ ತಿಳಿಯಬಂದ ಹಾಗೆ ಮತ್ತೊಂದರಿಂದ ಬಾರವೆಂಬದಕ್ಕೆ ಅಡ್ಡಿ ಇಲ್ಲ.

---

* ಜಾತಾ ಶಿಖಂಡಿನೀ ಪ್ರಾಕ್ ಶಿಖಂಡೀ ತಥಾವಗಚ್ಛಾಮಿ ॥
ಪ್ರಾಗಲ್ಭ್ಯಮಧಿಕಮಾಪ್ತುಂ ವಾಣೀ ಬಾಣೋ ಬಭೂವೇತಿ ॥ ೧ ॥

ಅರ್ಥ— ಪೂರ್ವದಲ್ಲಿ ಶಿಖಂಡಿನಿಯು ಶಿಖಂಡಿಯಾದಂತೆಯೇ ವಾಣಿಯು (ಸರಸ್ವತಿಯು) ಹೆಚ್ಚಿಗೆ ಜಾಣತನ ಬರಲೆಂದು ತಾನೇ ಬಾಣಕವಿಯಾದಳೆಂದು ತಿಳಿಯುತ್ತೇನೆ.

ಇಂಥ ಸಂಸ್ಕೃತ ಕಾದಂಬರಿಯೊಳಗಿನ ಅತಿ ಮನೋಹರವಾದ ಕಥೆಯನ್ನು ನಮ್ಮ ದೇಶಬಾಂಧವರ ಸಲುವಾಗಿ ಕನ್ನಡಿಸಿ, ಸ್ವಲ್ಪದರೊಳಗೆ ಬರೆದಿದ್ದೇನೆ. ಇದು ಮೂಲಗ್ರಂಥದ ಚತುರ್ಥಾಂಶವಾದೀತು. ಇದರಲ್ಲಿ ರಾಜವೈಭವದ ವರ್ಣನೆ, ವಿಂಧ್ಯಾಟವೀವರ್ಣನೆ, ಅಗಸ್ತ್ಯಋಷಿಯು ಹೆಂಡತಿ ಲೋಪಾಮುದ್ರೆಯು ಬೆಳೆಸಿದ ವನದ ವರ್ಣನೆ, ಪಂಚವಟಿಯಲ್ಲಿ ಸೀತಾರಾಮಲಕ್ಷ್ಮಣರು ಇದ್ದಾಗಿನ ವೃತ್ತಾಂತ, ಪಂಪಾಸರೋವರದ ಹತ್ತಿರ ಸಪ್ತತಾಳವೃಕ್ಷಗಳ ನೆರೆಯಲ್ಲಿದ್ದ ಶಾಲ್ಮಲೀವೃಕ್ಷದ ವರ್ಣನೆ, ಮಾತಂಗ ಮುಂತಾದ ಕಿರಾತರ ಬೇಟೆಯ ವರ್ಣನೆ, ಜಾಬಾಲಿ ಮುಂತಾದ ಮಹಾ ಮಹಾ ಋಷಿಗಳು ಇದ್ದ ತಪೋವನದ ವರ್ಣನೆ, ಚಂದ್ರಾಪೀಡನ ವಿದ್ಯಾಭ್ಯಾಸ, ಚಂದ್ರಾಪೀಡನು ವಿದ್ಯಾಮಂದಿರದಿಂದ ಬರುವಾಗ ಉಜ್ಜಯಿನಿಯ ಶೋಭೆಯು, ಚಂದ್ರಾಪೀಡನಿಗೆ ಶುಕನಾಸನು ಉಪದೇಶ ಮಾಡಿದ ರಾಜನೀತಿ, ಅಚ್ಛೋದ ಸರೋವರದ ವರ್ಣನೆ, ಮಹಾಶ್ವೇತೆಯೆಂಬ ಗಂಧರ್ವಕನ್ನಿಕೆಗೆ ಮೋಹಿತನಾದ ಪುಂಡರೀಕನೆಂಬ ಮಿತ್ರನನ್ನು ಅಸನ್ಮಾರ್ಗದೊಳಗಿಂದ ಉಳಿಸಿಕೊಳ್ಳಬೇಕೆಂದು ಕಪಿಂಜಲಋಷಿಯು ಅಂತಃಕರಣಪೂರ್ವಕ ಮಾಡಿದ ಪ್ರಯತ್ನ, ಮಹಾಶ್ವೇತೆಯ ಪಾತಿವ್ರತ್ಯಪ್ರಭಾವ, ಗಂಧರ್ವಲೋಕದ ಕಾದಂಬರೀ ಕನ್ಯಾಂತಃಪುರದ ವರ್ಣನೆ, ಹಿಮಗೃಹದ ವರ್ಣನೆ, ಕಾದಂಬರಿಯು ಮನೋರಥ ಕೈಗೂಡಿದ ಸಂಗತಿ, ವೈಶಂಪಾಯನನೆಂಬ ಗಿಳಿಯ ಪರಿಣಾಮ, ಇಷ್ಟು ವಿಷಯಗಳುಂಟು.

ಮುಖ್ಯವಾಗಿ, ದೊಡ್ಡ ಮನಸ್ಸಿನ ಸ್ತ್ರೀಪುರುಷರು ತಮ್ಮ ಮಿತ್ರರಿಗೆ ಸಂಕಟ ಬಂದಾಗ, ತಾವು ಅವರ ಸಲುವಾಗಿ ಎಷ್ಟು ಕಷ್ಟಪಡುತ್ತಾರೆ, ಅವರಿಗೆ ಕಲ್ಯಾಣವಾಗುವ ಬಗ್ಗೆ ಎಷ್ಟು ಸಾಹಸಮಾಡುತ್ತಾರೆ, ಹಾಗು ಒಬ್ಬರಮೇಲೊಬ್ಬರು ಎಷ್ಟು ಪ್ರೀತಿಮಾಡುತ್ತಾರೆ ಎಂಬ ವಿಷಯದಲ್ಲಿಯೂ, ಪಾಪವಾಸನೆಯಿಂದ ಕೆಟ್ಟ ಪರಿಣಾಮವಾಗದೆ ಇರುವದಿಲ್ಲೆಂಬ ವಿಷಯದಲ್ಲಿಯೂ, ಆ ಪಾಪಪರಿಹಾರವಾಗುವದಕ್ಕೆ ದೇವರ ಧ್ಯಾನವೇ ಮುಖ್ಯವೆಂಬ ವಿಷಯದಲ್ಲಿಯೂ, ಈ ಗ್ರಂಥದಿಂದ ಚನ್ನಾಗಿಯೇ ಬೋಧವಾಗುವಂತಿರುವದು.

ಗಂಗಾಧರ ಮಡಿವಾಳೇಶ್ವರ,
ಗ್ರಂಥಕರ್ತ.

# ಪೀಠಿಕೆ

ಸಂಸ್ಕೃತ ಸಾಹಿತ್ಯದಲ್ಲಿ ಬಾಣನಿಗೆ ಮೊದಲಿನ ಯುಗ ಕಾವ್ಯಪ್ರಚುರವಾದ ಯುಗ; ಛಂದೋಬದ್ಧ ಕಾವ್ಯವೇ ಪಾಂಡಿತ್ಯದ ಒರೆಗಲ್ಲು! ಭಾಸ, ಸೌಮಿಲ್ಲ, ಕವಿಪುತ್ರ ಇವರೆಲ್ಲ ಆ ಯುಗಕ್ಕೆ ಸೇರಿದವರು. ಬಾಣನ ಸಮಯಕ್ಕೆ ಬರುವ ವೇಳೆಗೆ ಕಾವ್ಯದ ಪರಿಭಾಷೆಯಲ್ಲಿಯೇ ವ್ಯತ್ಯಾಸವಾಗಿರಬೇಕು, ಅಥವಾ ಮಹಾಕವಿಯ ಕೃತಿಯೊಂದು, ಪರಿಭಾಷೆಯಲ್ಲಿಯ ಈ ವ್ಯತ್ಯಾಸಕ್ಕೆ ಕಾರಣವಾಗಿರಬೇಕು! ಅಂದಿನಿಂದ ಅಲಂಕಾರಯುಕ್ತವಾಗಿ ಛಂದೋಬದ್ಧವಾಗಿದ್ದ ಸಾಹಿತ್ಯ ಮಾತ್ರ ಕಾವ್ಯ ಎಂಬ ಕಲ್ಪನೆ ಅಳಿದು ಹೋಗಿ "ವಾಕ್ಯಂ ರಸಾತ್ಮಕಂ ಕಾವ್ಯಂ" (ರಸಪೂರ್ಣವಾದ ವಾಕ್ಯವೇ ಕಾವ್ಯ) ಎಂಬ ರಸ ಪಕ್ಷದವರ ಪರಿಭಾಷೆ ಬಾಣಕವಿಯ ಗದ್ಯಕ್ಕೆ ಬೆಂಬಲವಾಗಿ ನಿಂತಿದೆ.

ಕೇಳುವವರ ಕಿವಿಗೆ ಇಂಪಾಗುವಂತಹ ಸ್ವರಸಂಯೋಗ, ಅರ್ಥಾಲಂಕಾರ, ಶಬ್ದಾಲಂಕಾರ, ಛಂದಸ್ಸಿನ ನಿಯಮಗಳನ್ನೊಳಗೊಂಡಿರುವದು. ಕಾವ್ಯದ ಲಕ್ಷಣ ಎಂದು ನಾವು ಸುಮಾರಾಗಿ ತಿಳಿಯುವದು. 'ಕಾವ್ಯ' ಎನ್ನಿಸಿಕೊಳ್ಳುವದರಲ್ಲಿ ಭಾವನೆಯ ಅಂಶ ಹೆಚ್ಚು; ಗದ್ಯ ಎಂದು ಹೇಳಿಸಿಕೊಳ್ಳುವದರಲ್ಲಿ ವಿಚಾರದ ಅಂಶ ಹೆಚ್ಚು. ಆದರೆ ಬಾಣನ ಗದ್ಯ ಇದಕ್ಕೆ ಅಪವಾದ. ಅಲ್ಲಿ ಪಾಂಡಿತ್ಯವೂ ಇದೆ, ಕವಿಯ ಕಲ್ಪನೆಯೂ ಇದೆ. ಆದರೆ ಛಂದಸ್ಸಿನ ನಿಯಮಗಳನ್ನು ಮಾತ್ರ ಅನುಸರಿಸದೆ, "ಗದ್ಯಂ ಕವೀನಾಂ ನಿಕಷಂ ವದಂತಿ", (ಗದ್ಯವೇ ಕವಿಗಳ ಒರೆಗಲ್ಲು) ಎಂದು ಸಾರಹಚ್ಚಿದ ಮಹಾಕವಿ ಬಾಣ! ಈ ಕವಿಯ ಬಗ್ಗೆ ಆ ಕಾಲದಲ್ಲಿ ಪ್ರಚಲಿತವಿದ್ದ ಒಂದು ಕಥೆ (ಕಥೆ ಕಲ್ಪಿತವಿರಬಹುದು) ಯನ್ನು ನೋಡಿದರೆ, ಬಾಣಕವಿಯ ಅದ್ಭುತ ಪಾಂಡಿತ್ಯದ ಬಗ್ಗೆ, ಜನರಲ್ಲಿದ್ದ ಆದರ ವ್ಯಕ್ತವಾಗುವದು.

ಜಾತಾ ಶಿಖಂಡಿನೀ ಪ್ರಾಕ್ ಯಥಾ ಶಿಖಂಡೀ ತಥಾವಗಚ್ಛಾಮಿ।
ಪ್ರಾಗಲ್ಭ್ಯಮಧಿಕಮಾಪ್ತುಂ ವಾಣೀ ಬಾಣೋ ಬಭೂವೇತಿ॥

(ಪೂರ್ವದಲ್ಲಿ ಶಿಖಂಡಿಯು ಶಿಖಂಡಿನಿಯಾದಂತೆಯೇ ವಾಣಿಯು ಹೆಚ್ಚಿನ ಪಾಂಡಿತ್ಯವನ್ನು ಪಡೆಯಲು, ಬಾಣಕವಿಯಾದಳೆಂದು ತಿಳಿಯುತ್ತೇನೆ)

# ಕನ್ನಡ ಸಾಹಿತ್ಯದ ಪ್ರಾಚೀನತೆ

ಒಂಬತ್ತನೆಯ ಶತಮಾನದಲ್ಲಿ, ರಾಷ್ಟ್ರಕೂಟರ ಆಶ್ರಯದಲ್ಲಿ ' ಕವಿರಾಜ ಮಾರ್ಗ ' ವೆಂಬ ಲಕ್ಷಣಗ್ರಂಥವೇ ಕನ್ನಡ ಸಾಹಿತ್ಯದಲ್ಲಿ ನಮಗೆ ಇದುವರೆಗೆ ಉಪಲಬ್ಧವಿರುವ ಮೊದಲನೆಯ ಗ್ರಂಥ; ಆದರೆ ವ್ಯಕ್ತವಾದ ಪುಷ್ಟ ಸಾಹಿತ್ಯವಿಲ್ಲದೆ, ಲಕ್ಷಣಗ್ರಂಥದ ರಚನೆಯಾಗಲಾರದೆಂಬುದೂ ಅಷ್ಟೇ ಸತ್ಯ. ಮೊದಲು ಉದಾಹರಣೆ, ಆ ಮೇಲೆ ನಿಯಮ! ಹೀಗಿದ್ದೂ ಇದಕ್ಕೆ ಮೊದಲಿನ, ಸಾಹಿತ್ಯ ಗ್ರಂಥ ದೊರೆಯದಿರುವದು ಶೋಚನೀಯ ; ೭ ನೆಯ ಶತಮಾನದ ಬಾದಾಮಿಯ ಶಾಸನದಲ್ಲಿ ಕನ್ನಡದ ಜನಪದ ಛಂದಸ್ಸಿನ, ತ್ರಿಪದಿಯನ್ನು ನಾವು ಕಾಣುತ್ತೇವೆ. ಇದಕ್ಕೂ ಹಿಂದೆ ಹೋದರೂ ಶಿಲಾಲೇಖದ ಹೊರತು ನಮಗೆ ಬೇರೇನೂ ಇದುವರೆಗೆ ದೊರೆತಿಲ್ಲ. ಅಂತೂ ಕನ್ನಡದಲ್ಲಿ ಗ್ರಂಥರಚನೆಯಾಗುವ ಹೊತ್ತಿಗೆ ಸಂಸ್ಕೃತದ ಪ್ರಾಬಲ್ಯ-ಪ್ರಭಾವಗಳು ಭರತಖಂಡದಲ್ಲಿ ತಾವೇ ತಾವಾಗಿ ಹಬ್ಬಿದವು. ಅದರ ಪ್ರಭಾವದಿಂದಲೋ ಏನೋ- ಭರತ-ಖಂಡದ ಎಲ್ಲ ಭಾಷೆಗಳಿಗೂ- ಹಾಗೇ ಕನ್ನಡಕ್ಕೂ- ಸಂಸ್ಕೃತವೇ ಮೂಲ-ವೆಂಬ ಅನುಮಾನ ಇತ್ತೀಚಿಗೂ ಬಂದದ್ದು. ಸಂಸ್ಕೃತ, ಕನ್ನಡ ಭಾಷೆಯ ಹೆತ್ತತಾಯಿಯಾಗದೆ ಹೋದರೂ, ಸಾಕುತಾಯಿ ಮಾತ್ರ ನಿಶ್ಚಿತ. ಸಂಸ್ಕೃತದ ಕೋಶದಿಂದ ಅಸಂಖ್ಯ ಶಬ್ದಗಳನ್ನು ಬಳಸಿಕೊಂಡು ಕನ್ನಡದ ಕೋಶ ಪುಷ್ಟವಾಗಿದೆ

## ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ ಸಾಹಿತ್ಯದ ಪ್ರಭಾವ

ಸಂಸ್ಕೃತ ಸಾಹಿತ್ಯ, ಕಾವ್ಯದ ಸೀಮೆಯನ್ನು ದಾಟಿ ಪ್ರೌಢ ಗದ್ಯಪ್ರಬಂಧಗಳಲ್ಲಿ ಕಾಲಿಕ್ಕಿದಾಗ, ಕನ್ನಡದಲ್ಲಿ ಗ್ರಂಥರಚನೆ ಪ್ರಾರಂಭವಾಯಿತು. ಕನ್ನಡದ ಕವಿಗಳು, ಲೇಖಕರು, ಸಂಸ್ಕೃತದ ವಿಷಯವನ್ನೂ, ಮಾರ್ಗವನ್ನೂ ಅನುಕರಿಸಿದರು. ಮಹಾಭಾರತದ ಮಹಾವೃಕ್ಷದಲ್ಲಿ ಅನೇಕ ಪಕ್ಷಿಗಳು ಗೂಡುಗಟ್ಟಿ ಇದ್ದಂತೆ, ಅಪಾರವಾದ ಸಂಸ್ಕೃತ ಸಾಹಿತ್ಯದಲ್ಲಿ, ಕನ್ನಡದ ಪಕ್ಷಿಗಳೂ ಗೂಡುಕಟ್ಟಿದುವು ಕವಿಗಳು ಕಾವ್ಯಕ್ಕೆ ವಸ್ತುವನ್ನು ಆಯ್ದುಕೊಂಡರು; ಕೆಲವರು ಸಂಸ್ಕೃತ, ಪ್ರಾಕೃತ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದರು. ಸಂಸ್ಕೃತ ಸಾಹಿತ್ಯದ ಅನುಕರಣ ಕನ್ನಡದಲ್ಲಿ ಹೆಮ್ಮೆಯ ವಿಷಯವಾಯಿತು.

ಭಾಸ, ಕಾಲಿದಾಸರ ಪ್ರಸಾದಯುಕ್ತ ಕೃತಿಗಳನ್ನು ಸಂಸ್ಕೃತ ಸಾಹಿತ್ಯ ನಮಗೆ ಕೊಟ್ಟಿದ್ದರೂ, ಕನ್ನಡದಲ್ಲಿ ಗ್ರಂಥರಚನೆಯಾಗುವ ಕಾಲಕ್ಕೆ ಇವರ ಯುಗ ಹಿಂದೆಬಿದ್ದು ಬಾಣ, ಮಾಘರ ಕಾಲ ಸನ್ನಿಹಿತವಾಗಿತ್ತು. ಧರ್ಮ, ನೀತಿ, ರಸಾಭಿವ್ಯಕ್ತಿಗಳಿಗೆ ಕಾವ್ಯದಲ್ಲಿ ಸ್ಥಳ ಕಡಿಮೆಯಾಗಿ, ಶಬ್ದಾಲಂಕಾರ, ಅರ್ಥಾಲಂಕಾರಗಳು ಆ ಸ್ಥಾನವನ್ನು ಆಕ್ರಮಿಸಿದ್ದವು. ‘ಚಂಪೂ’ ಕಾವ್ಯದ ಶೈಲಿ, ದ್ರಾವಿಡರು ಸಂಸ್ಕೃತಕ್ಕಿತ್ತ ಕಾಣ್ಕೆಯೆಂದು ಪ್ರತಿಪಾದಿಸಬಹುದಾದರೂ, ಕನ್ನಡ ಕವಿಗಳ ಚಂಪೂ ಕೃತಿಗಳನ್ನು ತೆರೆದೋದಿದರೆ, ಸಂಸ್ಕೃತದ ಅಭಿರುಚಿಯ ಪ್ರಭಾವ—ಔಚಿತ್ಯವರಿಯದ ವರ್ಣನೆ, ಕವಿಸಮಯ, ಅಲಂಕಾರಗಳು – ಸ್ಪಷ್ಟವಾಗಿ ಕಂಡುಬರುವವು ಚಂಪುವಿನ ಗದ್ಯಶೈಲಿಗೆ ಬಾಣನೇ ಮುಖ್ಯ ಕಾರಣ. ಬಳಿಕ ಬಾಣನ, ‘ಕಾದಂಬರಿ’ ಕನ್ನಡಕ್ಕೆ ಪರಿವರ್ತಿತವಾಗುವಲ್ಲಿ ಹೆಮ್ಮೆ ಇರದೇನು !

## ಬಾಣಕವಿಯ ಪರಿಚಯ

ಉತ್ತರ ಭಾರತವನ್ನು ಏಕಛತ್ರಾಧಿಪತ್ಯದಿಂದ ಆಳುತ್ತಲಿದ್ದ ಶ್ರೀಹರ್ಷ ಚಕ್ರವರ್ತಿಯ ಆಸ್ಥಾನಕವಿ ಬಾಣ; ಶ್ರೀಹರ್ಷನ ಕಾಲ ಕ್ರಿ. ಶ. ೬೦೬ ರಿಂದ ೬೪೭. ಉತ್ತರದಲ್ಲಿ ಶ್ರೀಹರ್ಷನ ಆಧಿಪತ್ಯವಾದರೆ ದಕ್ಷಿಣದಲ್ಲಿ ಪುಲಿಕೇಶಿಯ ಆಧಿಪತ್ಯ. ದಕ್ಷಿಣಕ್ಕೆ ಬಂದಾಗ ಪರಾಕ್ರಮಶಾಲಿಯಾದ ಶ್ರೀಹರ್ಷನನ್ನು ವಿಗಲಿತಹರ್ಷನನ್ನಾಗಿ ಮಾಡಿದ ಶ್ರೇಯಸ್ಸು ಈ ಪುಲಿಕೇಶಿಯದು ! ಉತ್ತರದ ಸಮ್ರಾಟ್ ಶ್ರೀಹರ್ಷನು ಕಲಿಯೂ ಅಹುದು, ಕವಿಯೂ ಅಹುದು. ರತ್ನಾವಲಿ (‘ಮಿತ್ರವಿಂದಾ ಗೋವಿಂದ’ ಎಂಬ ಹೆಸರಿನಿಂದ ಕನ್ನಡದಲ್ಲಿ ಪ್ರಕಟವಾದ ಮೊದಲ ನಾಟಕ), ಪ್ರಿಯದರ್ಶಿಕಾ, ನಾಗಾನಂದಗಳು, ಶ್ರೀಹರ್ಷನಿಂದ ರಚಿತವಾದವುಗಳೇ ಎಂದು ನಿರ್ಣಿತವಾಗಿದೆ. ಇಂತಹ ಕವಿಹೃದಯದ ಸಾಮ್ರಾಟನು ಬಾಣಕವಿಗೆ ಆಶ್ರಯವನ್ನಿತ್ತು ಪೋಷಿಸಿದುದು ಸಹಜವೇ. ಬಾಣಕವಿಯು ಅನೇಕ ಕೃತಿಗಳನ್ನು ರಚಿಸಿದ್ದರೂ, ಹೆಸರುವಾಸಿಯಾದುದು ‘ಕಾದಂಬರಿ’, ‘ಹರ್ಷಚರಿತ’ ಗಳೆರಡರಿಂದಲೇ. (ಪಾರ್ವತೀಪರಿಣಯವೆಂಬ ನಾಟಕವೂ ಬಾಣಕವಿಯಿಂದಲೇ ರಚಿತವಾದುದೆಂಬ ಪ್ರತೀತಿಯಿದೆ). ಕವಿಯು ತನ್ನ ವಿಚಾರವಾಗಿ ‘ಕಾದಂಬರಿ’ಯಲ್ಲಿ ಸಂಗ್ರಹವಾಗಿಯೂ, ‘ಹರ್ಷಚರಿತ’ದಲ್ಲಿ ವಿಸ್ತಾರವಾಗಿಯೂ ಹೇಳಿಕೊಂಡಿದ್ದಾನೆ.

ಬಾಣನ ಆತ್ಮಕಥೆ ಸಾಮಾನ್ಯ ವ್ಯಕ್ತಿಯ ಕಥೆಯಲ್ಲ. ಕಾದಂಬರಿ, ಹರ್ಷ ಚರಿತಗಳಲ್ಲಿ ರೂಪುಗೊಂಡಿರುವ ಬಾಣನ ಕಥನಕೌಶಲ್ಯಕ್ಕೆ, ವಿವಿಧ ವರ್ಣನೆ ಗಳಿಗೆ, ಬಾಣನ ಆತ್ಮಕಥೆಯೂ ಪೋಷಕವಾಗಿದೆ ಎಂಬ ಮಾತು ಸತ್ಯವೇ. ಬಾಣನ ಜನ್ಮ ಹೆಸರುಪಡೆದ ಒಂದು ಬ್ರಾಹ್ಮಣ ಮನೆತನದಲ್ಲಾಯಿತು. ತಂದೆಯ ಹೆಸರು ಚಿತ್ರಭಾನು, ತಾಯಿಯ ಹೆಸರು ರಾಜದೇವಿ. ಬಾಣನು ಹುಟ್ಟಿದ ಸ್ವಲ್ಪ ಸಮಯದಲ್ಲೇ ತಾಯಿ ತೀರಿಹೋದಳು. ತಂದೆಯೇ ಮಗುವನ್ನು ಪ್ರೀತಿಯಿಂದ ಬೆಳೆಸಿ ವಿದ್ಯೆ ಕಲಿಸಿದನು. ಆದರೆ ತಂದೆಯ ವಾತ್ಸಲ್ಯವೂ ಬಾಣನಿಗೆ ಬಹುಕಾಲ ದೊರೆಯಲಿಲ್ಲ. ಬಾಣನು ಹದಿನಾಲ್ಕು ವರುಷದವನಿರುವಾಗಲೇ ತಂದೆಯೂ ಇಲ್ಲವಾದನು. 'ಕಾದಂಬರಿ' ಯಲ್ಲಿ ಬರುವ ಗಿಳಿಮರಿ ಇಂತಹ ಪ್ರಸಂಗಗಳನ್ನೇ ಎದುರಿಸಬೇಕಾಗಿರುತ್ತದೆ. ಅದರ ದುಃಖವನ್ನು ಮರ್ಮಭೇದಕವಾಗಿ, ಕೇಳುಗರ ಕಣ್ಣಲ್ಲಿ ನೀರೂರುವಂತೆ ಚಿತ್ರಿಸಿದ್ದಾನೆ ಕವಿ! ಹೀಗೆ ಅನಾಥನಾದ ಕವಿ ಏನೂ ಮಾಡಲು ತೋಚದೆ ಕೆಲವು ಕಾಲ ಮನೆಯಲ್ಲಿದ್ದನು. ಆದರೆ ಆತನ ಶಕ್ತಿ, ಪ್ರತಿಭೆ, ಯೌವನಾ ರಂಭದ ಹುರುಪು, ಅವನನ್ನು ಬಹುಕಾಲ ಒಳಗಿಡಬಲ್ಲವೇ? ಯೌವನೋಚಿತ ಚಾಪಲ್ಯಗಳಿಗೆ ಈಡಾಗಿ, ಬಾಣ ಹೊರಹೊರಟನು. ಜೊತೆಗೆ ತಂದೆಯ ಆಸ್ತಿ ಅವನಿಗೆ ಸಾಕಷ್ಟಿತ್ತು. ಬಾಣನನ್ನೂ ಅವನ ಆಸ್ತಿಯನ್ನೂ ಮೆಚ್ಚಿದ ಗೆಳೆಯರ ತಂಡ ದೊಡ್ಡದಿತ್ತು. ಕವಿಗಳು, ವೈದ್ಯರು, ಪಂಡಿತರು, ಚಿತ್ರ ಕಾರರು, ನರ್ತಕಿಯರು, ಭಿಕ್ಷುಗಳು, ಸನ್ಯಾಸಿಗಳು ಎಲ್ಲರೂ ಅದರಲ್ಲಿ ಸೇರಿದ್ದರು. ಬಾಣ ಬುದ್ಧಿಶಾಲಿ, ಪಂಡಿತ; ವೇದೋಪನಿಷತ್ತುಗಳನ್ನು ಆಗಲೇ ಓದಿ ತಿಳಿದಿದ್ದನು. ತನ್ನ ಸಂಗಡಿಗರ ಜೊತೆಯಲ್ಲಿ ಬಾಣ, ರಾಜ-ಸ್ಥಾನಗಳನ್ನೂ, ಗುರುಕುಲಗಳನ್ನೂ ಸಂದರ್ಶಿಸುತ್ತ, ವಿದ್ವಜ್ಜನರ ಚರ್ಚೆಯಲ್ಲಿ ಭಾಗವಹಿಸುತ್ತ, ದೇಶಪರ್ಯಟನವನ್ನು ಪ್ರಾರಂಭಿಸಿದನು. ಕೆಲಕಾಲದ ಮೇಲೆ ಬಾಣನ ಕೀರ್ತಿ ಶ್ರೀಹರ್ಷನ ಕಿವಿಯವರೆಗೂ ಹೋಯಿತು. ಶ್ರೀಹರ್ಷನ ಆಸ್ಥಾನದಲ್ಲಿದ್ದ ಕೆಲವರು ಅಸೂಯೆಯಿಂದ ಬಾಣನ ಸ್ವತಂತ್ರವೃತ್ತಿಯನ್ನು ಆಡಿಕೊಂಡರು ಕೂಡ. ಆದರೆ ಶ್ರೀಹರ್ಷನ ತಮ್ಮ ಕೃಷ್ಣ, ಗುಣಗ್ರಾಹಿ. ಬಾಣನ ಪಾಂಡಿತ್ಯದ ವಿಚಾರವಾಗಿ ಅಣ್ಣನಿಗೆ ಹೇಳಿ, ಅವನನ್ನು ಆಸ್ಥಾನಕ್ಕೆ ಕರೆಸಿಕೊಂಡನು. ಕೃಷ್ಣನ ದೂತರು ಬಾಣನ ಬಳಿಗೆ ರಾಜನ ಕರೆಸಹಿತ ಬಂದದ್ದು, ಅವನೊಡನೆ ತಾನು ಮಾಡಿದ ಸಂಭಾಷಣೆ, ಶ್ರೀಹರ್ಷನ

ಆಸ್ಥಾನಕ್ಕೆ ಹೊರಟಾಗಿನ ಪ್ರಯಾಣ, ರಾಜನ ದರ್ಶನ, ಸಂಭಾಷಣೆ, ಇವು ಗಳನ್ನೆಲ್ಲ ಕುರಿತು ಕವಿ ವಿಸ್ತಾರವಾಗಿ ಹೇಳಿದ್ದಾನೆ. ಇವುಗಳ ಛಾಯೆಯೇ ಶೂದ್ರಕರಾಜನ ದರ್ಶನ, ವರ್ಣನೆಗಳಲ್ಲಿ, 'ಕಾದಂಬರಿ' ಯಲ್ಲಿ ಕಂಡು ಬರುವದು. ಶ್ರೀಹರ್ಷನು ಬಾಣನ ನಡತೆಯನ್ನೂ, ವಿದ್ವತ್ತೆಯನ್ನೂ ಕಂಡು ಸಂತೋಷಪಟ್ಟು, ಅವನನ್ನು ಆಸ್ಥಾನಕವಿಯನ್ನಾಗಿ ಮಾಡಿದನು ಶ್ರೀಹರ್ಷ ಬಾಣರಲ್ಲಿ ಸ್ನೇಹ ಅಷ್ಟೊಂದು ಅಗಾಧವಾಗಿ ಬೆಳೆದದ್ದರ ಕುರುಹಾಗಿಯೋ ಏನೋ ಕೊನೆಗೆ ಬಾಣಕವಿಯು ಶ್ರೀಹರ್ಷನ ಹೆಸರಿನಲ್ಲಿ ನಾಟಕಗಳನ್ನು ಬರೆದನೆಂಬ ಮಾತೂ ಪ್ರಚಲಿತವಾಯಿತು!

## ಬಾಣಕವಿಯ ಶೈಲಿ

ಬಾಣಕವಿಯ ಶೈಲಿ ಅವನದೇ ಎಂಬ ಮಾತಿನ ಬಗ್ಗೆ ಭಿನ್ನಾಭಿಪ್ರಾಯ ವೆಲ್ಲಿಯೂ ಇದ್ದಂತೆ ಕಂಡುಬರುವದಿಲ್ಲ. ಶೈಲಿ ಅನುಕರಣೆಗೆ ಅಸಾಧ್ಯ (ಅನುಕರಣ ಯೋಗ್ಯವೋ ಎಂಬ ಮಾತು ಬೇರೆ) "ಪುರಾ ಕವೀನಾಂ ಗಣನಾಪ್ರಸಂಗೇ, ಕನಿಷ್ಠಿಕಾಧಿಷ್ಠಿತ ಕಾಲಿದಾಸಾ, ಅದ್ಯಾಪಿ ತತ್ತುಲ್ಯಕವೇರ ಭಾವಾದನಾಮಿಕಾ ಸಾರ್ಥವತೀ ಬಭೂವ---" ಎಂಬ ಮಾತು ಗದ್ಯ ಲೇಖಕರ ವಿಷಯದಲ್ಲಿ, ಬಾಣನಿಗೇ ಅನ್ವಯಿಸುವದು. ಬಾಣಕವಿಯ ವರ್ಣನೆಯ ಓಘ ಮಹಾಪ್ರವಾಹದಂತೆ ಧುಮ್ಮಿಕ್ಕುವದು. 'ಕಾದಂಬರಿ' ಯ ನಾಲ್ಕು ಪುಟಗಳನ್ನು ಒಂದೇ ಬಾರಿಗೆ ಓದಿ ಅರಗಿಸಿಕೊಳ್ಳಬಹುದಾದರೆ, ನಮ್ಮ ಪಾಂಡಿತ್ಯವನ್ನು ನಾವೇ ಹೊಗಳಿಕೊಳ್ಳಬಹುದು! ಅದರಲ್ಲಿ ಬರುವ ಅಲಂಕಾ ರಗಳು, ಪದವಿನ್ಯಾಸವೈಖರಿ, ಓದುಗರ ಮನವನ್ನು ಸೆಳೆಯುವವು. ರಮ್ಯ ವಾದ, ರಸ ಹೊರಸೂಸುವ ಅರ್ಥಾಲಂಕಾರಗಳೇನೋ ಸರಿಯೇ. ಆದರೆ ಜೊತೆಗೆ ಶಬ್ದಾಲಂಕಾರಗಳನ್ನೂ ನಿರ್ಮಿಸಲು, ಅರ್ಥವನ್ನು ಎಷ್ಟೋ ಸಂದ. ರ್ಭಗಳಲ್ಲಿ ಎಳೆದು ತರಬೇಕಾದ ಪ್ರಸಂಗವೂ ಬರುವದು, ಎಂದು ವಿಧಿಯಿಲ್ಲದೆ ಹೇಳಬೇಕಾಗುವದು. ಮಾನವನ ಹೃದಯದ ಆಳವನ್ನು ಹೊಕ್ಕು, ಸೂಕ್ಷ್ಮ ಭಾವನೆಗಳ ತೆರೆಗಳನ್ನು ಅರಿತುಕೊಂಡು ವರ್ಣಿಸುವಲ್ಲಿ ಬಾಣಕವಿ ನಿಸ್ಸೀಮ; ಪ್ರಕೃತಿ ಸೌಂದರ್ಯದ ಅಣುಗಳನ್ನೂ ಬಾಣ ಸಹೃದಯನ ಕಣ್ಣಿನಿಂದ ನಿರೀ- ಕ್ಷಿಸಿದ್ದಾನೆ. ವರ್ಣನೆ ಮಾಡಬಹುದಾದ ಯಾವುದೇ ಪ್ರಸಂಗವನ್ನು ವ್ಯರ್ಥ- ವಾಗಿ ಹೋಗಗೊಡುವದು ಬಾಣನ ಸ್ವಭಾವದಲ್ಲಿಯೇ ಇಲ್ಲ. "ಬಾಣೋ-

ಚ್ಛಿಷ್ಟಂ ಜಗತ್ಸರ್ವಂ," ಎಂಬ ಮಾತು ಅತಿಶಯೋಕ್ತಿಯಾಗಿ ಕಂಡರೂ, ಕೆಲಮಟ್ಟಿಗೆ ಸತ್ಯವಿದೆ.

ಬಾಣನು ನಿಸರ್ಗದತ್ತ ಪ್ರತಿಭೆಯಿಂದ ಕೂಡಿದ ಕವಿಯೂ ಅಹುದು. ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ಬುದ್ಧಿಚಮತ್ಕಾರವನ್ನು ತೋರಿಸಬಲ್ಲ ಪಂಡಿತನೂ ಅಹುದು; ಬುದ್ಧಿ, ಭಾವನೆಗಳೆರಡೂ ಇಷ್ಟೊಂದು ಉಚ್ಚಮಟ್ಟದಲ್ಲಿ ಸರಿದೊರೆಯಾಗಿ ಕೂಡಿದುದು ಇನ್ನೆಲ್ಲಿಯೂ ಕಂಡು ಬರದು. ಬಾಣನ ಕವಿಹೃದಯ ಯಾವುದೊಂದು ರಸಪ್ರತಿಪಾದನೆಗೆ ಹೊರಟರೆ, ಅವನ ಪಾಂಡಿತ್ಯ ಅಲ್ಲಿಯೇ ತಡೆದು ನಿಲ್ಲಿಸಿ ಮೇರೆಮೀರಿದ ವರ್ಣನೆಯ ಸೆಳವಿಗೆ ನೂಕಿಬಿಡುತ್ತದೆ.

ಬಾಣ ಕವಿ ಹುಟ್ಟು ಕಥೆಗಾರ. ಕಥೆಯನ್ನು ಸ್ವಾರಸ್ಯವಾಗಿ ಬಣ್ಣಿಸುವ ಶಕ್ತಿ ಅವನಲ್ಲಿ ಧಾರಾಳವಾಗಿದೆ. ಆದರೆ ವರ್ಣನೆ ಮುಂದೆ ಬಂದರೆ, ಕಥೆ ಹಿಂದೆ ಬಿದ್ದು ಓದುಗರ ಕುತೂಹಲವು ಸಪ್ಪೆಯಾಗಿಬಿಡುತ್ತದೆ. ವರ್ಣನೆ ಮಾಡುತ್ತಾ ಮಾಡುತ್ತಾ ಕವಿ ಎಲ್ಲಿಗೋ ಹೊರಟುಹೋಗಿ ಕೀರ್ತನಕಾರರಂತೆ ಮತ್ತೆ 'ಪ್ರಸ್ತುತ ವಿಷಯ,' ಎಂದು ಹಿಂದಿನ ಕಥೆಗೆ ಬರುತ್ತಾನೆ. ಆದರೆ ವರ್ಣನೆಯ ವಿಷಯ ಮಾತ್ರ ಕಣ್ಣೆದುರು ಕಟ್ಟಿದಂತೆ ಸ್ಪಷ್ಟವಾಗಿರುತ್ತದೆ. ಶಬ್ದಾರ್ಥಾಲಂಕಾರಗಳು, ವಿರೋಧಾಭಾಸಗಳು, ಇಂತಹ ವರ್ಣನೆಯ ಪ್ರಸಂಗದಲ್ಲಿ ಅಸಂಖ್ಯವಾಗಿ ಬಂದು ಒಂದೊಂದು ಸಲ ವರ್ಣ್ಯವಿಷಯದ ಸ್ಪಷ್ಟಚಿತ್ರಣದಲ್ಲಿಯೂ ವ್ಯತ್ಯಯವುಂಟಾಗುವ ಸಂಭವವಿರುತ್ತದೆ. ಶಾಲ್ಮಲೀವೃಕ್ಷವನ್ನು ವರ್ಣಿಸಹೊರಟ ಕವಿ, ಹೇಗೆ ಹೇಗೋ ರಾಮಾಯಣವನ್ನೂ, ಮಹಾಭಾರತವನ್ನೂ ಎಳೆದು ತಂದು ಬಿಡುತ್ತಾನೆ. ಎಷ್ಟೋ ಸಲ ಬೀಭತ್ಸವಾದ ಉಪಮೆಗಳೂ ಬಂದು ಸೇರಿ, ಓದುಗರಲ್ಲಿ ಜುಗುಪ್ಸೆಯುಂಟಾಗುತ್ತದೆ. "ದುರ್ಯೋಧನ ಇವೋಪಲಕ್ಷಿತ ಶಕುನಿಪಕ್ಷಪಾತಃ," ಎಂದು ಜೀರ್ಣ ಶಾಲ್ಮಲೀ ವೃಕ್ಷವನ್ನು ವರ್ಣಿಸಿದರೆ, ಅರಣ್ಯವನ್ನು ವರ್ಣಿಸಹೊರಟ ಕವಿ, 'ಪ್ರೇತಾಧಿಪನಗರೀವ ಸದಾ ಸನ್ನಿಹಿತಮೃತ್ಯುಭೀಷಣಾ,' ಎಂದು ಜುಗುಪ್ಸೆಯುಂಟಾಗುವಂತೆ ವರ್ಣಿಸಿಬಿಡುತ್ತಾನೆ. ಕವಿಯ ಈ ವರ್ಣನಾಪ್ರಿಯತೆ ಕಥಾರಚನೆಯಲ್ಲಿಯೂ, ಸಹೃದಯರ ಪೂರ್ಣ ರಸಾಸ್ವಾದದಲ್ಲಿಯೂ, ಆತಂಕವನ್ನು ತಂದೊಡ್ಡುತ್ತದೆ. ಅರ್ಥಾಲಂಕಾರ, ಶಬ್ದಾಲಂಕಾರಗಳು, ಉಪಮೆ ಉತ್ಪ್ರೇಕ್ಷೆಗಳು ಕಾವ್ಯದಲ್ಲಿ ಬರಬಹುದು. ಆದರೆ ಇವು ರಸಭಾವಕ್ಕೆ

ತಡೆಯನ್ನೊಡ್ಡ ಕೂಡದು. ಉಚಿತವಾದ ರಸಕ್ಕೆ ಇವು ಪೋಷಕವಾಗಿರಬೇಕು. ಅದೂ ಯೋಗ್ಯ ಪ್ರಮಾಣದಲ್ಲಿ ಇವುಗಳನ್ನು ಬೆರಸಿದರೆ, ಕಾವ್ಯ ಸಾಲಂಕೃತವಾಗಿ, ಕಳೆಗಟ್ಟಿ ಹೊರಸೂಸುತ್ತದೆ. 'ಪಂಡಿತ ಕವಿ' ಎಂದು ಬಾಣನಿಗೆ ಮರ್ಯಾದೆಯನ್ನು ಸಲ್ಲಿಸಬಹುದಾದರೂ, ಕವಿಯ ಈ ದೋಷವನ್ನು ಮಾತ್ರ ಒಪ್ಪಲೇಬೇಕು. ಬಾಣಕವಿ, ಎಷ್ಟೇ ಪಾಂಡಿತ್ಯವಿದ್ದರೂ, ಇಪ್ಪತ್ತನೆಯ ಶತಮಾನದಲ್ಲಿದ್ದರೆ ನಿಶ್ಚಯವಾಗಿಯೂ, ಹೀಗೆ ಬರೆಯುತ್ತಿರಲಿಲ್ಲ. ಅದು ಆ ಕಾಲದ ಸಾಹಿತ್ಯಾಭಿರುಚಿ; ಅಭಿರುಚಿಗೆ ತಕ್ಕ ಗ್ರಂಥವನ್ನು ರಚಿಸಿದೆನೆಂದು ಕವಿಯ ಹೆಮ್ಮೆ!! ಪಾಶ್ಚಾತ್ಯ ವಿದ್ವಾಂಸರೊಬ್ಬರು ಬಾಣಕವಿಯ ಶೈಲಿಯನ್ನು ದಟ್ಟವಾದ ಅಡವಿಗೆ ಹೋಲಿಸಿ ಬರೆದಿದ್ದಾರೆ: "Bana's prose is an Indian wood, where progress is impossible through the undergrowth until the traveller cuts out a path for himself and where even then he is confronted by malicious wild beasts in the shape of unknown words to terrify him." 'ಕಾದಂಬರಿ' ಯಲ್ಲಿ ಒಂದೊಂದು ವಾಕ್ಯ ದೀರ್ಘ ಸಮಾಸಗಳಿಂದ ಸಹಿತವಾಗಿ ಮೂರುನಾಲ್ಕು ಪುಟದುದ್ದಕ್ಕೂ ಓಡುತ್ತದೆ. 'ಸಮಾಸ' ದ ಉದ್ದೇಶ ಬಹಳ ಅರ್ಥವನ್ನು ಸ್ವಲ್ಪದರಲ್ಲಿ ವ್ಯಕ್ತಮಾಡುವದು. ಇಂತಹ ದೀರ್ಘ ಸಮಾಸಗಳನ್ನೇ ಬಾಣಕವಿ ಅಸಂಖ್ಯವಾಗಿ ಉಪಯೋಗಿಸಿದ್ದಾನೆ!

## 'ಕಾದಂಬರೀ' ಕಥೆಯ ಮೂಲ

ಈ ಕಥೆಯ ಮೂಲ, ಇಲ್ಲಿಯವರೆಗಿನ ವಿಚಾರದಿಂದ ತಿಳಿದು ಬಂದಂತೆ, ಗುಣಾಢ್ಯನ "ಬೃಹತ್ಕಥೆ" ಯಲ್ಲಿದೆ. ಭಾರತ ರಾಮಾಯಣಗಳಿಂದ, ಸಂಸ್ಕೃತ, ಕನ್ನಡ ಕವಿಗಳು ತಮ್ಮ ಕೃತಿಗಳಿಗೆ ವಸ್ತುಗಳನ್ನು ಆಯ್ದುಕೊಂಡಂತೆ, ಈ ಬೃಹತ್ಕಥೆಯಿಂದಲೂ ಆಯ್ದುಕೊಂಡಿದ್ದಾರೆ. ರಾಮಾಯಣ, ಭಾರತಗಳು ಸಂಸ್ಕೃತದಲ್ಲಿವೆ, ಪರಿಷ್ಕೃತವಾಗಿ ಬೆಳಕಿಗೆ ಬಂದಿವೆ. ಇವುಗಳಲ್ಲಿ ಬರುವ ಮೂಲ ಕಥೆಗೂ, ಈ ಕಥೆಯ ಆಧಾರದಿಂದ ರಚಿತವಾದ ನವೀನ ಕೃತಿಗೂ ಹೋಲಿಸಿ ತುಲನಾತ್ಮಕವಾಗಿ ಅಭ್ಯಾಸ ಮಾಡಬಹುದು. ಆದರೆ ಬೃಹತ್‌ಕಥೆಯ ವಿಷಯ ಹಾಗಲ್ಲ. ಅದು ಪೈಶಾಚೀ ಭಾಷೆಯಲ್ಲಿದೆ. (ಪಿಶಾಚಿಗಳು ಅಂದರೆ ಕಾಡುಜನರು ಎಂದರ್ಥವಿರಬೇಕು. ಆದರೆ ಇಂದು ಅದರ ಅರ್ಥ ಆಮೂಲಾಗ್ರ ಬದಲಾಗಿದೆ.) ಮತ್ತೆ ಆ ಗ್ರಂಥ ಈಗ

ದೊರೆಯುವಂತಿಲ್ಲ. ಆದರೆ ಇದೇ ಗ್ರಂಥವನ್ನೇ ಪರಿಷ್ಕರಿಸಿ, ಸಂಸ್ಕೃತದಲ್ಲಿ, ಸೋಮದೇವ 'ಕಥಾ ಸರಿತ್ಸಾಗರ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಬರುವ 'ಕಾದಂಬರೀ' ಕಥೆಯ ಆಧಾರದಿಂದ ಮೂಲಕಥೆ ಹೇಗಿದ್ದಿರಬೇಕೆಂದು ಊಹಿಸಬಹುದು. 'ಕಥಾ ಸರಿತ್ಸಾಗರ'ದ ಮಕರಂದಿಕೋಪಾಖ್ಯಾನದಲ್ಲಿ ( ಲಂಬಕ ೧೦–ತರಂಗ ೩ ) ಕಾದಂಬರೀ ಕಥೆಯ ಮೂಲ ನಮಗೆ ದೊರೆಯುತ್ತದೆ. ಬಾಣಕವಿಯ 'ಕಾದಂಬರಿ' ಕಥೆಯ ರಚನಾಶೈಲಿಗೂ ಇದಕ್ಕೂ ಮಹದಂತರ! ಬಾಣನ ಕೃತಿ ಅನುಚರರಿಂದೊಡಗೂಡಿ ಆತಪತ್ರಸಹಿತನಾಗಿ ಹೊರಟ ಸಮ್ರಾಟನಂತಿದ್ದರೆ, ಮೂಲ ಕಥೆಯೊಂದು ಆಶ್ರಮವಾಸಿಯಂತೆ!

ಕಾದಂಬರಿ ಒಂದು ಕಥಾಕಾವ್ಯ; ಆದರೆ ಈ ಕಾವ್ಯದ ವಸ್ತು ಸರಳವಾಗಿಲ್ಲ; ಅನೇಕ ತೊಡಕುಗಳಿವೆ. ಸಾಮಾನ್ಯ ಓದುಗನು ಕಥೆಯ ಸೂತ್ರವನ್ನು ಗುರುತಿಸದೆ ತೊಳಲಾಡುವುದು ನಿಶ್ಚಿತ. 'ಹುತ್ತದಲ್ಲಿ ಹುತ್ತ' ಎಂದು ಹೇಳುವಂತೆ ಕಥೆಯಲ್ಲಿ ಕಥೆಯಿದೆ ಇದರಲ್ಲಿ. ಕಥೆ, ವ್ಯಕ್ತಿಯ ಜೀವನದ ಒಂದು ಘಟನೆಯಾಗಿದ್ದರೆ, ಒಂದೇ ವ್ಯಕ್ತಿಯ ಜೀವನ ಕಥೆಯಾಗಿದ್ದರೆ, ಅದೂ ಹೋಗಲಿ, ಕೊನೆಗೆ ವ್ಯಕ್ತಿಯ ಒಂದೇ ಜನ್ಮದ ಕಥೆಯಾಗಿದ್ದರಾದರೂ ಸರಳವಾಗಬಹುದಾಗಿತ್ತೇನೊ! ಆದರೆ ಕಥೆ ಜನ್ಮಜನ್ಮಾಂತರಗಳ ತೊಡಕಿನಲ್ಲಿ ಸಿಕ್ಕಿಬಿದ್ದು, ತನ್ನ ಉದ್ದೇಶಸಾಧನೆಗೆ ಜನ್ಮಜನ್ಮಾಂತರಗಳ ಸಂಸ್ಕೃತಿಯ ಪರಿಪಾಕದ ಲಾಭ ಪಡೆಯುತ್ತದೆ.

'ಕಾದಂಬರಿ'ಯ ಕಥಾಸೂತ್ರವನ್ನು ತಿಳಿಯಲು ನಾವು ಕೆಲ ಸಂಗತಿಗಳನ್ನು ಲಕ್ಷ್ಯದಲ್ಲಿಡುವುದು ಅವಶ್ಯಕ. (೧) 'ಕಾದಂಬರಿ' ಈ ಕಥೆಯ ನಾಯಿಕೆ; ಚಂದ್ರಾಪೀಡ ನಾಯಕ; ಇವರೀರ್ವರ ಪ್ರಣಯಕಥೆಯೇ ಇಲ್ಲಿ ಮುಖ್ಯವಾಗಿ ಬಂದಿರುವುದು. ಇದರ ಜೊತೆಗೆ ಪುಂಡರೀಕ, ಮಹಾಶ್ವೇತೆಯರ ಪ್ರಣಯಕಥೆಯೂ ಬೆರೆತುಕೊಂಡು ಬಂದಿದೆ. (೨) ಕಾದಂಬರಿ, ಮಹಾಶ್ವೇತೆಯರು ದೇವಾಂಶಸಂಭೂತರು, ಕಾದಂಬರಿ ಗಂಧರ್ವಕನ್ಯೆ, ಮಹಾಶ್ವೇತೆ ಅಪ್ಸರಕನ್ಯೆ, ಚಂದ್ರಾಪೀಡ ಶಾಪಗ್ರಸ್ತನಾಗಿ ಭೂಮಿಗೆ ಅವತರಿಸಿದ ಚಂದ್ರ. ಪುಂಡರೀಕನು ಲಕ್ಷ್ಮಿಯ ಪುತ್ರ, ಮುನಿಕುಮಾರ; ಶಾಪಗ್ರಸ್ತರಾಗಿ ಇವರೀರ್ವರು ಮಾನವರಾಗಿ ಭೂಮಿಗೆ ಅವತರಿಸಿ, ಕಾದಂಬರಿ, ಮಹಾಶ್ವೇತೆಯರ ಮೋಹಜಾಲದಲ್ಲಿ ಬೀಳುತ್ತಾರೆ. ಆದರೆ ಇವರ ಪ್ರೇಮ ವಿವಾಹದಲ್ಲಿ

ಪರಿಣಮಿಸು

ರೂಪಾಂತರವಾಗುವ ಮೊದಲೇ, ಶಾಪಗ್ರಸ್ತರಾಗಿ ಪುಂಡರೀಕ, ಚಂದ್ರಾ-ಪೀಡರು ಭಿನ್ನ ದೇಹಗಳನ್ನು ತಾಳುತ್ತಾರೆ. ಚಂದ್ರನು, ಚಂದ್ರಾಪೀಡನಾದಾಗ ಪುಂಡರೀಕನು ಮಂತ್ರಿಕುಮಾರ ವೈಶಂಪಾಯನನಾಗುವನು; ಮಹಾಶ್ವೇತೆಯ ಶಾಪದಿಂದ ಗಿಳಿಯಾಗಿ ಮತ್ತೆ ಶಾಪವಿಮೋಚನೆಯ ತರುವಾಯ ಮೊದಲಿನ ದಿವ್ಯದೇಹವನ್ನು ಪಡೆಯುವನು. ಚಂದ್ರಾಪೀಡನು ದೇಹತ್ಯಾಗ ಮಾಡಿ ಶೂದ್ರಕ ರಾಜನಾಗಿ ಮತ್ತೆ ಮೊದಲಿನ ದೇಹವನ್ನು ಪಡೆಯುತ್ತಾನೆ. ಪ್ರೇಮದ ಸಂಸ್ಕಾರ ಜನ್ಮಜನ್ಮಾಂತರಗಳಲ್ಲಿ ಇರುತ್ತದೆ, ಎಂದು ಹೇಳಲು ಪುಂಡರೀಕ, ಚಂದ್ರಾಪೀಡರ ಜನ್ಮಾಂತರಗಳ ಜಟಿಲ ಸಮಸ್ಯೆಯನ್ನು ಕವಿ ಎತ್ತಿಹಿಡಿದಿದ್ದಾನೆ. ತ್ಯಾಗದಿಂದ, ಸಹನೆಯಿಂದ ಪ್ರೇಮ ಆಧ್ಯಾತ್ಮಿಕವಾಗಿ ಪರಿಣಮಿಸಿ ದಿವ್ಯವಾಗುತ್ತದೆ ಎಂಬುದನ್ನು, ಮಹಾಶ್ವೇತೆ ಕಾದಂಬರಿಯರ ಮುಖಾಂತರ ವ್ಯಕ್ತಪಡಿಸುತ್ತಾನೆ. ಕಥೆಗೆ ಈ ಸಂವಿಧಾನಗಳು ಮುಖ್ಯ; ಈ ಉದ್ದೇಶ ಸಾಧನೆಯಲ್ಲಿ, ಕವಿ ತನ್ನ ವರ್ಣನಾಚಾತುರ್ಯವನ್ನೂ, ಪಾಂಡಿತ್ಯವನ್ನೂ, ಮೇರೆಮೀರಿ ತೋರಿಬಿಟ್ಟದ್ದರಿಂದ, ಕೊಂಚ ವ್ಯತ್ಯಯ ಬಂದಂತಾಗುತ್ತದೆ. ಮುಖ್ಯ ಕಥೆಯ ಸೂತ್ರ ಸಂವಿಸಾಧನಗಳು, ಓದುಗರ ಮನಸ್ಸಿನಿಂದ ಮರೆಯಾಗಿಬಿಡುತ್ತವೆ. ಸಮಗ್ರ 'ಕಾದಂಬರಿ', ವರ್ಣನೆ, ಶೈಲಿ, ಸಂವಿಧಾನಗಳ ದೃಷ್ಟಿಯಿಂದ ಒಂದು ಉತ್ತಮ ಉದಾಹರಣೆ!

ಮೂಲದ ಕಥೆಗೂ ಬಾಣನ ಕಥೆಗೂ ಶೈಲಿಯಲ್ಲಿ ತುಂಬಾ ಭೇದವಿದೆ. ಕಥಾರಚನೆಯಲ್ಲಿಯೂ ಅಲ್ಲಲ್ಲಿ ಎತ್ತಿ ತೋರಿಸುವಂತಹ ಕೆಲವು ಮಾರ್ಪಾಟುಗಳನ್ನು ಕವಿ ಮಾಡಿದ್ದಾನೆ. ಮೂಲದಲ್ಲಿ ನರವಾಹನದತ್ತ ಆಕಾಶಗಮನ ಮಾಡಿ ವಿಶ್ರಮಿಸುತ್ತಿದ್ದಾಗ ದಿವ್ಯಕನ್ಯೆಯೊಬ್ಬಳು ಇಳಿದು ಬಂದುದನ್ನು ನೋಡುತ್ತಾನೆ. ಅವಳೇ ವಿದ್ಯಾಧರರಾಜನ ಮಗಳು ಶಕ್ತಿಯಶಳು–ಗೌರೀ ವರಪ್ರಸಾದದಿಂದ ಹುಟ್ಟಿದವಳು. ಅವಳಿಗೆ ದೇವಿಯ ಆದೇಶವಾಗಿರುವದು, "ನಾಳೆ ಇಂತಹ ಸಮಯದಲ್ಲಿ, ನಿನ್ನ ಪತಿಯಾಗುವ ನರವಾಹನದತ್ತನ ದರ್ಶನವಾಗುವದು" ಎಂದು ಹಾಗೆ ಹೇಳಿದ್ದರಿಂದಲೇ ಅವಳು ಅಲ್ಲಿಗೆ ಬಂದಿರುತ್ತಾಳೆ. ಅಲ್ಲದೆ ತಾನೇ ಆ ಕಾರಣವನ್ನು ನರವಾಹನದತ್ತನಿಗೆ ಹೇಳಿ ಹೊರಟು ಹೋಗುತ್ತಾಳೆ. ಅವಳಲ್ಲಿಯೇ ಅನುರಕ್ತನಾದ ನರವಾಹನದತ್ತನೂ ಮನಸ್ಸಿಲ್ಲದ ಮನಸ್ಸಿನಿಂದ ಹೊರಟುಬರುತ್ತಾನೆ. ಆ ಸ್ಥಾನದಲ್ಲಿ ಗೋಮುಖನೆಂಬ ಮಂತ್ರಿಯೊಬ್ಬನು ಅವನ ಮನಸ್ಸಿನ ವಿನೋದಕ್ಕಾಗಿ ಕಥೆಯೊಂದನ್ನು

ಪ್ರಾರಂಭಿಸುತ್ತಾನೆ; ಆ ಕಥೆ ಶೂದ್ರಕನ ಕಥೆಯಂತೆಯೇ ಇದೆ; ಸುಮನಾ ಎನ್ನುವ ರಾಜನೊಬ್ಬ; ಅವನ ಬಳಿ ಒಂದುದಿನ 'ಮುಕ್ತಾಲತೆ' ಯೆಂಬ ಚಾಂಡಾಲಕನ್ನಿಕೆ ಗಿಳಿಯನ್ನು ತೆಗೆದುಕೊಂಡು ಬರುತ್ತಾಳೆ. ಮುಂದೆ ಜಾತಿಸ್ಮರ ಗಿಳಿ ಕಥೆಯನ್ನು ಪ್ರಾರಂಭಿಸುತ್ತದೆ. ಆ ಗಿಳಿಯನ್ನು 'ಮರೀಚ'ನೆಂಬ ಋಷಿಕುಮಾರನು ಕುಲಗುರುಗಳಾದ ಪುಲಸ್ತ್ಯರಲ್ಲಿ ಒಪ್ಪಿಸುತ್ತಾನೆ. ಮತ್ತೆ ಮುಂದೆ ಕಥೆ ಪ್ರಾರಂಭವಾಗುತ್ತದೆ.

ಶಕ್ತಿಯಶಳು ನರವಾಹನದತ್ತನಿಗೆ ತಾನೇ ಎಲ್ಲ ವೃತ್ತಾಂತವನ್ನು ವಿದಿತಪಡಿಸುವದು, ಬಾಣನಿಗೆ ಸರಿಹೋಗಲಿಲ್ಲ. ಮಹಾಶ್ವೇತೆ, ಬಾಣನಲ್ಲಿ, ತನ್ನ ಹಿಂದಿನ ಕಥೆಯೆಲ್ಲವನ್ನು ಹೇಳಿದರೂ, ತೀರ ನಯವಾಗಿ ಹೇಳುತ್ತಾಳೆ, ಜೊತೆಗೆ ಕಾದಂಬರಿಯ ಮನಃಸ್ಥಿತಿಯನ್ನೂ ಹೇಳುತ್ತಾಳೆ. ಹಾಗೆ ಪ್ರತಿಜ್ಞೆ ಮಾಡಿದಂಥ ಕಾದಂಬರಿಗೂ ಚಂದ್ರಾಪೀಡನಲ್ಲಿ ಅನುರಾಗವುಂಟಾಯಿತು ಎಂಬುದನ್ನು ಕವಿ ಬಹು ಸೂಕ್ಷ್ಮವಾಗಿ ವರ್ಣಿಸುತ್ತಾನೆ. ಅಚ್ಛೋದ ಸರಸ್ಸಿನ ಬಳಿ ನಡೆದ ಮಹಾಶ್ವೇತೆ, ಪುಂಡರೀಕರ ಮುರ್ದನ್ಮ್ಯ ಭಾವನೆಗಳನ್ನು ಹೆಣೆಯುವಲ್ಲಿಯಂತೂ ಕವಿ ನಿಸ್ಸೀಮನಾಗಿದ್ದಾನೆ!

ಬಾಣಭಟ್ಟನ ವರ್ಣನೆಗಳಲ್ಲಿ ಒಂದೊಂದು ವರ್ಣನೆ ತನ್ನ ಮಟ್ಟಿಗೇ ಪರಿಪೂರ್ಣವಾಗಿದೆ. ಆದರೆ ವರ್ಣನೆಗಳಲ್ಲಿ ಏಕಸೂತ್ರವಿಲ್ಲ.

ಬಾಣಕವಿಯ ಪಾಂಡಿತ್ಯದಿಂದ 'ಕಾದಂಬರಿ'ಗೊಂದು ಮೆರುಗು ಬಂದಿತು; ಕೃತಿ, ಕಾಲದ ಅಭಿರುಚಿಯನ್ನು ಸ್ಫೂರ್ತಿಸಿತು. ಕನ್ನಡ ಕವಿಗಳು ಸಂಸ್ಕೃತ ಸಾಹಿತ್ಯದ ಮಾರ್ಗವನ್ನು ತುಳಿಯುತ್ತಿದ್ದ ಕಾಲದಲ್ಲಿ, ಬಾಣನ ಈ ಕೃತಿಯೂ ಕನ್ನಡದಲ್ಲಿಳಿಯಿತು. ನಾಗವರ್ಮನು ೧೦ ನೆಯ ಶತಮಾನದಲ್ಲಿ ಬಾಣನ ಈ ಕಾದಂಬರಿಯನ್ನು ಚಂಪೂರೂಪದಲ್ಲಿ ಪರಿವರ್ತಿಸಿದನು. ಚಂಪೂ, ಗದ್ಯಪದ್ಯಸಂಮಿಶ್ರಿತವಾದುದು; ಕಾದಂಬರಿಯ ಶೈಲಿಯನ್ನು ಚಂಪೂಶೈಲಿಗೆ ಅಳವಡಿಸಿಕೊಳ್ಳುವದು ಸಾಮಾನ್ಯ ಮಾತಲ್ಲ. ಆದರೆ ನಾಗವರ್ಮ ಅದನ್ನು ಯಶಸ್ವಿಯಾಗಿ ಮಾಡಿದ್ದಾನೆ.

ಕಾದಂಬರಿ, ಛಂದೋಂಬುಧಿಯನ್ನು ಬರೆದ ನಾಗವರ್ಮನು ಒಬ್ಬನೇ, ಕಾವ್ಯಾವಲೋಕನ, ಭಾಷಾ-ಭೂಷಣ, ವಸ್ತುಕೋಶಗಳನ್ನು ರಚಿಸಿದವನು ಮಾತ್ರ ಮತ್ತೊಬ್ಬನು, ಎಂದು ನರಸಿಂಹಾಚಾರ್ಯರು ಅಭಿಪ್ರಾಯ

ಪಡಿಸ್ಯುತು

ಪಡುತ್ತಾರೆ. ಇವೆಲ್ಲವುಗಳನ್ನು ರಚಿಸಿದವನು ಒಬ್ಬನೇ ಎಂದು ಡಾ. ವೆಂಕಟ ಸುಬ್ಬಯ್ಯನವರ ಅಭಿಪ್ರಾಯ!

'ಕಾದಂಬರಿ'ಯನ್ನು ರಚಿಸಿದ ನಾಗವರ್ಮ, "ಕೃತಿಪತಿ ನರೇಂದ್ರ ಚಂದ್ರಂ" ಎಂದು ತನಗೆ ಆಶ್ರಯದಾತನಾದ ರಾಜನನ್ನು ಕುರಿತು ಹೇಳುತ್ತಾನೆ. ಆದರೆ ತನ್ನ ವಿಚಾರವಾಗಿ ಹೆಚ್ಚಿಗೆ ಏನೂ ಹೇಳಿಕೊಂಡಿಲ್ಲ.

ಒಂದು ಭಾಷೆಯಲ್ಲಿಯ ಕಾವ್ಯದ ಅರ್ಥವನ್ನು ಅದರ ಪದರಚನಾಮಹತ್ವದೊಡನೆ ಮತ್ತೊಂದು ಭಾಷೆಯಲ್ಲಿ ತರುವದು ಸುಲಭ ಕೆಲಸವಲ್ಲ. ಪರಿವರ್ತ್ತನಕಾರನು ದ್ವಿಭಾಷಾಪಂಡಿತನಾಗಿರುವದು ಅವಶ್ಯ. ನಾಗವರ್ಮನು ಅನುವಾದ ಮಾಡಿದ್ದರೂ, ಅವನ ಕೃತಿ ಪ್ರಥಮವರ್ಗದ ಪರಿವರ್ತನವಾಗಿದೆ.

ನಾಗವರ್ಮನು ಬಾಣನ ಕೃತಿಯನ್ನೇ ಅನುಸರಿಸಿದ್ದರೂ ಹೆಚ್ಚುಹೆಚ್ಚಿಗೆ ಅನುಸರಿಸಿಲ್ಲ. ಎಲ್ಲಿ ವರ್ಣನೆ ಅನವಶ್ಯಕವೋ ಅಲ್ಲಿ ನಾಗವರ್ಮನು ವರ್ಣನೆ-ಯಲ್ಲಿಯ ಬಹುಭಾಗವನ್ನು ಬಿಟ್ಟುಬಿಟ್ಟಿದ್ದಾನೆ. ಉದಾಹರಣೆಗೆ ಶೂದ್ರಕರಾಜನ ವರ್ಣನೆಯನ್ನೇ ನೋಡಬಹುದು. ಬಾಣನಷ್ಟು ದೀರ್ಘವಾಗಿ ಬೆಳಸದೆ, ಸ್ವಲ್ಪದರಲ್ಲಿಯೇ ಮುಗಿಸಿ ಕಥೆಯನ್ನು ಮುಂದೋಡಿಸುತ್ತಾನೆ. ಬಹು ದೀರ್ಘವಾದ ವಾಕ್ಯಗಳನ್ನು ನಾಗವರ್ಮ ಹೆಚ್ಚಾಗಿ ಉಪಯೋಗಿಸಿಲ್ಲ; ಸಮಾಸಗಳನ್ನಾದರೂ ಹಾಗೇ; ಗದ್ಯಪದ್ಯ ಎರಡನ್ನೂ ಸೇರಿಸಿದ್ದರಿಂದ, ಶೈಲಿಯಲ್ಲಿ ವೈವಿಧ್ಯವುಂಟಾಗಿದೆ. ಎಷ್ಟೋ ಸಲ ಮೂಲದ ಭಾಗಕ್ಕಿಂತ, ನಾಗವರ್ಮನಲ್ಲಿಯ ಆ ಭಾಗವೇ ಸ್ಪಷ್ಟವಾಗಿ ಬಂದಿದೆ. 'ಕನ್ನೆಯದೊಂದು ಭಕ್ತಿಯಿಂ ಭಾವಿಸಿ' ಎಂದು ಚಾಂಡಾಲ ಕನ್ಯೆ ಹೇಳುವಾಗ ವಿನಯಪೂರ್ಣ-ವಾದ ಅವಳ ಚಿತ್ರ ನಮ್ಮೆದುರು ನಿಲ್ಲುತ್ತದೆ.

ಶೈಲಿಯಲ್ಲಿಯ ಮಾರ್ಪಾಟಿನಿಂದ, ಕಥೆಯ ಕುತೂಹಲವನ್ನು ಕಾಯ್ದಿಡುವದರಿಂದ ನಾಗವರ್ಮನ ಕೃತಿ ಕನ್ನಡದ ಅನುವಾದ ಕೃತಿಗಳಲ್ಲಿ ಗಣ್ಯವಾಗಿದೆ.

ಬಾಣಕವಿಯ ಕೃತಿಯ ಆಧಾರದಿಂದಲೇ ಕನ್ನಡದಲ್ಲಿ ಕರ್ನಾಟಕ ಗ್ರಂಥಮಾಲೆಯ ಪ್ರಕಾಶನದಲ್ಲಿ ಕೃಷ್ಣಾಚಾರ್ಯರ ಕಾದಂಬರಿಯೂ ಗದ್ಯದಲ್ಲಿ ಬಂದಿದೆ. ತೂರಮರಿಯವರ ಪ್ರಸ್ತುತ ಕೃತಿಯಾದರೂ ಬಾಣಭಟ್ಟನ ಕೃತಿಯ ಅನುವಾದವೇ; ಆದರೆ ಪೂರ್ಣವಾಗಿ ಹೊಸಗನ್ನಡದಲ್ಲಿದೆ.

## 'ಕಾದಂಬರಿ'ಯ ಸಂಕ್ಷಿಪ್ತ ಕಥೆ

ಶೂದ್ರಕರಾಜನು ರಾಜ್ಯಕಾರಭಾರ ಮಾಡುತ್ತಿದ್ದಾಗಿನಿಂದ ಕಥೆ

ಮೊದಲಾಗುತ್ತದೆ. ವಿದಿಶೆ ಮಾಳವದ ರಾಜಧಾನಿ. ಶೂದ್ರಕ ದೊರೆ ಅಲ್ಲಿ ಸಮುದ್ರವಲಯಾಂಕಿತ ಭೂಮಿಗಧಿಪತಿಯಾಗಿ ಆಳುತ್ತಿದ್ದನು. ದೊರೆ ಒಂದು ದಿನ ಆಸ್ಥಾನದಲ್ಲಿರುವಾಗ, ಬೆಳಿಗ್ಗೆ ಲಕ್ಷ್ಮಿಯ ಅವತಾರವೋ ಎನ್ನುವಂತಿದ್ದ ಚಾಂಡಾಲ ಕನ್ಯೆಯೊಬ್ಬಳು, ಗಿಳಿಮರಿಯೊಂದನ್ನು ಹಿಡಿದುಕೊಂಡು ವೃದ್ಧನೊಬ್ಬನೊಡನೆ ಪ್ರವೇಶಿಸಿದಳು. ಪ್ರತೀಹಾರಿ ಅವಳ ವಾರ್ತೆಯನ್ನು ರಾಜನಿಗೆ ಮುಟ್ಟಿಸಿದನು. ಶೂದ್ರಕರಾಜ, ಅವನ ಸಭೆ, ಆಸ್ಥಾನದ ವಿದ್ವಾಂಸರು, ವೇಶ್ಯೆಯರು, ಪ್ರತೀಹಾರಿ, ಚಾಂಡಾಲಕನ್ಯೆ, ಗಿಳಿಮರಿ—ಇವರಾರೂ ಬಾಣನ ವರ್ಣನೆಯ ಸೆಳವಿನಲ್ಲಿ ಸಿಕ್ಕದೆ ಪಾರಾಗರು. ಗಿಳಿಯಂದು ಜಾತಿಸ್ಮರ. ವೇದ, ಶಾಸ್ತ್ರ ಪುರಾಣಗಳೆಲ್ಲವನ್ನೂ ಬಲ್ಲದು. ಆ ಕನ್ಯೆ ಒಳಬಂದು, ಪಂಜರದ ಬಾಗಿಲನ್ನು ತೆರೆದೊಡನೆ, ಸಾಷ್ಟಾಂಗ ಪ್ರಣಿಪಾತ ಮಾಡಿ ಗಿಳಿಯು,

"ಸ್ತನಯುಗಮಶ್ರುಸ್ನಾತಂ, ಸಮೀಪತರವರ್ತಿಹೃದಯಶೋಕಾಗ್ನೇಃ
ಚರತಿ ವಿಮುಕ್ತಾಹಾರಂ ವ್ರತಮಿವ ಭವತೋ ರಿಪುಸ್ತ್ರೀಣಾಂ"

ಎಂಬ ಆರ್ಯೆಯೊಂದನ್ನು ಹೇಳಿತು. ಕೇಳಿದೊಡನೆ ರಾಜನ ಕುತೂಹಲಕ್ಕೆ ಎಣೆಯಿಲ್ಲದಾಯಿತು. ಆ ಗಿಳಿಯ ಬಗ್ಗೆ ಇನ್ನೂ ಹೆಚ್ಚು ತಿಳಿದುಕೊಳ್ಳುವ ಆಶೆಯಿಂದ ಶೂದ್ರಕನು ಭೋಜನಾದಿಗಳನ್ನು ತೀರಿಸಿಕೊಂಡು ಕಥೆ ಕೇಳಲು ಪ್ರಾರಂಭಮಾಡಿದನು.

ಗಿಳಿ, ಹೇಳುವ ಉತ್ಸಾಹವಿಲ್ಲದಿದ್ದರೂ, ಶೂದ್ರಕನೆದುರು ತನ್ನ ದುಃಖದ ಕಥೆಯನ್ನು ಪ್ರಾರಂಭಿಸಿತು.

'ವಿಂಧ್ಯಾಚಲದ ಅಡವಿಯಲ್ಲಿ ಪಂಪಾಸರೋವರವಿದೆ. ಅದರ ತೀರದಲ್ಲಿ ಜೀರ್ಣವಾದಂಥ ಬಹು ದೊಡ್ಡ ಶಾಲ್ಮಲೀ (ಬೂರುಗದ) ವೃಕ್ಷವಿದೆ. ಅದರ ಶಾಖೋಪಶಾಖೆಗಳಲ್ಲಿ, ನಾನಾ ದೇಶದಿಂದ ಬಂದ ಪಕ್ಷಿಗಳು ಗೂಡುಗಟ್ಟಿ ವಾಸವಾಗಿವೆ. ಅಲ್ಲಿ ನನ್ನ ಮುದಿ ತಂದೆ, ನನ್ನ ತಾಯಿಯೊಡನೆ ವಾಸವಾಗಿದ್ದರು. ಅವರ ವೃದ್ಧಾಪ್ಯದಲ್ಲಿ ದುರ್ದೈವದಿಂದ ಅವರಿಗೆ ನಾನೊಬ್ಬ ಮಗನಾದೆನು. ಪ್ರಸವವೇದನೆಯಿಂದ ತಾಯಿ ತೀರಿಹೋದಳು. ತಂದೆ ನನಗೆ ಗುಟುಕು ಕೊಟ್ಟು ಬಹಳ ಪ್ರಯಾಸದಿಂದ ಪೋಷಣ ಮಾಡಿದರು. ಆದರೆ ಒಂದು ದಿನ ಯಮನ ದೂತರಂತಿರುವ ಬೇಡರ ತಂಡವೊಂದು ಆ ಅಟವಿಯಲ್ಲಿ ಪ್ರವೇಶಿಸಿ ಹಾಹಾಕಾರವನ್ನುಂಟುಮಾಡಿಬಿಟ್ಟಿತು. ಬೇಡರ ಪಡೆ ಮರಳಿ ತೇನೋ ಎಂದು ತಂದೆಯ ಮಡಿಲಿನಿಂದಲೇ ನಾನು ಇಣಿಕಿ ನೋಡುವಷ್ಟರಲ್ಲಿ

ಜಡಿಶೀಳು

ಬೇಟೆ ದೊರೆಯದ ಮುದಿ ಬೇಡನೊಬ್ಬನು ಸರಸರನೆ ಮರವನ್ನೇರಿ ಮೇಲೆ ಬಂದು, ಕರಿಯ ನಾಗರಹಾವಿನಂತಹ ಕೈಯ್ಯನ್ನು ಚಾಚಿ, ನಮ್ಮ ಗೂಡಿನೊಳಗೆ ಕೈಯ್ಯಿಕ್ಕಿ ತಂದೆಯ ಗೋಣು ಮುರಿದು ಕೆಳಗೆ ಚೆಲ್ಲಿದನು. ತಂದೆಯ ಪಕ್ಕಗಳಲ್ಲಿಯೇ ಅಂಟಿಕೊಂಡಿದ್ದ ನಾನು ಹಾರಿ ಕೆಳಗೆ ತರಗೆಲೆಯ ರಾಶಿಯಲ್ಲಿ ಬಿದ್ದೆನು. ಎಲೆಯ ಬಣ್ಣ ನನ್ನ ಮೈಬಣ್ಣ ಒಂದೇ ಆದ್ದರಿಂದ, ಮುದಿ ಬೇಡನು ಎಸೆದ ಗಿಳಿಗಳನ್ನು ಆಯ್ದುಕೊಳ್ಳುವಾಗ ನಾನು ಕಾಣಿಸದೆ ಹೋದೆನು. ತಂದೆಯ ಮರಣಕ್ಕೂ ದುಃಖಿತನಾಗಿ ಕರಗದೆ ಇದ್ದ ನನ್ನನ್ನು ನೀರಡಿಕೆ ಬಲವಾಗಿ ಬಾಧಿಸತೊಡಗಿತು. ನೀರಿಲ್ಲದೆ ಪ್ರಾಣ ಬಿಡುತ್ತಿರುವಾಗಲೇ ಹಾರೀತನೆಂಬ ಮುನಿಕುಮಾರನು ತನ್ನ ಮಿತ್ರರೊಡನೆ ಸ್ನಾನಕ್ಕಾಗಿ ಸರೋವರಕ್ಕೆ ಆಗಮಿಸಿದನು, ನನ್ನನ್ನು ನೋಡಿ ದಯಾರ್ದ್ರಹೃದಯನಾಗಿ ಕಮಂಡಲುವಿನಲ್ಲಿ ನೀರು ತಂದು, ಒಂದೊಂದೇ ಹನಿಯನ್ನು ಚುಂಚಿನಲ್ಲಿ ಇಳಿಬಿಟ್ಟು ಬದುಕಿಸಿದನು. ತಣ್ಣೆಳಲಲ್ಲಿ ನನ್ನನ್ನಿಟ್ಟು, ಬಳಿಕ ತನ್ನ ಸ್ನಾನಾದಿಗಳನ್ನೆಲ್ಲ ಪೂರೈಸಿ, ನನ್ನನ್ನೂ ಕರೆದುಕೊಂಡು ಆಶ್ರಮಕ್ಕೆ ಹೊರಟನು. ಆಶ್ರಮ, ಜಾಬಾಲಿ ಮುನಿಗಳದು; ಮಹಾತಪಸ್ವಿಗಳವರು; ಅವರ ತಪೋಬಲದಿಂದ ಹುಲಿಹುಲ್ಲೆಗಳೂ ಅಲ್ಲಿ ಸಖ್ಯಭಾವದಿಂದ ಕೂಡಿರುತ್ತವೆ. ಅಂತಹ ತಪಸ್ವಿಗಳ ಸಾನ್ನಿಧ್ಯದಲ್ಲಿ ನನ್ನನ್ನಿಳಿಸಿದಾಗ ನನಗೆ ಸಂಕೋಚವಾಯಿತು. ಹಾರೀತನು ನನ್ನ ಪರಿಚಯವನ್ನು ಹೇಳಿ ಸುಮ್ಮನಾಗಲು ಜಾಬಾಲಿ ಮುನಿಗಳು ನನ್ನೆಡೆಗೆ ನೋಡಿ ನಕ್ಕು "ತನ್ನ ಪಾಪದ ಫಲವನ್ನು ಅನುಭವಿಸುತ್ತಿದ್ದಾನೆ" ಎಂದರು. ಉಳಿದವರು ಕುತೂಹಲದಿಂದ ಕೇಳತೊಡಗಿದರು. ನಾನು ಜಾತಿಸ್ಮರ ಎಂಬುದು ತ್ರಿಕಾಲಜ್ಞಾನಿಗಳಾದ ಮುನಿಗಳಿಗೆ ಗೊತ್ತು. "ಹಿಂದಿನ ಜನ್ಮದಲ್ಲಿ ನೀತಿಯನ್ನು ಬಿಟ್ಟು ನಡೆದು, ಮೋಹದಿಂದ ತಿರ್ಯಗ್ ಜಾತಿಯಲ್ಲಿ ಹುಟ್ಟಿದನು" ಎಂದು ಹೇಳಲು ಉಳಿದವರು ನನ್ನ ಹಿಂದಿನ ಕಥೆಯನ್ನು ಕೇಳಲು ಆತುರರಾಗಿ ಮುನಿಗಳಿಗೆ ಬಿನ್ನವಿಸಿಕೊಂಡರು; ಅವರು ನನ್ನ ಕಥೆಗೆ ಮೊದಲು ಮಾಡಿದರು.

ಅವಂತೀ ದೇಶದ ಉಜ್ಜಯಿನಿ ಪಟ್ಟಣದಲ್ಲಿ ತಾರಾಪೀಡನೆಂಬ ರಾಜನು ವೈಭವದಿಂದ ರಾಜ್ಯವಾಳುತ್ತಿದ್ದನು. ವಿಲಾಸವತಿ ಆತನ ಪಟ್ಟದರಸಿ. ಸಕಲ ಶಾಸ್ತ್ರಪಾರಂಗತನಾದ ಶುಕನಾಸನು ಮಂತ್ರಿ. ಸಕಲ ವೈಭವಗಳಿದ್ದೂ ಪುತ್ರನಿಲ್ಲದೆ, ರಾಜನೂ ರಾಣಿಯೂ ಕೊರಗುತ್ತಿದ್ದರು. ಅದಕ್ಕಾಗಿ ಅನೇಕ

ವ್ರತನಿಯಮಾದಿಗಳನ್ನು ಆಚರಿಸುತ್ತಿದ್ದರು. ಆದರೆ ಪ್ರತಿಫಲವಾಗಿಯೋ ಏನೋ, ನಸುಕಿನ ಸ್ವಪ್ನದಲ್ಲಿ ವಿಲಾಸವತಿಯ ಉದರದಲ್ಲಿ ಚಂದ್ರನು ಪ್ರವೇಶಿಸಿದಂತೆ ಭಾಸವಾಯಿತು. ಸ್ವಪ್ನ ನಿಜವಾಗಿ ತಾರಾಪೀಡ ದೊರೆಗೆ ಚಂದ್ರಾಪೀಡನೆಂಬ ಮಗನು ಹುಟ್ಟಿದನು. ಅಂದೇ ಶುಕನಾಸನಿಗೂ ವೈಶಂಪಾಯನನೆಂಬ ಮಗನು ಜನಿಸಿದನು. ಚಂದ್ರಾಪೀಡ, ವೈಶಂಪಾಯನರು ಜೀವದ ಗೆಳೆಯರು; ಎಲ್ಲ ವಿದ್ಯೆ ಕಲೆಗಳನ್ನು ಅವರು ಒಟ್ಟಿಗೇ ಅಭ್ಯಾಸ ಮಾಡಿದರು. ಹದಿನಾರು ವರುಷದ ಚಂದ್ರಾಪೀಡನು ಗುರುಕುಲದಿಂದ ಹೊರಹೊರಟರೆ ಜನ ಅವನನ್ನು ಸ್ವಾಗತಿಸಿದರು, ಹೂಮಳೆಗರೆದರು. ಇಂದ್ರಾಯುಧನೆಂಬ ದಿವ್ಯ ತುರಗವು ಅವನಿಗಾಗಿ ಕಾದಿತ್ತು. ಯೌವರಾಜ್ಯಾಭಿಷೇಕದ ಸಮಯದಲ್ಲಿ ಈ ತುರಂಗವೂ, ತನ್ನನ್ನು ನೆರಳಿನಂತೆ ಅನುಸರಿಸುವ ಪತ್ರಲೇಖೆಯೆಂಬ ತಾಂಬೂಲಕರಂಡವಾಹಿನಿಯೂ ಕಾಣಿಕೆಯಾಗಿ ದೊರೆತರು. ತರುವಾಯ ಚಂದ್ರಾಪೀಡನು ಇಂದ್ರಾಯುಧದೊಡನೆ ದಿಗ್ವಿಜಯಕ್ಕಾಗಿ ಪ್ರಯಾಣ ಬೆಳೆಸಿದನು.

ಬೇಟೆಯ ಮಾರ್ಗದಲ್ಲಿ ಚಂದ್ರಾಪೀಡನು ಕಿನ್ನರ ಮಿಥುನದ ಬೆನ್ನುಹತ್ತಿ ತನ್ನ ಸೈನ್ಯವನ್ನು ಹಿಂದೆಬಿಟ್ಟು ಬಹುದೂರ ಹೊರಟುಹೋದನು. ಇಂದ್ರಾಯುಧವು ಗಾಳಿಯಂತೆ ಹಾರಿದರೂ, ಕಿನ್ನರ ಮಿಥುನವು ಕೈಗೆಸಿಕ್ಕದೆ ಕೈಲಾಸ ಶಿಖರವನ್ನೇರಿ ಕಣ್ಮರೆಯಾದವು. ದಣಿವಿನಿಂದ ಬಳಲಿದ ಚಂದ್ರಾಪೀಡನು ಜಲಾಶಯವೊಂದನ್ನು ಹುಡುಕುತ್ತಿರುವಾಗ ಅಚ್ಛೋದ ಸರೋವರವು ಕಣ್ಣಿಗೆ ಬಿದ್ದು ತುಂಬ ಸಂತೋಷವಾಯಿತು. ಕುದುರೆಯಿಂದಿಳಿದು ನೀರು ಕುಡಿದು ವಿಶ್ರಮಿಸುತ್ತಿರುವಷ್ಟರಲ್ಲಿ, ಇಂಪಾದ ಗಾಯನವು ಕಿವಿಗೆ ಬಿತ್ತು. ಅದನ್ನನುಸರಿಸುತ್ತ ಹೋಗಲು ಸಿದ್ಧಾಯತನವೊಂದರಲ್ಲಿ ಸುರಸುಂದರಿಯಾದ ನವಯುವತಿಯೊಬ್ಬಳು, ತಾಪಸವೇಷಧಾರಿಣಿಯಾಗಿ ಶಿವನನ್ನು ಆರಾಧಿಸುತ್ತಿದ್ದುದು ಕಣ್ಣಿಗೆ ಬಿತ್ತು. ಅವಳು ಪ್ರದಕ್ಷಿಣೆ ಮಾಡಿದ ಬಳಿಕ, ಅಲ್ಲಿಯೇ ನಿಂತಿದ್ದ ವಿನಯಶಾಲಿಯಾದ ಚಂದ್ರಾಪೀಡನನ್ನು ಕಂಡು ಅವನಿಗೆ ಸ್ವಾಗತವನ್ನು ಕೋರಿದಳು. ಆತಿಥ್ಯವನ್ನು ಸ್ವೀಕರಿಸುವಂತೆ ಪ್ರಾರ್ಥಿಸಿ ತನ್ನ ಕುಟೀರಕ್ಕೆ ಕರೆದುಕೊಂಡು ಹೋದಳು. ಚಂದ್ರಾಪೀಡನು ಅವಳ ಆತಿಥ್ಯವನ್ನು ಸ್ವೀಕರಿಸಿ ಆಕೆಯ ವೃತ್ತಾಂತವೆಲ್ಲವನ್ನು ಕೇಳಬೇಕೆಂದು ಆಶಿಸಿದನು. ಅವಳದು ಕರುಣಕಥೆ, ಬಾಯಿಂದ ಮಾತು ಹೊರಡದೆ, ಕಣ್ಣಿಂದ ನೀರು

ಧಾರೆಗಟ್ಟಿ ಸುರಿಯತೊಡಗಿತು; ದುಃಖವನ್ನು ನುಂಗಿ ಚಂದ್ರಾಪೀಡನಂತಹ ಮಹಾಶಯನು ಕೇಳಲಾಶಿಸುತ್ತಾನೆಂದು ತಿಳಿದು ಹೇಳತೊಡಗಿದಳು.

"ನನ್ನ ತಂದೆ ಗಂಧರ್ವರಾಜ ಹಂಸ, ಇಂದ್ರನ ಪರಮಮಿತ್ರ, ತಾಯಿ ಗೌರೀದೇವಿ, ಅಪ್ಸರೆ. ಬಹುಕಾಲದ ಮೇಲೆ ದುರ್ಭಾಗ್ಯೆಯಾದ ನಾನೊಬ್ಬಳೇ ಮಗಳು ಅವರಿಗೆ ಜನಿಸಿದೆನು. ಬಹು ಪ್ರೀತಿಯಿಂದ ಸಲಹಿ ನನ್ನನ್ನು ದೊಡ್ಡವಳನ್ನಾಗಿ ಮಾಡಿದರು. ಬಳಿಕ ಒಂದು ದಿನ ನಾನು ತಾಯಿಯೊಡನೆ ಅಚ್ಛೋದಸರೋವರಕ್ಕೆ ಸ್ನಾನಕ್ಕಾಗಿ ಹೋದಾಗ ಗೆಳತಿಯೊಡನೆ ಹೂ ಕೊಯ್ಯುತ್ತ ಸ್ವಲ್ಪ ದೂರ ಹೋದೆನು. ತಿರುಗಿ ಬರುವಾಗ ದಿವ್ಯಸ್ವರೂಪವುಳ್ಳ ಒಬ್ಬ ಮುನಿಕುಮಾರನು ಅವನ ಗೆಳೆಯನೊಡನೆ ಬರುತ್ತಿರುವುದನ್ನು ಕಂಡೆನು. ಆ ಮುನಿಕುಮಾರನ ಸೌಂದರ್ಯ ನನ್ನನ್ನು ಮೋಹದಲ್ಲಿ ಕೆಡವಿತು. ಕಾಮ ಪರವಶಳಾದ ನನ್ನನ್ನೆಲ್ಲಿ ಉರಿಗಣ್ಣಿನಿಂದ ಭಸ್ಮಮಾಡುವನೋ ಎಂದು ಅಂಜುತ್ತ, ಆ ಮಿತ್ರನನ್ನು ಕೇಳಿದೆನು, "ಇವನಾರು? ಹೆಸರೇನು? ಇವನ ಕಿವಿಯಲ್ಲಿ ರುವ ಸುಂದರವಾದ ಕುಸುಮಮಂಜರಿ ಎಲ್ಲಿಯದು?" ನನ್ನ ಕುತೂಹಲ ವನ್ನು ನೋಡಿ ಆ ಮುನಿಕುಮಾರನು, ತಾನೂ ಮೋಹಪರವಶನಾಗಿ, "ಈ ಕುಸುಮಮಂಜರಿ ನಿನಗೆ ಬೇಕಾದರೆ ತೆಗೆದುಕೊ," ಎಂದು ತಾನೇ ಎತ್ತಿ ನನ್ನ ಕಿವಿಗೆ ತೊಡಿಸಿದನು. ನನ್ನ ಕದಂಪಿನ ಸೋಂಕಿನಿಂದ ಮುನಿಕುಮಾರನ ಕೈ ನಡುಗಿತು; ನಡುಗುತ್ತಿರುವ ಕೈಯ್ಯಿಂದ ಅಕ್ಷಮಾಲೆ ಜಾರಿ ಕೆಳಗೆ ಬಿದ್ದುದೂ ಅವನಿಗೆ ತಿಳಿಯಲಿಲ್ಲ. ನಾನದನ್ನು ಮೆಲ್ಲಗೆ ಎತ್ತಿ ಕೊರಳಲ್ಲಿ ಹಾಕಿಕೊಂಡೆನು. ಅಷ್ಟರಲ್ಲಿ ನನ್ನ ಸಖಿ, ನನಗಾಗಿ ತಾಯಿ ಕಾದಿದ್ದಾರೆಂದು ಹೇಳಲು ನಾನು ವಂದನೆಗಳನ್ನರ್ಪಿಸಿ ಹೊರಟೆನು. ಅಕ್ಷಮಾಲೆಯನ್ನು ಕೈಯಿಂದ ಚೆಲ್ಲಿ-ಕೊಟ್ಟುದರ ಪರಿವೆಯೂ ಇಲ್ಲದ ಮುನಿಕುಮಾರನನ್ನು ಅವನ ಮಿತ್ರ ಕಪಿಂಜಲ ಹೀಗಳೆದು ನುಡಿದನು, "ಇದೇನು ಪುಂಡರೀಕ, ಅಕ್ಷಮಾಲೆ ಜಾರಿಹೋದುದು ಕೂಡ ತಿಳಿಯಲಿಲ್ಲವೆ ನಿನಗೆ? ಮುನಿಕುಮಾರರಿಗೆ ವಿರುದ್ಧವಾದ ಈ ಮೋಹವು ನಿನ್ನನ್ನಿಷ್ಟೊಂದು ಆವರಿಸಿತೆ?" ಮಿತ್ರನ ಮಾತನ್ನು ಕೇಳಿ ದೊಡನೆಯೇ ಸುಳ್ಳು ಸಿಟ್ಟಿನಿಂದ ಪುಂಡರೀಕನು, 'ಎಲೆ ಚಪಲೆ, ನನ್ನ ಜಪ ಸರವನ್ನು ತೆಗೆದುಕೊಂಡು ಎಲ್ಲಿ ಓಡುತ್ತೀ?', ಎನ್ನಲು ಗಾಬರಿಯಾಗಿ, ನಾನು ಆ ಗಾಬರಿಯಲ್ಲಿ ನನ್ನ ಕೊರಳಲ್ಲಿಯ ಹಾರವನ್ನೇ ಅದಕ್ಕೆ ಪ್ರತಿಯಾಗಿ ಕೊಟ್ಟೆನು. ಮುನಿಕುಮಾರನು ಅದನ್ನೇ ಸ್ವೀಕರಿಸಿದನು. ಅವನಲ್ಲೇ ನಟ್ಟ

ಮನಸ್ಸುಳ್ಳ ನಾನು ಮನೆಗೆ ಹೋಗಿಯೂ ಮೇಲ್ಮನೆಯ ಕಿಟಕಿಯಿಂದ ಅವನಿದ್ದ ದಿಸೆಯನ್ನೇ ನಿಟ್ಟಿಸುತ್ತಿದ್ದೆನು. ಅಷ್ಟರಲ್ಲಿಯೇ ಹಿಂದೆ ಉಳಿದುಕೊಂಡಿದ್ದ ನನ್ನ ಸಖಿ ತರಳಿಕೆ, ಪುಂಡರೀಕನ ಪ್ರೇಮಪತ್ರವನ್ನು ನನ್ನ ಕೈಗಿತ್ತಳು; ಅದರಿಂದ ಇನ್ನೂ ಹೆಚ್ಚಿನ ಅಶಾಂತಿ ನನ್ನನ್ನಾವರಿಸಿತು. ಹೇಗೋ ದಿನವನ್ನು ನೂಕುವಷ್ಟರಲ್ಲಿ ಕಪಿಂಜಲನು ಬಂದು ತನ್ನ ಮಿತ್ರನ ಅಸಹಾಯ ಸ್ಥಿತಿಯನ್ನು ಬಣ್ಣಿಸಿ, "ಹೇಗೂ ಅವನನ್ನು ಕಾಪಾಡುವದು ನಿನ್ನನ್ನೇ ಕೂಡಿದೆ," ಎಂದು ಹೇಳಿ ಯಾರೂ ಅರಿಯದಂತೆ ಲಗುಬಗೆಯಿಂದ ಹೊರಟು ಹೋದನು. ಆ ಸಮಯದಲ್ಲಿ ನನ್ನ ತಾಯಿ ಬಂದು ಮಾತನಾಡಿಸಿದುದರ ಎಚ್ಚರವೂ ನನಗಿರಲಿಲ್ಲ. ನಸುಗತ್ತಲಾಗಲು ತರಳಿಕೆಯೊಡನೆ ನಾನು ಪುಂಡರೀಕನನ್ನು ಕಾಣಲು ಹೊರಟೆನು. ಬಲಗಣ್ಣು ಹಾರಿತು; ದೂರದಿಂದಲೇ ಪುರುಷರ ಪ್ರಲಾಪಧ್ವನಿ ಕೇಳಬಂತು; ನನ್ನ ದುಃಖ ಮೇರೆ ಮೀರಿತು. ಪ್ರಿಯವಿರಹವನ್ನು ತಾಳಲಾರದೆ ಸಹಗಮನ ಮಾಡಬೇಕೆಂದು ಸಿದ್ಧತೆ ಮಾಡುತ್ತಿರಲು, ಚಂದ್ರಮಂಡಲದಿಂದ ದಿವ್ಯಪುರುಷನೊಬ್ಬನು ಬಂದು, "ಮಗಳೇ, ಸಾಯುವ ಯೋಚನೆ ಬೇಡ; ಇವನೊಡನೆ ಮತ್ತೆ ನಿನ್ನ ಸಮಾಗಮವಾಗುವದು," ಎಂದು ಹೇಳಿ ಪುಂಡರೀಕನ ದೇಹವನ್ನು ಹೊತ್ತುಕೊಂಡು ಮೇಲೆ ನೆಗೆದನು. ಕಪಿಂಜಲನೂ ಅವನ ಬೆನ್ನುಹತ್ತಿದನು. ಅಂದಿನಿಂದ ನಾನಿಲ್ಲಿ ಪುಂಡರೀಕನ ಮಾರ್ಗ ಪ್ರತೀಕ್ಷೆ ಮಾಡುತ್ತ, ಅವನಿಗೆ ಪ್ರಿಯವಾದ ಈ ತಾಪಸವೇಷವನ್ನೇ ಧರಿಸಿ, ತರಳಿಕೆಯೊಡನೆ ಶಿವನ ಆರಾಧನೆ ಮಾಡುತ್ತ ವಾಸಿಸುತ್ತಿದ್ದೇನೆ," ಎಂದು ಮಹಾಶ್ವೇತೆ ಕಣ್ಣೀರ್ಗರೆದಳು.

"ಹಾಗಾದರೆ ಈಗ ಆ ತರಳಿಕೆಯೆಲ್ಲಿ?" ಚಂದ್ರಾಪೀಡನು ಪ್ರಶ್ನಿಸಿದನು. ಮಹಾಶ್ವೇತೆ ಮತ್ತೆ ಪ್ರಾರಂಭಿಸಿದಳು, 'ಕಾದಂಬರಿ ಎಂಬೊಬ್ಬ ಪ್ರಾಣಸಖಿ ನನಗಿದ್ದಾಳೆ, ಚಿತ್ರರಥ ಗಂಧರ್ವರಾಜನ ಮಗಳು. ನಾನೂ ಅವಳೂ ಒಬ್ಬರನ್ನೊಬ್ಬರು ಬಿಟ್ಟಿರುತ್ತಿರಲಿಲ್ಲ. ನನ್ನ ಈ ದುಃಖದ ವಾರ್ತೆಯನ್ನು ಕೇಳಿ ತಾನೂ ಆಜನ್ಮ ಕನ್ಯೆಯಾಗಿರಬೇಕೆಂಬ ವ್ರತ ತೊಟ್ಟಿದ್ದಾಳೆ. ಅವಳ ಈ ಹಟವನ್ನು ಕಂಡು ಚಿಂತೆಯಿಂದ ಚಿತ್ರರಥ ರಾಜನು ನನ್ನ ಬಳಿಗೆ ಕಂಚುಕಿಯನ್ನಟ್ಟಿದನು. ತಂದೆಯ ಮಾತಿನಂತೆ ನಡೆಯಬೇಕೆಂದು ಬುದ್ಧಿ ಹೇಳಲು ಅವಳೊಡನೆ ನಾನು ತರಳಿಕೆಯನ್ನು ಕಳಿಸಿಕೊಟ್ಟಿದ್ದೇನೆ. ಅವಳು ಹೊರಟು ಹೋದ ಅಲ್ಪ ಸಮಯದಲ್ಲಿಯೇ ನೀವು ಬಂದಿರಿ.''

ಜಾಬಾಲಿ ಮುನಿಗಳು ತಮ್ಮ ಕಥೆಯನ್ನು ಮುಂದುವರಿಸಿದರು, 'ಮರುದಿನ ನಸುಕಿನಲ್ಲಿ ತರಳಿಕೆ ವಿಫಲಪ್ರಯತ್ನಳಾಗಿ ಮರಳಿದಳು. ಅವಳ ಮಾತನ್ನು ಕೇಳಿ ಮಹಾಶ್ವೇತೆ, ತಾನೇ ಹೋಗಬೇಕೆಂದು ನಿಶ್ಚಯಿಸಿ, "ನಾನೇ ಕಾದಂಬರಿಯ ಬಳಿಗೆ ಹೋದರೆ, ಅವಳಿಗೆ ಸಮಾಧಾನವಾಗಬಹುದು. ನೀವು ಇಲ್ಲಿಯವರೆಗೆ ಬಂದಿದ್ದೀರಿ, ಗಂಧರ್ವರಾಜನಲ್ಲಿಗೂ ಬಂದು ಆತಿಥ್ಯವನ್ನು ಸ್ವೀಕರಿಸಿದರೆ ಅವಳಿಗೆ ತುಂಬ ಸಂತೋಷವಾದೀತು," ಎಂದು ಹೇಳಲು ಚಂದ್ರಾಪೀಡನೂ ಒಪ್ಪಿಕೊಂಡನು; ಅವಳೊಡನೆ ಚಿತ್ರರಥನ ರಾಜಧಾನಿಗೆ ಹೋದನು. ಕಾದಂಬರಿಯನ್ನು ನೋಡಿದೊಡನೆಯೇ ಅವಳಲ್ಲಿ ಚಂದ್ರಾಪೀಡನಿಗೆ ಮೋಹವುಂಟಾಯಿತು; ಕಾದಂಬರಿಯೂ ಪ್ರೇಮಪಾಶದಲ್ಲಿ ಬಿದ್ದಳು. ಅವಳು ಮಹಾಶ್ವೇತೆಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಮದಲೇಖೆಯಿಂದ ಚಂದ್ರಾಪೀಡನಿಗೂ ಕೊಡಿಸಿದಳು. ಬಳಿಕ ಮಹಾಶ್ವೇತೆಗೆ ತಾಂಬೂಲ ಕೊಡ ಹೋಗಲು, 'ಬಂದ ಅತಿಥಿವರನನ್ನು ಮೊದಲು ಆದರಿಸಬೇಕು,' ಎಂದು ಹೇಳಿ ಚಂದ್ರಾಪೀಡನಿಗೆ ಕೊಡಬೇಕೆಂದು ಒತ್ತಾಯಪಡಿಸಲು, ನಾಚಿಕೆಯಿಂದ ನಡುಗುತ್ತ ಕಾದಂಬರಿ ತಾಂಬೂಲವನ್ನು ಕೊಟ್ಟಳು. ಅಷ್ಟರಲ್ಲಿಯೇ ಚಿತ್ರರಥನೂ, ರಾಣಿಯೂ ಮಹಾಶ್ವೇತೆಯನ್ನು ನೋಡಲಿಚ್ಛಿಸಿದ್ದರಿಂದ, ಚಂದ್ರಾಪೀಡನ ವಾಸಕ್ಕೆಂದು ಬೇರೆ ನಿವಾಸಸ್ಥಳನ್ನು ಗೊತ್ತುಮಾಡಿ ಮಹಾಶ್ವೇತೆ ಹೊರಟುಹೋದಳು. ಇತ್ತ ಕಾದಂಬರಿಗೆ 'ಎಲ್ಲರ ಎದುರಿನಲ್ಲಿಯೇ ರಾಜಕುಮಾರನನ್ನು ಕಂಡು ಮೋಹಗೊಂಡೆನಲ್ಲ, ನನ್ನ ವ್ರತವೇನಾಯಿತು?' ಎಂದು ಕಳವಳ. ವಿರಹವೇದನೆ ಅಸಹ್ಯವಾಗಿ ಮದಲೇಖೆಯಿಂದ ಚಂದ್ರಾ-ಪೀಡನಿಗೆ ತನ್ನ ಪ್ರೇಮದ ಕುರುಹಾಗಿ ಶೇಷವೆಂಬ ಹಾರವನ್ನು ಕಳುಹಿದಳು. ಚಂದ್ರಾಪೀಡನಾದರೂ ಕಾದಂಬರಿಯನ್ನೇ ಕುರಿತು ಯೋಚಿಸುತ್ತಿದ್ದನು. ಬಳಿಕ ಚಂದ್ರೋದಯ ಸಮಯದಲ್ಲಿ ಕಾದಂಬರಿ ಬಂದು ಚಂದ್ರಾಪೀಡನನ್ನು ಕಂಡು ಮಾತನಾಡಿಸಿ ಹೋದಳು. ಚಂದ್ರಾಪೀಡನು ಮಹಾಶ್ವೇತೆಯ ವಾತ್ಸಲ್ಯ, ಕಾದಂಬರಿಯ ಪ್ರೇಮಗಳನ್ನೇ ಕುರಿತು ಯೋಚಿಸುತ್ತ ರಾತ್ರಿಯನ್ನು ನೂಕಿದನು. ಮರುದಿನ ಕಾದಂಬರಿ ಮಹಾಶ್ವೇತೆಯರ ಅಪ್ಪಣೆಗಳನ್ನು ಪಡೆದು ಅಚ್ಛೋದಸರಸ್ಸಿನ ಮಾರ್ಗವಾಗಿ ಹೊರಡಲು, ಚಂದ್ರಾಪೀಡನು ತನ್ನ ಸೈನ್ಯವು ಇಂದ್ರಾಯುಧದ ಹೆಜ್ಜೆಗಳನ್ನು ಗುರುತಿಸುತ್ತ ಬಂದು, ಅಲ್ಲಿಯೇ ಬಳಿಯಲ್ಲಿ ಬೀಡು ಬಿಟ್ಟಿರುವದನ್ನು ಕಂಡನು. ಅವನು ಅಲ್ಲಿರುವಾಗಲೇ ಕೇಯೂರಕನು

ಬಂದು, ಚಂದ್ರಾಪೀಡನು ಪರಿತು ಬಂದಿದ್ದ ಶೇಷಹಾರವನ್ನೂ, ಕಾದಂಬರಿ ಕಳುಹಿದ ಪ್ರೇಮಕಾಣಿಕೆಯನ್ನೂ ಕೊಟ್ಟು, 'ಕಾದಂಬರಿ ವಿರಹವ್ಯಥೆಯಿಂದ ಬಳಲುತ್ತಿದ್ದು, ನಿಮ್ಮನ್ನು ಕರೆತರಲು ಹೇಳಿದ್ದಾಳೆ,' ಎಂದು ಹೇಳಿದನು. ಕೂಡಲೆ ಚಂದ್ರಾಪೀಡನು ಪತ್ರಲೇಖೆಯೊಡನೆ ಹೊರಟು, ಹಿಮಗೃಹದಲ್ಲಿ ವಿಶ್ರಾಂತಿ ಪಡೆಯುತಲಿದ್ದ ಕಾದಂಬರಿಯನ್ನು ಕಂಡನು. ಬಳಿಕ ಕಾದಂಬರಿಯ ಇಷ್ಟದಂತೆ ಪತ್ರಲೇಖೆಯನ್ನು ಅಲ್ಲಿಯೇ ಬಿಟ್ಟು ಮತ್ತೆ ತನ್ನ ಬಿಡಾರಕ್ಕೆ ಬಂದನು. ಅಷ್ಟರಲ್ಲಿ ರಾಜಧಾನಿಯಿಂದ ಕಾಗದವು ಬಂದಿತ್ತು, ಕೂಡಲೆ ಹಿಂದಿರುಗಬೇಕೆಂದು. ಚಂದ್ರಾಪೀಡನು ತಂದೆಯ ವಚನಕ್ಕೆ ಮನ್ನಣೆಯಿತ್ತು, ಸೈನ್ಯದೊಡನೆ ಬರಲು ವೈಶಂಪಾಯನನಿಗೆ ಹೇಳಿ ಪತ್ರಲೇಖೆಯನ್ನು ಕರೆತರಲು ಮೇಘನಾದನನ್ನು ಬಿಟ್ಟು, ರಾಜಧಾನಿಗೆ ಮರಳಿದನು.

ಚಂದ್ರಾಪೀಡನು ರಾಜಧಾನಿಗೆ ಬಂದರೂ ಕಾದಂಬರಿಯ ಯೋಚನೆ ತಪ್ಪಲಿಲ್ಲ; ಪತ್ರಲೇಖೆ ಬಂದು ಕಾದಂಬರಿಯ ವಿರಹವ್ಯವಸ್ಥೆಯನ್ನು ವರ್ಣಿಸಿದ ಮೇಲಂತೂ ಸರಿಯೆ; ಅದಕ್ಕೆ ಮತ್ತೆ ಕೇಯೂರಕನು ಕಾದಂಬರಿಯಿಂದ ತಂದ ಸಂದೇಶ ನೆರವಾಯಿತು. ವೈಶಂಪಾಯನನು ರಾಜಧಾನಿಗೆ ಬರುವ ದಾರಿಯನ್ನೇ ಚಂದ್ರಾಪೀಡನು ನೋಡುತ್ತಿದ್ದನು, ಹಾಗೆಂದು ಸಂದೇಶವನ್ನೂ ಕಾದಂಬರಿಗೆ ಕೇಯೂರಕ, ಪತ್ರಲೇಖೆಯರ ಮುಖಾಂತರ ಮುಟ್ಟಿಸಿದನು. ಆದರೆ ವೈಶಂಪಾಯನನ ಬರುವಿಕೆಯ ಲಕ್ಷಣವೇ ಇಲ್ಲ. ಚಂದ್ರಾಪೀಡನು ತಾನೇ ಹೋಗಿ ನೋಡಲಾಗಿ, ಅಚ್ಛೋದ ಸರಸ್ತೀರವನ್ನು ಬಿಟ್ಟು ಬರಲು ವೈಶಂಪಾಯನನು ಎಂದಿಗೂ ಒಪ್ಪಲಿಲ್ಲವೆಂದು ತಿರುಗಿ ಬರುತ್ತಿದ್ದ ಸೈನಿಕರು ಹೇಳಿದರು. ಹಾಗಾದರೆ ವಿಷಯವೇನೆಂದು ತಿಳಿಯಲು ತಾನೇ ಹೋಗುವ ದಾಗಿ ಚಂದ್ರಾಪೀಡನು ತಾಯಿ ತಂದೆಗಳ ಅಪ್ಪಣೆಯನ್ನು ಪಡೆದು ಹೊರಟನು.

ಮಿತ್ರನನ್ನು ನೋಡುವ ಹಂಬಲಿನಿಂದ, ಕಾದಂಬರಿಯ ಸಮಾಗಮದಾಶೆ ಯಿಂದ, ಚಂದ್ರಾಪೀಡನ ಮನಸ್ಸು ಇಂದ್ರಾಯುಧದೊಡನೆಯೇ ಹಾರುತ್ತಿತ್ತು. "ಗೆಳೆಯನನ್ನು ಸಂತೈಸಿ, ಅವನೊಂದಿಗೆ ಮಹಾಶ್ವೇತೆಯ ಆಶ್ರಮಕ್ಕೆ ಹೋಗಿ, ಅಲ್ಲಿಂದ ಮುಂದೆ ಇಬ್ಬರೂ ಕಾದಂಬರಿಯ ಬಳಿ ಹೋಗುವೆವು. 'ಓಹೋ, ನನ್ನನ್ನಿದಿರುಗೊಳ್ಳಲು ಕಾದಂಬರಿಯು ತವಕದಿಂದೇಳುವಳು. ಕಾದಂಬರಿಗೆ ಹೇಳಿ, ಮದಲೇಖೆಗೂ, ವೈಶಂಪಾಯನನಿಗೂ ವಿವಾಹಮಾಡಿಸಿದರೆ ಹೇಗೆ?" ಎಂದು ದಾರಿಯುದ್ದಕ್ಕೂ ಚಂದ್ರಾಪೀಡನ ಮನಸ್ಸು ಎಣಿಕೆ ಹಾಕುತ್ತಿತ್ತು.

ಮಹಾಶ್ವೇತೆಯ ಆಶ್ರಮದ ವರೆಗೂ ವೈಶಂಪಾಯನನ ಸುಳಿವು ಹತ್ತಲಿಲ್ಲ; ಆವಳೆಡೆಗೆ ಬಂದು ನೋಡಿದರೆ, ಎಡೆಬಿಡದೆ ಕಣ್ಣೀರು ಸುರಿಸುತ್ತ ಕುಳಿತಿದ್ದಳು; ಕಾದಂಬರಿಗೇನಾದರೂ ಕೇಡು ಸಂಭವಿಸಿತೋ ಏನೋ ಎಂದು ಚಂದ್ರಾಪೀಡನ ಮನಸ್ಸು ಶಂಕಿಸಿತು. ಚಂದ್ರಾಪೀಡನು ಸವಿನಯವಾಗಿ ಮಹಾಶ್ವೇತೆಯನ್ನು ಕೇಳಲು, ಆವಳು ದುಃಖದಿಂದ ಹೇಳತೊಡಗಿದಳು. "ನೀನು ಉಜ್ಜಯಿನಿಗೆ ಹೋದ ಕೂಡಲೆ ನಾನಿಲ್ಲಿ ಹೊರಟು ಬಂದೆನು. ನಾನು ತಪಸ್ಸನ್ನಾಚರಿಸುತ್ತಿರುವಾಗ ನಿನ್ನ ಓರಿಗೆಯ ಬ್ರಾಹ್ಮಣ ಕುಮಾರನೊಬ್ಬನು ನನ್ನನ್ನು ದುರದುರನೆ ನೋಡುತ್ತ, ಕಾಮುಕನಂತೆ ಮಾತನಾಡಿದನು, "ಕೋಮಲೆ, ನಿನ್ನಂಥವರು ತಪಸ್ಸನ್ನಾಚರಿಸುವದೇ? ಎಂದು. ಪುಂಡರೀಕ ನನ್ನಲ್ಲದೆ ಅನ್ಯರನ್ನು ಸ್ಮರಿಸದ ನಾನು, ಆವನು ನಮ್ಮ ಗುಹೆಯತ್ತ ಬಾರವಂತೆ ನೋಡಿಕೊಳ್ಳಲು ತರಳಿಕೆಗೆ ಹೇಳಿ ಹೊರಟು ಹೋದೆನು. ಆದರೂ ಆವನು ಕೇಳದೆ ಒಂದು ರಾತ್ರಿ ಮೇರೆಮೀರಿ ನಡೆದುದರಿಂದ, ನಾನು ರೇಗಿ 'ಗಿಳಿಯಾಗಿ ಜನ್ಮತಾಳು,' ಎಂದು ಶಾಪವನ್ನು ಕೊಟ್ಟೆನು. ಕೂಡಲೇ ಆತನು ಭೂಮಿಗಿಳಿದು ಹೋದನು. ಅವನು ನಿನ್ನ ಮಿತ್ರನೆಂಬುದು ಆಮೇಲೆ ತಿಳಿಯಿತು." ಎಂದು ಮಹಾಶ್ವೇತೆ ಹೇಳುವಷ್ಟರಲ್ಲಿಯೇ ಚಂದ್ರಾಪೀಡನು ನೆಲಕ್ಕುರುಳಿದನು; ಮಹಾಶ್ವೇತೆ ಮೂರ್ಛೆಹೋದಳು; ತರಳಿಕೆ ಅಳತೊಡಗಿದಳು; ಚಂದ್ರಾಪೀಡನ ಆಗಮನದ ವಾರ್ತೆಯನ್ನು ಕೇಳಿ ಅಲ್ಲಿಗೆ ಬಂದಿದ್ದ ಕಾದಂಬರಿ, ಪತ್ರಲೇಖೆಯರೂ ಮೂರ್ಛೆ ಹೋದರು. ಕೆಲ ಸಮಯದ ಮೇಲೆ ಕಾದಂಬ-ರಿಯು ಎಚ್ಚತ್ತು ಸಹಗಮನಕ್ಕೆ ಸಿದ್ಧಳಾಗಲು, ದಿವ್ಯಧ್ವನಿಯೊಂದು ಕೇಳಿಸಿತು. 'ಮಹಾಶ್ವೇತೆ, ಹಿಂದೆ ನಿನಗೆ ವಚನಕೊಟ್ಟಂತೆ ಪುಂಡರೀಕನ ದಿವ್ಯ-ದೇಹವು ನಿನಗಾಗಿ ಕಾಯುತ್ತಿದೆ. ಈ ಚಂದ್ರಾಪೀಡನಾದರೂ ನಿತ್ಯನು. ಈತನ ದೇಹವನ್ನು ಜೋಕೆಯಿಂದ ಕಾಯುತ್ತಿರಿ. ಈತನೊಡನೆ ಕಾದಂಬರಿಯ ಪುನಃ ಸಮಾಗಮವಾಗುವದು ನಿಶ್ಚಿತ.' ಬಳಿಕ ಪತ್ರಲೇಖೆ ಮೂರ್ಛೆ ತಿಳಿದೆದ್ದವಳೇ ಹೋಗಿ ಇಂದ್ರಾಯುಧದೊಡನೆ ಅಚ್ಛೋದ ಸರಸ್ಸಿನಲ್ಲಿ ಹಾರಿಬಿಟ್ಟಳು. ಒಡನೆಯೇ ಕೇಯೂರಕನು ಎದ್ದು ಬಂದು ಹೇಳತೊಡಗಿದನು. "ಪುಂಡರೀಕನು ವಿರಹವಿಹ್ವಲನಾಗಿ ಚಂದ್ರನನ್ನು ಕುರಿತು 'ನೀನು ಎರಡು ಸಲ ಮನುಷ್ಯನಾಗಿ ಹುಟ್ಟು' ಎಂದು ಶಪಿಸಿದನಂತೆ, ಅದರಿಂದ ಕ್ರುದ್ಧನಾದ ಚಂದ್ರನು, 'ನೀನೂ ನನ್ನೊಡನೆ ಸುಖದುಃಖವನ್ನನುಭವಿಸು', ಎಂದು ಶಾಪ

ಬಿತ್ತು, ಪುಂಡರೀಕನ ದೇಹವನ್ನು ಈಗ ಚಂದ್ರಲೋಕದಲ್ಲಿ ಕಾಪಾಡುತ್ತಿದ್ದಾನೆ. 'ಶ್ವೇತಕೇತು ಮುನಿಗಳಿಗೆ ಆಯುಷ್ಕಾಮ ಹೋಮವನ್ನು ಮಾಡುವಂತೆ ತಿಳಿಸು', ಎಂದು ಚಂದ್ರನು ನನಗೆ ಅಪ್ಪಣೆ ವಿಧಿಸಿದ್ದನು. ಮುನಿಗೆ ಈ ವಾರ್ತೆಯನ್ನು ತಿಳಿಸಲು ಲಗುಬಗೆಯಿಂದ ಬರುವಾಗ ನಾನು ವೈಮಾನಿಕನೊಬ್ಬನನ್ನು ದಾಟಿದೆನು. ನಾನು ಅರಿಯದೆ ತಪ್ಪುಮಾಡಿದೆನೆಂದು ಎಷ್ಟು ಹೇಳಿದರೂ ಕೇಳದೆ ನೀನು ವಾಹನವಾಗೆಂದು, ಅವನು ಶಪಿಸಿದ್ದನು. 'ಆದರೂ ಆಗಲಿ, ನನ್ನ ಗೆಳೆಯನ ಬಳಿ ಇರುವಂತೆ ಅನುಗ್ರಹಿಸು,' ಎಂದು ಹೇಳಿಕೊಳ್ಳಲು ಅವನು 'ತಥಾಸ್ತು' ಎಂದನು. ಚಂದ್ರನು ತಾರಾಪೀಡರಾಜನ ಮಗನಾಗಿಯೂ, ಪುಂಡರೀಕನು ಮಂತ್ರಿಕುಮಾರ ವೈಶಂಪಾಯನನಾಗಿಯೂ ಹುಟ್ಟಿದರು. ನಾನು ಇಂದ್ರಾಯುಧನಾಗಿ, ಸಮುದ್ರದಲ್ಲಿ ಬಿದ್ದೆನು. ಪಾರಶೀಕರಾಜನು ನನ್ನನ್ನು ಹಿಡಿದು ತಾರಾಪೀಡನಿಗೆ ಕಾಣ್ಕೆಯಾಗಿ ಒಪ್ಪಿಸಿದನು. ನಾನು ಚಂದ್ರಾಪೀಡನಿಗೆ ವಾಹನವಾದೆನು. ಅಚ್ಛೋದ ಸರಸ್ಸಿನಲ್ಲಿ ಬಿದ್ದೊಡನೆಯೇ, ನನ್ನ ಶಾಪ ಕಳೆಯಿತು. ನಾನೀಗ ಶ್ವೇತಕೇತು ಮುನಿಗಳ ಬಳಿಗೆ ಹೋಗುತ್ತೇನೆ." ಎಂದು ಹೇಳಿ ಕೇಯೂರಕನು ಹೊರಟು ಹೋದನು.

ಮಹಾಶ್ವೇತೆ ಕಾದಂಬರಿಯನ್ನು ವಿಧವಿಧವಾಗಿ ಸಂತೈಸಿದಳು. "ತಂಗೀ ನಮ್ಮೀರ್ವರ ಸುಖದುಃಖ ಒಂದೇ. ತಾಳು, ಕೊಂಚ ತಾಳು, ಸಾಕ್ಷಾತ್ ಚಂದ್ರನೇ ಒಲಿದಿರುವಾಗ ಇನ್ನೇನು!" ಎಂದು. ಚಂದ್ರಾಪೀಡನ ತಾಯಿತಂದೆಗಳು ಮಗನ ವಿಷಯವನ್ನೆಲ್ಲ ತಿಳಿದು, ಅಲ್ಲಿಗೆ ಬಂದು ಶೋಕಾಕುಲರಾಗಿದ್ದರು. ಇದು ಚಂದ್ರಾಪೀಡನ ವಿಚಾರವಾಯಿತು. ಪುಂಡರೀಕನು ಮುನಿಕುಮಾರನಾಗಿದ್ದು, ಮಹಾಶ್ವೇತೆಗೆ ಮುಗ್ಧನಾಗಿ, ದೇವತ್ವವನ್ನು ಕಳೆದುಕೊಂಡು, ಬಳಿಕ ವೈಶಂಪಾಯನನಾಗಿ, ಮತ್ತೆ ಮಹಾಶ್ವೇತೆಯನ್ನು ಮೋಹಿಸಿ ಶಾಪದಿಂದ ಗಿಳಿಯಾದನು', ಎಂದು ಜಾಬಾಲಿ ಮುನಿಗಳು ಹೇಳುತ್ತಿರಲು, ಗಿಳಿಗೆ ಎಚ್ಚರ ಬಂದು, ಹಿಂದಣ ಜನ್ಮಗಳ ವಿದ್ಯೆಯೆಲ್ಲ ಪ್ರಾಪ್ತವಾಗಿ, ಮುನಿವರರನ್ನು ಕುರಿತು ಹೇಳತೊಡಗಿತು. "ಜಾತಿಸ್ಮರತೆಯಿಂದ ಮುಕ್ತಿಯುಂಟಾಗುತ್ತದೆಂಬ ಮಾತು ಸುಳ್ಳು. ಏಕೆಂದರೆ ಮಹಾಶ್ವೇತೆಯಲ್ಲಿಯ ನನ್ನ ಅನುರಾಗ ಜನ್ಮಜನ್ಮಕ್ಕೂ ಹೆಚ್ಚಾಗುತ್ತಿದೆ. ಮಿತ್ರ ಚಂದ್ರನನ್ನು ನೋಡಬೇಕೆಂಬ ಆಶೆಯಾಗಿದೆ. ಅವನು ಎಲ್ಲಿರುವನೆಂಬುದನ್ನು ಹೇಳಿದರೆ ತುಂಬಾ ಉಪಕಾರವಾಗುವದು."

ಮುನಿಗಳು, "ಪಕ್ಕಗಳು ಬಲಿತ ಮೇಲೆ ಹೋಗುವೆಯಂತೆ" ಎಂದು ಸಮಾಧಾನ ಹೇಳಿ ಹೊರಟುಹೋದರು. ಇಷ್ಟರಲ್ಲಿ ನನ್ನ ಪೂರ್ವಜನ್ಮದ ಮಿತ್ರನಾದ ಕೇಯೂರಕನು ಬಂದು ತಂದೆಯಾದ ಶ್ವೇತಕೇತು ಮುನಿಗಳು ಆಯುಷ್ಕಾಮ ಹೋಮವನ್ನು ಮಾಡುತ್ತಿರುವರೆಂದೂ, ತಾಯಿಯಾದ ಲಕ್ಷ್ಮೀ ದೇವಿಯೂ ಅದಕ್ಕೆ ನೆರವಾಗಿರುವಳೆಂದೂ ಹೇಳಿ ಹೋದರು. ಆ ಹೋಮ ಮುಗಿಯುವ ವರೆಗೆ ನಾನು ಇಲ್ಲಿಯೇ ಇರಬೇಕೆಂದು ಅವರ ಆಜ್ಞೆಯಂತೆ! ಕೆಲಕಾಲದ ತರುವಾಯ ನನ್ನ ಪಕ್ಕಗಳು ಬಲಿತು ಹಾರಲನುವಾದೆನು. ಚಂದ್ರಾಪೀಡನನ್ನು ಕಾಣುವ ಆಶೆಯಿಂದ, ಜಾಬಾಲಿ ಮುನಿಗಳ ಆಶ್ರಮದಿಂದ ತಪ್ಪಿಸಿಕೊಂಡು ಹಾರಿದೆನು. ಮಾರ್ಗಮಧ್ಯದಲ್ಲಿ ದಣಿದು ಒಂದು ಗಿಡದ ಮೇಲೆ ವಿಶ್ರಮಿಸಿರುವಾಗ, ನನ್ನನ್ಯಾರೋ ಬಲೆಯಲ್ಲಿ ಹಿಡಿದಿದ್ದರು. ಗೆಳೆಯ ನನ್ನು ನೋಡಲು ಹೊರಟಿದ್ದೇನೆಂದು ಎಷ್ಟು ಅಂಗಲಾಚಿ ಬೇಡಿಕೊಂಡರೂ ಆ ದುಷ್ಟನು ನನ್ನನ್ನು ಬಿಡಲಿಲ್ಲ. ನನ್ನನ್ನೊಯ್ದು ಆ ಚಂಡಾಲಕನ್ನೆಗೆ ಕೊಟ್ಟನು. ಅವಳು ನನ್ನನ್ನು ಪಂಜರದಲ್ಲಿರಿಸಿ ನಿನ್ನ ಬಳಿಗೆ ತಂದಳು. ಏಕೆ ತಂದಳೆಂಬುದು ಮಾತ್ರ ನನಗೆ ಗೊತ್ತಾಗದು" ಎಂದು ಹೇಳಿ ಗಿಳಿ ಸುಮ್ಮನಾಯಿತು. ರಾಜನು ಆಶ್ಚರ್ಯದಿಂದ ಚಾಂಡಾಲಕನ್ಯೆಯನ್ನು ಕರೆಸಿ ಕೇಳಲು ಅವಳು ಹೇಳತೊಡಗಿದಳು, "ಶೂದ್ರಕರಾಜನೇ ಚಂದ್ರಾಪೀಡನಾಗಿದ್ದ ಚಂದ್ರನು; ಈ ಗಿಳಿಯೇ ವೈಶಂಪಾಯನನಾಗಿದ್ದ ಪುಂಡರೀಕನು, ನಾನೇ ಲಕ್ಷ್ಮಿ; ಶ್ವೇತಕೇತುಗಳ ಆಜ್ಞೆಯಂತೆ ಹೋಮ ಮುಗಿಯುವ ವರೆಗೂ ಇವನನ್ನು ಸೆರೆಯಲ್ಲಿಟ್ಟಿದ್ದೆ. ಈಗ ಹೋಮ ಮುಗಿಯುತ್ತ ಬಂದದ್ದರಿಂದ, ಮಿತ್ರನ ಬಳಿಗೆ ಕರೆದುತಂದಿದ್ದೇನೆ. ಇನ್ನು ನೀವೀರ್ವರೂ ದಿವ್ಯದೇಹಗಳನ್ನು ಪಡೆದು ಇಷ್ಟಜನಸಮಾಗಮಸುಖವನ್ನು ಪಡೆಯಬಹುದು." ಎಂದು ಹೇಳಿದವಳೇ ಲಕ್ಷ್ಮಿ ಆಕಾಶಕ್ಕೆ ಹಾರಿದಳು. ಚಂದ್ರಾಪೀಡ, ವೈಶಂಪಾಯನರು ದಿವ್ಯ ದೇಹಗಳನ್ನು ಪಡೆದು ತಮ್ಮ ತಮ್ಮ ಇಷ್ಟಜನರೊಡನೆ ಸುಖವಾಗಿದ್ದರು.

**ಕಥೆ ಇಲ್ಲಿಗೆ ಸುಖಾಂತವಾಗಿ ಕೊನೆಗಾಣುತ್ತದೆ**

# ಕಾದಂಬರಿಯ ಕಥಾವಿಮರ್ಶೆ

ಬಾಣಭಟ್ಟನು ಕೃತಿಗೆ "ಕಾದಂಬರಿ" ಎಂಬ ಹೆಸರಿಟ್ಟದ್ದರಿಂದ, ಮತ್ತು 'ಕಾದಂಬರಿ' ಎಂಬ ನಾಯಿಕೆಯೂ ಕಥೆಯಲ್ಲಿದ್ದುದರಿಂದ, ಈ ಕೃತಿಯಲ್ಲಿ 'ಕಾದಂಬರಿ'ಯ ಕಥೆಯೇ ಮುಖ್ಯ ಎಂದು ತಿಳಿದುಕೊಳ್ಳಬಹುದು. ಇದಿಷ್ಟು ಆಧಾರವಿಲ್ಲದೆ ಹೋದರೆ ಮುಖ್ಯ ಕಥೆಯಾವುದು, ಪ್ರಾಸಂಗಿಕವಾಗಿ ಬರುವ ಗೌಣಕಥೆಯಾವುದು ಎಂದು ತಿಳಿದುಕೊಳ್ಳುವದೇ ಅಸಾಧ್ಯವಾಗಿಬಿಡುತ್ತದೆ. ಓದುತ್ತಹೋದಂತೆ, ನಮಗೆ ಮೊದಲು ಕಾಣಿಸಿಕೊಳ್ಳುವವಳು ಮಹಾಶ್ವೇತೆಯೇ! ಈ ಮಹಾಶ್ವೇತೆಯ ಮೂಲಕ ಕಾದಂಬರಿಯ ಪರಿಚಯ ದೈವವಶಾತ್ ಅಲ್ಲಿಗೆ ಬಂದಿದ್ದ ಚಂದ್ರಾಪೀಡನಿಗಾಗುವದು ಪ್ರಥಮದೃಷ್ಟಿಯಲ್ಲಿಯೇ ಅವರಿಬ್ಬರಲ್ಲಿ ಅನುರಾಗವುಂಟಾಗುವದು. ಅವರೀರ್ವರಲ್ಲಿ ವಿರಹವುಂಟಾಗಿ ಮತ್ತೆ ಮಿಲನವಾಗುವಲ್ಲಿ ಕಥೆ ಪರಿಸಮಾಪ್ತಿಯಾಗುವದು. ಆದರೆ ಇವರಿಬ್ಬರ ಕಥೆಗಿಂತ ಪ್ರಾಸಂಗಿಕವಾದುದೆಂದು ನಾವು ತಿಳಿಯುವ ಮಹಾಶ್ವೇತೆಯ ಕಥೆಯೇ ಚಿತ್ತಾಕರ್ಷಕವಾಗಿದೆ. ಮುಖ್ಯ ಕಥೆಯ ಯಾವ ಭಾಗಕ್ಕೂ ಅನ್ಯಾಯವಾಗದಂತೆ, ಪ್ರಾಸಂಗಿಕ ಘಟನೆಯನ್ನು, ಇನ್ನಿತರ ವರ್ಣನೆಗಳನ್ನು ಔಚಿತ್ಯವರಿತು, ಮೇರೆಮೀರದಂತೆ, ತರಬೇಕಾದುದು ಲೇಖಕನ ಕರ್ತವ್ಯ. 'ಕಾದಂಬರಿ'ಯಲ್ಲಿ ಮುಖ್ಯ ಕಥೆಗಿಂತ ಗೌಣಘಟನೆಗಳು ಗಿಳಿಯ ಕಥೆ, ಮಹಾಶ್ವೇತೆಯ ಕಥೆಗಳು ಹೆಚ್ಚು ರಮ್ಯವಾಗಿ ಬಂದಿವೆ. ಅಲ್ಲದೆ ವರ್ಣನೆಗಳಂತೂ ಅಸಂಖ್ಯ— ಗಿಳಿಮರಿ, ವಿಂಧ್ಯಾಟವಿ, ಬೇಡರಪಡೆ, ಶೂದ್ರಕ ನೃಪತಿ, ಅವನ ಆಸ್ಥಾನ, ಅಲ್ಲಿಯ ಮಂತ್ರಿಗಳು, ವಿದ್ವಾಂಸರು, ವಾರವನಿತೆಯರು, ಹಾರೀತ, ಜಾಬಾಲಿಯ ತಪೋಭೂಮಿ, ಕಿನ್ನರಮಿಥುನ, ಮಹಾಶ್ವೇತೆ, ಗಂಧರ್ವರಾಜಧಾನಿ, ಕಾದಂಬರಿ— ಇತ್ಯಾದಿಯಾಗಿ ಚೇತನಾಚೇತನ ವಸ್ತುಗಳನ್ನೂ ಲೆಕ್ಕಿಸದೆ ಬಾಣ ನಿಷ್ಪಕ್ಷಪಾತ ಬುದ್ಧಿಯಿಂದ ತನ್ನ ವರ್ಣನೆಗಳನ್ನು ಮುಂದುವರಿಸುತ್ತಾನೆ.

ಬಾಣನಿಗೆ ಕಥೆ ಒಂದು ನೆಪ ಮಾತ್ರ. ಕಥಾಸೂತ್ರವನ್ನು ಅಲ್ಲಿಯೇ ಬಿಟ್ಟು, ರಸಿಕವೃಂದ, ಪದಬಂಧಪ್ರೌಢಿಮೆಯನ್ನೂ, ಭಾಷಾಪ್ರಭುತ್ವವನ್ನೂ ಕವಿಯ ವರ್ಣನಾಶಕ್ತಿಯನ್ನೂ ಮೆಚ್ಚಿ ತಲೆದೂಗಿದರೆ, ಕವಿಗೆ ಅದೇ ಸಮಾ

ಇಷ್ಟ್ರೀಯು

ಧಾನ! ಅಚ್ಛೋದಸರಸ್ಸಿನ ವರ್ಣನೆಯೋ ಆಗಲಿ, ಮಹಾಶ್ವೇತೆಯ ವಿರಹ ಪೀಡಿತಮನೋವೇದನೆಯೇ ಆಗಲಿ ಅಥವಾ ಸಮುದ್ರಪಲಯಾಂಕಿತ ಭೂಮಿಗಧಿಪತಿ ಶೂದ್ರಕರಾಜನೇ ಆಗಿರಲಿ, ಕವಿ ತನ್ನ ಸೂಕ್ಷ್ಮ ನಿರೀಕ್ಷಣೆ ಯಿಂದ, ಅಂತರ್ದೃಷ್ಟಿಯಿಂದ, ಅವರ ಸುಸ್ಪಷ್ಟ ಚಿತ್ರವನ್ನು ನಮ್ಮೆದುರು ಇಡುತ್ತಾನೆ. ಟಾಗೋರರು ಹೇಳುವಂತೆ, "ಸಮಸ್ತ ಕಾದಂಬರಿ ಒಂದು ಚಿತ್ರಶಾಲೆ. ಇನ್ನುಳಿದ ಲೇಖಕರು ಘಟನೆಗಳನ್ನು ಹೇಳಿ ಕಥೆಯನ್ನು ಮುಂದುವರಿಸಿದರೆ, ಬಾಣಭಟ್ಟನು, ಚಿತ್ರಗಳನ್ನು ಶೃಂಗರಿಸಿ, ಕಥೆಯನ್ನು ಹೇಳುತ್ತಾನೆ. ಆದರಿಂದಲೇ ಅವನ ಕಥೆ ಮುಂದೆ ಸಾಗತಕ್ಕದ್ದಲ್ಲ." ಚಿತ್ರ ಶಾಲೆಯಲ್ಲಿ ಪ್ರವೇಶಿಸಿದಂತೆನಿಸಿದರೂ, ಚಿತ್ರಗಳಿಂದಾಗಬೇಕಾದ ಕಥೆಯ ಒಟ್ಟು ಪರಿಣಾಮ ಇವುಗಳಿಂದಾಗುವದಿಲ್ಲ. ಚಿತ್ರಗಳಲ್ಲಿ ಧಾರಾವಾಹಿಕತೆ ಇಲ್ಲದಿರುವದೇ ಇದಕ್ಕೆ ಕಾರಣ.

"ಬಾಣನಿಗೆ ಕಥೆಯನ್ನು ಹೇಳಬೇಕೆಂಬ ಸ್ಪಷ್ಟ ಉದ್ದೇಶವಿದ್ದರೂ, ಆತನು ದೇವವಾಣಿಯ ಗೌರವಕ್ಕೆ ಎಲ್ಲಿಯೂ ಅನ್ಯಾಯವಾಗದಂತೆ ನೋಡಿ ಕೊಂಡಿದ್ದಾನೆ. ಸಂಸ್ಕೃತ ಭಾಷೆಯನ್ನು ಅನುಚರರಿಂದೊಡಗೂಡಿದ ಚಕ್ರ- ವರ್ತಿಗಳಂತೆ ಮುಂದೆ ಮಾಡಿಕೊಂಡು, ಕಥೆಯು ಕಣ್ಣಿಗೆ ಬೀಳದಂತೆ ಅವರ ಹಿಂದೆ ಆತಪತ್ರವನ್ನು ರಾಜಮರ್ಯಾದೆ ಸಹಿತನಾಗಿ ಹಿಡಿದುಕೊಂಡು ಹೋಗುವಲ್ಲಿಯೇ ಅವನಿಗೆ ಹೆಮ್ಮೆ!"

ಕಥೆಯ ಪ್ರಾರಂಭವನ್ನು ಕವಿಯೇ ಮಾಡುವನಾದರೂ ಕಥೆಯ ಬಹು ಭಾಗ ಭಿನ್ನ ಭಿನ್ನ ಪಾತ್ರಗಳ ಬಾಯಲ್ಲಿಯೇ ಬರುವದು. ಗಿಳಿಮರಿ, ಜಾಬಾಲಿ ಮುನಿಗಳು, ಮಹಾಶ್ವೇತೆ, ಕೇಯೂರಕ, ಚಾಂಡಾಲ ಕನ್ಯೆ–ಇವರೆಲ್ಲ ಕಥೆಯನ್ನು ಮುಂದುವರಿಸುವರು. ಆದರೆ ಸಾಮಾನ್ಯ ಓದುಗನು ಮಾತ್ರ ಕಥೆ ಎಲ್ಲ ಪ್ರಾರಂಭವಾಗಿ ಎಲ್ಲಿ ಹೊರಟಿತೆಂದು ಹೇಳುವದು ಅಸಾಧ್ಯವಾಗಿಬಿಡುತ್ತದೆ. ಇವರೆಲ್ಲರೂ ಕಥೆಯನ್ನು ಹೇಳುವದು ಒಂದೇ ಶೈಲಿಯಲ್ಲಿ; ಗಿಳಿಮರಿಯದೂ ಅದೇ ಶೈಲಿ, ಜಾಬಾಲಿಮುನಿಗಳದೂ ಅದೇ ಶೈಲಿ! ಪಾತ್ರಾಪಾತ್ರಗಳ ಔಚಿತ್ಯ ವನ್ನು ಬಾಣನು ಅರಿಯ ಎಂದು ಕಟುವಾಗಿ ಹೇಳುವದಕ್ಕಿಂತಲೂ, ಓದುಗರ ಲಕ್ಷ್ಯವು ಕೂಡ ಇತ್ತ ಹೊರಳದಂತೆ ಭಾಷೆಯ ವೈವಿಧ್ಯದಿಂದ ಸಹೃದಯರನ್ನು ಸೆರೆಹಿಡಿಯುವ ಶಕ್ತಿ ಬಾಣನ ಲೇಖನಿಯಲ್ಲಿದೆ ಎಂದು ಹೇಳುವದೇ ಹೆಚ್ಚು ಒಳ್ಳೆಯದು! ಬಾಣನ ವಾಣಿಯೊಂದು ವೈವಿಧ್ಯಧಾರಿ!

ಕಾದಂಬರಿಯನ್ನು ರಚಿಸುವಲ್ಲಿ ಬಾಣನ ಉದ್ದೇಶ, ವರ್ಣನೆಯೇನೋ ಎಂದು ಭಾಸವಾಗುವ ಸಂಭವವಿದ್ದರೂ, ಕಾದಂಬರೀ ಕಥೆಯ ಸಂವಿಧಾನ ಬೇರೆ! ಈ ಕಥೆಗೆ ಸಂವಿಧಾನಗಳೆರಡು; ಒಂದು, ತ್ಯಾಗದಿಂದ, ಸಹನೆಯಿಂದ ಪ್ರೀತಿಯು ಪಾವಿತ್ರ್ಯದ ಚರಮಸೀಮೆಯನ್ನು ಮುಟ್ಟಬಲ್ಲದು ಎಂಬದು; ಶುದ್ಧಪ್ರೇಮದ ಸಂಸ್ಕಾರ ಜನ್ಮಜನ್ಮಾಂತರಗಳಲ್ಲೂ ಬೆನ್ನು ಬಿಡದು, ಎಂಬುದು ಮತ್ತೊಂದು! ಮೊದಲನೆಯದು ಕಾದಂಬರಿ ಮಹಾಶ್ವೇತೆಯರ ಜೀವನ ಚರಿತೆಯಿಂದ ವ್ಯಕ್ತವಾಗುತ್ತದೆ. "ಕಾದಂಬರಿ" ಒಂದು ಪ್ರಣಯಕಥೆ ನಿಜ. ಆದರೆ ಈ ಪ್ರಣಯದ ಸ್ವರೂಪ ವಿಕಾರರಹಿತವಾಗಿ ಗಂಭೀರವಾಗಿದೆ, ಪವಿತ್ರವಾಗಿದೆ. ಕಾದಂಬರಿಯ ಪ್ರಥಮದರ್ಶನದಿಂದಲೇ ಹುಟ್ಟಿದ ಅನುರಾಗ ಸೂಕ್ಷ್ಮವಾಗಿ ಬೆಳೆದು, ಚಂದ್ರಾಪೀಡನ ಪುನರ್ಜನ್ಮದಲ್ಲೂ ಬೆನ್ನಟ್ಟಿ ವಿಕಸಿತವಾದುದನ್ನು ಕವಿ ಬಹು ರಮ್ಯವಾಗಿ ವರ್ಣಿಸಿದ್ದಾನೆ, ನಿಜ; ಆದರೆ ಕಾದಂಬರಿಯ ಈ ಕಥೆಗಿಂತ ಮಹಾಶ್ವೇತೆಯ ಪ್ರಣಯಕಥೆಯೇ ಹೆಚ್ಚು ಮಾರ್ಮಿಕವಾಗಿ ಮೂಡಿಬಂದಿದೆ ಕಾದಂಬರಿಯಲ್ಲಿ! "ಸ್ನೇಹಾನಾಹುಃ ಕಿಮಪಿ ವಿರಹೇ ಧ್ವಂಸಿನಸ್ತೇ ಹ್ಯಭೋಗಾದಿಷ್ಟೇ ವಸ್ತುನ್ಯುಪಚಿತರಸಾಃ ಪ್ರೇಮರಾಶೀ ಭವಂತಿ" ಎಂಬ ಕಾಲಿದಾಸನ ಮಾತು ಮಹಾಶ್ವೇತೆ ಪುಂಡರೀಕರಲ್ಲಿ ಸತ್ಯವಾಗಿ ಪರಿಣಮಿಸಿದೆ. ವಿರಹದಿಂದ, ಅದರ ವೇದನೆಯನ್ನು ಸಹಿಸುವದರಿಂದ, ಮಹಾಶ್ವೇತೆಯ ಪ್ರೇಮ ಆಧ್ಯಾತ್ಮಿಕ ಸೌಂದರ್ಯವನ್ನು ಪಡೆದಿದೆ. ಮಹಾಶ್ವೇತೆ ಸ್ವತಃ ವಿರಹಪೀಡಿತಳಾಗಿದ್ದರೂ, ಕಾದಂಬರಿಯ ಭವಿತವ್ಯದಲ್ಲಿ ಅವಳು ವಹಿಸುವ ಆಸ್ಥೆ, ಅವಳ ದೊಡ್ಡ ಮನಸ್ಸು, ಅತಿಥಿಗಳನ್ನು ಸತ್ಕರಿಸುವ ಅವಳ ಹೃದಯ ಇವೆಲ್ಲ ನಮ್ಮನ್ನು ಮುಗ್ಧರನ್ನಾಗಿ ಮಾಡುತ್ತವೆ.

ಶುದ್ಧಪ್ರೇಮದ ಸಂಸ್ಕಾರ ಜನ್ಮಾಂತರದಲ್ಲೂ ಬೆನ್ನುಬಿಡದು ಎಂದು ತೋರಿಸಲು ಕವಿಯು ಜನ್ಮಗಳ ಜಟಿಲ ಸಮಸ್ಯೆಯನ್ನೇ ಎತ್ತಿಕೊಂಡಿದ್ದಾನೆ. ಸಂಸ್ಕೃತ ಸಾಹಿತ್ಯದಲ್ಲಿ ಉಳಿದೆಡೆಗೆ ಬರುವದು, ಈ ಪ್ರೇಮ, ಜನ್ಮಜನ್ಮಗಳಲ್ಲೂ ಇರಲಿ ಎಂಬ ಆಶೆ, ವಿಶ್ವಾಸ ಮಾತ್ರ. ರಾಮಚಂದ್ರನು ಸೀತಾದೇವಿಯನ್ನು ವನಕ್ಕಟ್ಟಿದಾಗಲೂ ಅವಳು ರಾಮನನ್ನು ಶಪಿಸದೆ 'ಮುಂದಿನ ಜನ್ಮದಲ್ಲೂ ನೀನೇ ನನ್ನ ಪತಿಯಾಗಿರಬೇಕೆಂದು ತಪಸ್ಸುಗೈಯ್ಯುತ್ತೇನೆ.' ಎನ್ನುತ್ತಾಳೆ. ಆದರೆ ಬಾಣಭಟ್ಟ ಇಲ್ಲಿ ಅದನ್ನು ಪ್ರತ್ಯಕ್ಷ ಎದುರಿಸಿದ್ದಾನೆ. ಪುಂಡರೀಕ, ಗಿಳಿ, ವೈಶಂಪಾಯನ ಈ ಮೂರು ಜನ್ಮಗಳ ಕಥೆ, ಜೊತೆಗೆ ಜಾತಿಸ್ಮರತೆ,

[illegible]

ಕಥೆಯನ್ನು ಜಟಿಲವಾಗಿ ಮಾಡಿವೆ. ಅದೇ ರೀತಿ ಚಂದ್ರಾಪೀಡನ ಜನ್ಮಗಳ ವಿಚಾರ! ಮುಂದಣ ಜನ್ಮಕ್ಕೆ ಕಾರಣವಾದ ಪುಂಡರೀಕನ ಕಥೆ ಮಹಾಶ್ವೇತೆಯಿಂದ, ಗಿಳಿಯ ಕಥೆ ಜಾಬಾಲಿ ಮುನಿಗಳಿಂದ— ವೈಶಂಪಾಯನನ ಕಥೆ ಕೇಯೂರಕ, ಚಾಂಡಾಲಕನ್ಯೆಯರಿಂದ ವರ್ಣಿತವಾಗಿದೆ. ತಿರ್ಯಗ್ ಜಾತಿಯಲ್ಲಿ ಹುಟ್ಟಿದರೂ ಈ ಸಂಸ್ಕಾರ ಬೆನ್ನುಬಿಡದು, ಎಂಬುದನ್ನು ಕವಿ ಬಹು ಸೂಕ್ಷ್ಮವಾಗಿ ಹೇಳಿದ್ದಾನೆ. ಪುಂಡರೀಕ ಚಂದ್ರಾಪೀಡರ ಜನ್ಮಾಂತರಗಳ ಸಮಸ್ಯೆಯನ್ನು ಎದುರಿಸಿದಂತೆ, ಮಹಾಶ್ವೇತೆ, ಕಾದಂಬರಿಯರ ಜನ್ಮಾಂತರಗಳ ಸಮಸ್ಯೆಯನ್ನೂ ತಂದಿದ್ದರೆ, ಕಥೆಯ ಗತಿ ಏನೇನಾಗುತ್ತಿತ್ತೊ! ಆದರೆ ಅವರನ್ನು ಹಾಗೇ ಇರಗೊಟ್ಟು ತ್ಯಾಗ, ಸಹನೆಗಳ ಹಿರಿಮೆಯನ್ನು ಕವಿ ಎತ್ತಿ ತೋರಿಸಿದ್ದಾನೆ.

ಆ ಸಮಯದ ವಿಶಿಷ್ಟ ಅಭಿರುಚಿಯಿಂದ, ಅದ್ವಿತೀಯ ಶೈಲಿಯಿಂದ, ಪ್ರಣಯಕಥೆಯ ಸಂವಿಧಾನನಿರೂಪಣೆಯ ಹಿರಿಮೆಯಿಂದ, ಸಂಸ್ಕೃತ ಸಾಹಿತ್ಯದಲ್ಲಿ 'ಕಾದಂಬರಿ' ತನ್ನದೇ ಆದ ಒಂದು ಸ್ಥಾನವನ್ನು ಗಳಿಸಿದೆ ಎಂದು ಹೇಳಬಹುದು.

ಬಾಣಕವಿಯು, 'ಕಾದಂಬರಿ'ಯನ್ನು ಪೂರ್ಣವಾಗಿ ರಚಿಸಲಿಲ್ಲ. ಚಂದ್ರಾಪೀಡನು ಕಾದಂಬರಿಯ ಪ್ರಥಮ ಸಂದರ್ಶನವನ್ನು ಪಡೆದು ತಿರುಗಿ ಬರುವ ವರೆಗೆ ಮಾತ್ರ ಬರೆದನು. ಉಳಿದುದನ್ನು ಅವನ ಮಗ ಭೂಷಣ ಭಟ್ಟನು, ತಂದೆಯ ಇಚ್ಛೆಯಂತೆಯೇ ಬರೆದು ಪೂರೈಸಿದನು. ಈ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಶೈಲಿಯಲ್ಲಿ ಅಂತರವಿದೆ. ಪೂರ್ವಾರ್ಧದ ದೈವೀವಾಗ್ಧಾರೆಯ ಮಾಯೆ ಉತ್ತರಾರ್ಧದಲ್ಲಿಲ್ಲ ಎಂದು ವಿದ್ವಾಂಸರ ಅಭಿಪ್ರಾಯ. ಏನಿದ್ದರೂ ಸಾಮಾನ್ಯ ಓದುಗನ ದೃಷ್ಟಿಯಿಂದ ಎರಡೂ ಶೈಲಿ, ಅಷ್ಟೇ ಕಠಿಣ!

ಸುಬಂಧುವಿನೊಡನೆ ಸ್ಪರ್ಧಿಸಲೇಬೇಕೆಂದು ಹೊರಟಿರುವ ಬಾಣ, ಕಾದಂಬರಿ, ಹರ್ಷಚರಿತಗಳಲ್ಲಿ, ಸ್ವಲ್ಪ ಕೃತ್ರಿಮನಾಗಿ ಕಾಣುತ್ತಾನೆ. ಕಥೆಯಲ್ಲಿ ಕಥೆಯನ್ನು ತೊಡಕಿಸಿರುವಲ್ಲಿ, 'ದಶಕುಮಾರಚರಿತ,' 'ವಾಸವದತ್ತ' ಗಳನ್ನು 'ಕಾದಂಬರಿ' ಹೋಲುತ್ತಿದ್ದರೂ ಕಥಾಸರಣಿ ಸರಳವಾಗಿಲ್ಲ. ಗುಣಾಢ್ಯನ ಬೃಹತ್ಕಥೆ 'ಕಾದಂಬರಿ'ಗೆ ಮೂಲವಾಗಿದ್ದರೂ ಬಾಣನು ಅದನ್ನು ವಿಸ್ತರಿಸಿ, ಪಂಡಿತ ಕವಿಯ ಕುಂಚದಿಂದ ಅಲ್ಲಲ್ಲಿ ಬಣ್ಣ ಬಳಿದು ಹೇಳುವ

ಪ್ರಯತ್ನ ಮಾಡಿದ್ದಾನೆ. ಕಥೆಯ ಬಹುಭಾಗವನ್ನು ಗಿಳಿಮರಿಯಿಂದ ಹೇಳಿಸುವದು ಅಷ್ಟೊಂದು ಸಮಂಜಸವಾಗಿಲ್ಲ. ಶೂದ್ರಕನ ಪಾತ್ರ ಕಥೆಯಲ್ಲಿ ಬರದೇ ಹೋಗಿದ್ದರೂ ನಡೆಯಬಹುದಿತ್ತು ಎನ್ನುವ ಹಾಗಿದೆ. ಆದರೆ ಕವಿಯ ಕೌಶಲ್ಯ ಮಹಾಶ್ವೇತೆಯ ಧೀರಗಂಭೀರ ಪ್ರಣಯ, ಕಾದಂಬರಿಯ ಚಂಚಲಚಿತ್ತ, ಇವುಗಳನ್ನು ಸ್ಪಷ್ಟವಾಗಿ, ಒಂದಕ್ಕೊಂದು ಪೂರಕವಾಗುವಂತೆ ಚಿತ್ರಿಸುವಲ್ಲಿದೆ! ಶೂದ್ರಕ ತಾರಾಪೀಡರ ರಾಜವೈಭವ ಒಂದೆಡೆ, ಮುನಿಗಳ ಆಶ್ರಮದ ಗಭೀರ ಶಾಂತತೆ ಇನ್ನೊಂದೆಡೆ! ಚಂದ್ರಾಪೀಡನಲ್ಲಿಯೇ ನೆಟ್ಟ ಮನಸ್ಸುಳ್ಳ 'ಕಾದಂಬರಿ'ಯ ಚಂಚಲ ಚಿತ್ರ, ಮೊದಲಲ್ಲಾದರೆ, ವಿರಹದುರಿಯಿಂದ ಬಳಲಿ, ಪ್ರೇಮದ ಆಳವನ್ನು ಅರಿಯುವ 'ಕಾದಂಬರಿ'ಯ ಚಿತ್ರ ಕೊನೆಯಲ್ಲಿ! ಅವಳ ಪ್ರೇಮದ ಸಾಫಲ್ಯದಲ್ಲಿ ಬಂದೊದಗುವ ಎಡರುಗಳು ಮಾತ್ರ ಅಮಾನುಷ! ಕಥೆಯೇ ಜಟಿಲವಾದ್ದರಿಂದ ಅದು ಅನಿವಾರ್ಯ. ಶೃಂಗಾರ, ಕರುಣರಸಗಳನ್ನು ಚಿತ್ರಿಸುವಲ್ಲಿ ಬಾಣಕವಿ ನಿಸ್ಸೀಮನೆಂದು ಬೇರೆ ಹೇಳಬೇಕಾಗಿಲ್ಲ. ಚಂದ್ರಾಪೀಡನ ದೇಹತ್ಯಾಗವಾದಾಗ, ಈ ಮಾತು ನಿದರ್ಶನಕ್ಕೆ ಬರುವದು.

"ಬಾಣೋಚ್ಛಿಷ್ಟಂ ಜಗತ್ಸರ್ವಂ" ಎಂಬ ಮಾತು ಬಳಕೆಯಲ್ಲಿ ಬಂದಿದೆ. ಅಂತೂ ಬಾಣಕವಿ ಯಾವ ವಿಷಯವನ್ನೂ ಬಿಟ್ಟಿಲ್ಲ. ನೈಜವಾದ ಅನುಭವವಿದ್ದಲ್ಲಿ, ಮಾತು ಸರಸವಾಗಿದೆ, ಇಲ್ಲದಲ್ಲಿ ಪಾಂಡಿತ್ಯ ಪ್ರಚುರವಾಗಿದೆ! ಚಂದ್ರಾಪೀಡನು ಗುರುಗೃಹದಿಂದ ಹೊರಟ ಸನ್ನಿವೇಶ ಚಿತ್ತಾಕರ್ಷಕವಾಗಿದೆ. ವ್ಯವಹಾರ, ರಾಜನೀತಿಗಳ ದೃಷ್ಟಿಯಿಂದ ಶುಕನಾಸರು ಚಂದ್ರಾಪೀಡನಿಗೆ ಕೊಡುವ ಉಪದೇಶ, 'ಕಾದಂಬರಿ' ಯಲ್ಲಿಯೇ ಹೃದಯಂಗಮವಾದ ಭಾಗವೆಂದು ಹೇಳಬಹುದು.

ಬಾಣನ ಶೈಲಿಯನ್ನು ಕುರಿತು, ಇಂದು ನಾವು ಕಟುವಾಗಿ ಟೀಕಿಸಬಹುದಾದರೂ ಅಂದು ಬಾಣ ಸಾಹಿತ್ಯದ ಹಿರಿಯ ಆಚಾರ್ಯರಲ್ಲಿ ಒಬ್ಬನು. 'ವಕ್ರೋಕ್ತಿ' ಯಲ್ಲಿ, ತಾನು, ಸುಬಂಧು, ಬಾಣ, ಅದ್ವಿತೀಯರೆಂದು 'ಕವಿರಾಜ' ಹೇಳಿಕೊಂಡಿದ್ದಾನೆ. ಅರ್ಥ, ಧ್ವನಿಗಳು ಸರಿದೊರೆಯಾಗಿ ಬರುವ 'ಪಾಂಚಾಲೀ' ಶೈಲಿಯಲ್ಲಿ ಬಾಣನು ಶೀಲಾಭಟ್ಟಾರಿಕೆಯನ್ನೂ ಮೀರಿಸಬಲ್ಲನು! ಧ್ವನಿ ಶಕ್ತಿಯನ್ನು ಬಳಸುವಲ್ಲಿ ಬಾಣ ಬಲು ಗಟ್ಟಿಗನು! ವಾಕ್ಯರಚನೆ, ದೊಡ್ಡ ಸಮಾಸಗಳು, ಮೇರೆ ಮೀರಿ ಬರುವ ವರ್ಣನೆಗಳನ್ನು

ಬಿಟ್ಟರೆ, ಉಳಿದ ವಿಷಯ ಬಾಣನಲ್ಲಿ ನಾವು ಮೆಚ್ಚತಕ್ಕಂತಹದೇ. ಪೌರಾಣಿಕ ಕಥೆಗಳನ್ನೆಲ್ಲ ಒಂದೊಂದೇ ಸಮಾಸದಲ್ಲಿ ಸೇರಿಸಿ ಹೇಳಿಬಿಡುವ ಬಾಣನ ಶಕ್ತಿ ಸುಬಂಧುವನ್ನೂ ಮೀರಿಸಿದ್ದು ; ಶಬ್ದಗಳ ಕುಣಿತ, ಸಣ್ಣ ಸಣ್ಣ ವಾಕ್ಯಗಳು ಎಷ್ಟೋ ಸಲ ಓದುಗರ ಮನವನ್ನು ಸೆಳೆಯುತ್ತವೆ. ಆದರೆ ಅವೇ ಮಿತಿ ಮೀರಿದರೆ ತೀರ ಬೇಸರವನ್ನೂ ಉಂಟುಮಾಡುತ್ತವೆ. 'ಗಿಳಿಗಳ ಚುಂಚು ಕೆಂಪಾಗಿತ್ತೇ ವಿನಾಃ ಸಿಟ್ಟಿನಿಂದ ಅವುಗಳ ಮುಖ ಕೆಂಪಾಗಿರಲಿಲ್ಲ, ಶಕುನಿಯ ಕೊಲೆ ಮಹಾಭಾರತದಲ್ಲಿಯೇ ಹೊರತು ಮುನಿಗಳ ಆಶ್ರಮದಲ್ಲಲ್ಲ" ಇತ್ಯಾದಿ.

ಕಾದಂಬರಿಯ ಉಳಿದ ಭಾಗವನ್ನು ಬರೆದು ಪೂರೈಸಿದ ಬಾಣನ ಮಗನಲ್ಲಿ ತಂದೆಯ ಪ್ರತಿಭೆ ಕಾಣದು. ಪೌರಾಣಿಕ ಕಥೆಗಳನ್ನು ಸಂಗ್ರಹಿಸಿ ಹೇಳುವ ಅವನ ಶಕ್ತಿ, ಭಾಷೆಯ ಮೇಲಿನ ಪ್ರಭುತ್ವ, ತಂದೆಗಿಂತ ಕಡಿಮೆ. ಏನಿದ್ದರೂ ತಂದೆಯ ಶೈಲಿಯಲ್ಲಿಯೇ ಬರೆದು ಪೂರೈಸಬೇಕೆಂಬ ಅವನ ಹವ್ಯಾಸವನ್ನು ನಾವು ಮೆಚ್ಚಲೇ ಬೇಕು.

ಜಟಿಲವಾದಂಥ 'ಕಾದಂಬರಿ'ಯ ಕಥೆಗೆ ಬೃಹತ್ಕಥೆಯೇ ಮೂಲ ನಿಜ; ಇದಕ್ಕೆ ಮೊದಲು ಕಾದಂಬರಿ ಹರ್ಷಚರಿತಗಳಲ್ಲಿ ಯಾವುದು ಮೊದಲು ರಚಿತ ವಾಯಿತೆಂದು ಹೇಳುವದೇ ಕಷ್ಟ. ಶ್ರೀಹರ್ಷನ ಆಸ್ಥಾನದಿಂದ ಬಾಣನು ಮನೆಗೆ ಮರಳಿದಾಗ, ಜನರು ಕುತೂಹಲದಿಂದ ರಾಜನು ಹೇಗಿದ್ದಾನೆಂದು ಕೇಳಿದ ಪ್ರಶ್ನೆಗೆ ಉತ್ತರರೂಪವಾಗಿ, ಬಾಣಕವಿಯು 'ಹರ್ಷಚರಿತ'ವನ್ನು ಬರೆದಿದ್ದಾನಂತೆ !

'ಚಂಡೀಶತಕ,' 'ಪಾರ್ವತೀಪರಿಣಯ'ಗಳನ್ನು ಬಾಣಕವಿ ಬರೆದಿರುವ ನೆಂಬ ಪ್ರತೀತಿ ಇರುವದಾದರೂ, ಬಾಣನ ಶೈಲಿಯಲ್ಲಿಯ ಪ್ರೌಢಿಮೆ ಅವು ಗಳಲ್ಲಿ ಕಂಡುಬರದು ; ಜನ್ಮಜನ್ಮಾಂತರಗಳಲ್ಲಿ ವಿಶ್ವಾಸವಿಡುವ ಭಾರತೀಯ ಮನೋವೃತ್ತಿಗೆ ಕಥೆ ಹೊಂದಿಕೊಳ್ಳಬಹುದು ; ಮತ್ತು ಕಥೆಯ ಸ್ವಾರಸ್ಯ ತಿಳಿಯುವದೂ ಹಾಗೆ ಹೊಂದಿಕೊಂಡರೆ ಮಾತ್ರ !

## 'ಕಾದಂಬರಿ' ಯಲ್ಲಿ ಪಾತ್ರಸೃಷ್ಟಿ

ಕಥೆಯ ದೃಷ್ಟಿಯಿಂದ 'ಕಾದಂಬರಿ' ಯಲ್ಲಿ ಪಾತ್ರಗಳ ಸಂಖ್ಯೆ ಹೆಚ್ಚಾ-ಗಿದೆ. ಒಂದೊಂದು ವ್ಯಕ್ತಿಯ ಮೂರ‍್ಮೂರು ಜನ್ಮಗಳ ಹೆಸರುಗಳನ್ನೂ,

ಕಾರ್ಯಗಳನ್ನೂ, ಜಟಿಲತೆಯನ್ನೂ ನೆನೆಸಿಕೊಂಡರೆ, ಇದೇನೂ ಆಶ್ಚರ್ಯದ ಮಾತಲ್ಲ! ಚಂದ್ರ, ಚಂದ್ರಾಪೀಡ, ಶೂದ್ರಕ– ಪುಂಡರೀಕ, ವೈಶಂಪಾಯನ ಗಿಳಿಮರಿ–ಚಾಂಡಾಲಕನ್ಯೆ ಲಕ್ಷ್ಮಿ–ಕಪಿಂಜಲ, ಇಂದ್ರಾಯುಧ– ಹೀಗೆ ಪಾತ್ರಗಳ ಜನ್ಮಾಂತರಗಳ ವಿವರ ನಮಗೆ ಗೊತ್ತಿರದೆ ಹೋದರೆ, ಕಥೆಯನ್ನು ಅನುಸರಿಸುವದು ಕಠಿಣವಾಗಿ ಬಿಡುತ್ತದೆ. ಕಥೆಯಲ್ಲಿ 'ಕಾದಂಬರಿ' ನಾಯಿಕೆ, ಚಂದ್ರಾಪೀಡ ನಾಯಕ; ಇವರ ಕಥೆಗಿಂತ ಮಹಾಶ್ವೇತೆಯ ಕಥೆಯೇ ಜಟಿಲವೂ ದಿವ್ಯವೂ ಆಗಿದೆಯೆಂದು ಹೇಳಬಹುದು. ಶ್ರೀಹರ್ಷನಲ್ಲಿ ಆಸ್ಥಾನ ಕವಿಯಾಗಿದ್ದ ಬಾಣ, ಶೂದ್ರಕ-ತಾರಾಪೀಡ ಇವರ ಆಸ್ಥಾನದ ವರ್ಣನೆಯನ್ನು, ವೈಭವವನ್ನು ವಿಸ್ತಾರವಾಗಿ ಬಣ್ಣಿಸಿದ್ದಾನೆ. ಬಾಣನ ಸಾಹಿತ್ಯದಲ್ಲಿ ಅನುಭವವೇದ್ಯವಾದುದೂ ಇದೆ, ಜೊತೆಗೆ ದಿವ್ಯ ರಾಜ್ಯದಲ್ಲಿ ಹಾರಾಡುವ ಕಲ್ಪನೆಯೂ ಇದೆ. ಜಾಬಾಲಿ ಋಷಿಗಳ ತಪೋಭೂಮಿಯನ್ನು ಬಣ್ಣಿಸುವಾಗಲೂ ಕವಿಗೆ ಅಷ್ಟೇ ಸೂಕ್ಷ್ಮವಾದ ದೃಷ್ಟಿಯಿದೆ. ಮುನಿಕುಮಾರ ಹಾರೀತನ ವರ್ಣನೆಯಲ್ಲಿಯೇ ನಾವಿದನ್ನು ಕಂಡುಕೊಳ್ಳುತ್ತೇವೆ. ರಾಜರ ಆಸ್ಥಾನದ ವರ್ಣನೆಯಲ್ಲಿ ಸಹೃದಯರ ಶೃಂಗಾರರಸ ಜಾಗೃತವಾದರೆ, ಆಶ್ರಮದ ವರ್ಣನೆಯಲ್ಲಿ ಶಾಂತರಸ ಜಾಗೃತವಾಗುತ್ತದೆ. ಕರುಣರಸವನ್ನು ಚಿತ್ರಿಸುವಲ್ಲಿಯೂ ಬಾಣಕವಿ ನಿಪುಣನೆಂದು ಬೇರೆ ಹೇಳಬೇಕಾಗಿಲ್ಲ. ಗಿಳಿ-ಮರಿಯ ದುರವಸ್ಥೆಯನ್ನು ಕಂಡು, ಸಾಮಾನ್ಯ ಪಕ್ಷಿಯಲ್ಲಿ ಮರುಕವುಂಟಾಗುವಂತೆ, ಓದುಗರಲ್ಲಿ ಮೊದಲೇ ಕರುಣೆಯುಂಟಾಗುತ್ತದೆ. ಆದರಲ್ಲಿ ಹಿಂದಣ ಜನ್ಮಗಳ ವೃತ್ತಾಂತವನ್ನು ಕೇಳಿ, ಮತ್ತೆ ಈಗ ತಿರ್ಯಗ್‌ಜಾತಿಯಲ್ಲಿ ಆದರ ದುರವಸ್ಥೆಯನ್ನು ನೋಡಿದಾಗ ಈ ಕರುಣೆ ಇಮ್ಮಡಿಸುತ್ತದೆ.

ರಾಜನೀತಿಯನ್ನು ವಿವರಿಸುವಲ್ಲಿ ಬಾಣನ ಜಾಣ್ಮೆ, ವ್ಯವಹಾರ, ಅನು-ಭವ, ದೂರದೃಷ್ಟಿ, ಮುತ್ಸದ್ದಿತನ, ಎಲ್ಲವೂ ಒಟ್ಟಿಗೇ ವಿದಿತವಾಗುತ್ತವೆ. "ವಿಷಯಾರಣ್ಯದೊಳಗೆ ಮನುಷ್ಯನ ಇಂದ್ರಿಯಗಳೆಂಬ ಎರಳೆಗಳು ಸುಖೋಪಭೋಗವೆಂಬ ಮೃಗಜಲಕ್ಕೆಳಸಿ ಹರಿದಾಡುತ್ತವೆ . . . ಚಂದನವೃಕ್ಷದಿಂದ ಹುಟ್ಟಿದ ಬೆಂಕಿ ಸುಡುವದಿಲ್ಲವೆನ್ನಬಹುದೊ ?" ಎಂದು ಅಧಿಕಾರವಾಣಿಯಿಂದ ಹೇಳುವ ಶುಕನಾಸ, ಚಾಣಕ್ಯನ ಅಪರಾವತಾರವಾದಂತೆ ಕಂಡು ಬರುತ್ತಾನೆ.

# ಮುಖ್ಯ ಪಾತ್ರಗಳು

## ಚಂದ್ರಾಪೀಡ

ಪುಂಡರೀಕನ ಶಾಪದಿಂದ ಚಂದ್ರನೇ ಚಂದ್ರಾಪೀಡನಾಗಿ ಉಜ್ಜಯಿನಿಯ ದೊರೆಯಾದ ತಾರಾಪೀಡನಿಗೆ ಮಗನಾಗಿ ಹುಟ್ಟುತ್ತಾನೆ. ಚಂದ್ರನಂತೆ ದಿನದಿನಕ್ಕೆ ವಿಕಾಸವನ್ನು ಹೊಂದುತ್ತಿರುವ ಚಂದ್ರಾಪೀಡನ ಜನನದಿಂದ ಪ್ರಜೆಗಳೆಲ್ಲರಿಗೆ ಆನಂದ ಮಹೋತ್ಸವ! ಮಂತ್ರಿಕುಮಾರ ವೈಶಂಪಾಯನನೂ ಚಂದ್ರಾಪೀಡನೂ ಓರಿಗೆಯವರು. ಅಕ್ಷರಾಭ್ಯಾಸದಿಂದ ಪ್ರಾರಂಭಿಸಿ ಇಬ್ಬರೂ ಹದಿನಾರು ವರ್ಷಗಳ ವರೆಗೆ ಗುರುಕುಲದಲ್ಲಿ ವಿದ್ಯಾಭ್ಯಾಸಮಾಡುವರು. ಚಂದ್ರಾಪೀಡನು ಗುರುಕುಲದಿಂದ ಹೊರಗೆ ಬರುವದಕ್ಕೆ, ಇಂದ್ರಾಯುಧವು ಅವನಿಗಾಗಿ ಕಾದಿದೆ. ರಾಜಧಾನಿಗೆ ಮರಳಿದರೆ, ಪ್ರಜೆಗಳೂ ತಾಯಿತಂದೆಗಳೂ ಕಣ್ಣುತುಂಬ ನೋಡಿ, ಯುವರಾಜಪಟ್ಟವನ್ನು ಕೊಡಲು ಕಾದಿದ್ದಾರೆ. ಚಂದ್ರಾಪೀಡನಿಗೆ ಇಲ್ಲಿಯವರೆಗೆ ಬರುವ ಅನುಭವ ಹೇಳತಕ್ಕಂತಹದೇನೂ ಅಲ್ಲ. ಐಶ್ವರ್ಯದ ಮಡಲಿನಲ್ಲಿ ಬೆಳೆಯುತ್ತಾನೆ, ಅಷ್ಟೇ; ಅಲ್ಲಿಂದ ದಿಗ್ವಿಜಯಕ್ಕೆ ಹೊರಟಾಗ, ಕಿನ್ನರಮಿಥುನದ ಬೆನ್ನುಹತ್ತಿದಾಗ ಮಾತ್ರ ಯಾರ ಸಂರಕ್ಷಣೆಯೂ ಇಲ್ಲದೆ, ತಾನೇ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಆದರೂ ಚಂದ್ರಾಪೀಡನಲ್ಲಿರುವ ನಯ, ನೀತಿಗಳು ಮಹಾಶ್ವೇತೆಯೊಡನಾದ ಅವನ ಸಂಭಾಷಣೆಯಲ್ಲಿಯೇ ಕಂಡುಬರುತ್ತವೆ. ವಿವಾಹವಾಗುವದಿಲ್ಲವೆಂದು ಹಟವನ್ನು ಹಿಡಿದ ಕಾದಂಬರಿಯನ್ನೂ ಆಕರ್ಷಿಸುವಂತಹ ಶಕ್ತಿ ಚಂದ್ರಾಪೀಡನಲ್ಲಿದೆ. ಪ್ರಣಯಿಯ ದೃಷ್ಟಿಯಿಂದ ಚಂದ್ರಾಪೀಡನ ಚಿತ್ರ, ನಯವಾಗಿ, ಮನೋವಿಶ್ಲೇಷಣೆಯ ದೃಷ್ಟಿಯಿಂದ ಒಂದೊಂದೇ ಮೆಟ್ಟಲನ್ನೇರುತ್ತಿದ್ದಂತೆ ಭಾಸವಾಗುತ್ತದೆ. ಕೇಯೂರಕ, ಪತ್ರಲೇಖೆಯರಿಂದ ಕಾದಂಬರಿಯ ವಿಷಯ ತಿಳಿಯುವದೇ ತಡ, ಹೊರಟುಬಿಡುತ್ತಾನೆ.

ಮುಂದೆ ರಾಜನಾಗತಕ್ಕ ಯುವರಾಜನೆಂದು ಚಂದ್ರಾಪೀಡನು ಪಡೆಯುವ ವಿದ್ಯೆ, ಶುಕನಾಸರ ಉಪದೇಶಗಳನ್ನು ನೋಡಿದರೆ, ಜನರೆಲ್ಲರ ಕಣ್ಮಣಿ ಚಂದ್ರಾಪೀಡನಾಗಿದ್ದ ಎಂಬುದು ನಿರ್ವಿವಾದದ ಮಾತು. ಕಾದಂಬರಿಯೊಡ-

ನಾದ ವಿರಹವೊಂದನ್ನು ಬಿಟ್ಟರೆ ಚಂದ್ರಾಪೀಡನಲ್ಲಿ ಕಟುವಾದ ಅನುಭವ ಹೆಚ್ಚಾಗಿಲ್ಲವೆಂದೇ ಹೇಳಬಹುದು.

•

## ವೈಶಂಪಾಯನ

ವೈಶಂಪಾಯನ ಮಂತ್ರಿಕುವರ; ಪುಂಡರೀಕನೇ ಈ ಜನ್ಮದಲ್ಲಿ ಚಂದ್ರಾಪೀಡನ ಪರಮಮಿತ್ರನಾಗಿ ಬಂದವನು. ಪುಂಡರೀಕನು ಮುನಿಕುಮಾರ; ಎಂತಹ ಸಂಯಮವಿದ್ದರೂ, ನಿಸರ್ಗಕ್ಕೆ ಅವನೂ ಹೊರತಾಗಿಲ್ಲ ಎಂಬುವನ್ನು ಕವಿ ಮಹಾಶ್ವೇತೆಯ ದರ್ಶನದಲ್ಲಿ ಚೆನ್ನಾಗಿ ತೋರಿಸಿದ್ದಾನೆ. ಅನ್ಯಮನಸ್ಕನಾಗಿ, ಮಹಾಶ್ವೇತೆ ಅಕ್ಷಮಾಲೆಯನ್ನು ಎತ್ತಿ ಒಯ್ದುದೂ ಅವನ ಲಕ್ಷ್ಯದಲ್ಲಿಲ್ಲ; ಗೆಳೆಯ ಛೇಳಿದಾಗ ಸುಳ್ಳು ಸಿಟ್ಟನ್ನು ಅಭಿನಯಿಸುತ್ತ, "ಚಪಲೇ, ನಿಲ್ಲು, ನಿಲ್ಲು;" ಎಂದು ಆವೇಶದಿಂದ ನುಡಿಯುವನು. ಪ್ರಿಯತಮೆಯ ಧ್ಯಾನದಲ್ಲಿಯೇ ಮೃತನಾದ ಅವನನ್ನು, ಮಹಾಶ್ವೇತೆಯಲ್ಲಿದ್ದ ಅವನ ಪ್ರೇಮ, ಅವನ ಮುಂದಣ ಜನ್ಮದಲ್ಲಿಯೂ ಬಿಡದು ಎಂಬುದನ್ನು ಕವಿ ಬಹು ಅಂದವಾಗಿ ಹೇಳಿದ್ದಾನೆ.

ವೈಶಂಪಾಯನನಾಗಿ, ಅದೇ ಮಹಾಶ್ವೇತೆಯಿಂದ ಅವಳ ಪ್ರೇಮಕ್ಕಾಗಿ ತಿರ್ಯಗ್ಜಾತಿಯಲ್ಲಿ ಹುಟ್ಟುವ ಸಾಹಸವನ್ನೂ ಮಾಡಬೇಕಾಗುತ್ತದೆ. ಕಾದಂಬರಿಯ ಕಥಾಸಂವಿಧಾನ ವೈಶಂಪಾಯನನ ಜನ್ಮಾಂತರಗಳ ಚರಿತ್ರೆಯಿಂದ ಇನ್ನೂ ಸ್ಪಷ್ಟವಾಗುತ್ತದೆ.

## ಜಾಬಾಲಿ ಮುನಿಗಳು

ಜಾಬಾಲಿ ಮಹರ್ಷಿಗಳು ದಿವ್ಯಜ್ಞಾನಿಗಳು; ಅಂತರ್ದೃಷ್ಟಿ, ತ್ರಿಕಾಲಗಳ ಜ್ಞಾನವೂ ಅವರಿಗಿರುತ್ತದೆ. ಗಿಳಿಮರಿಯ ಕಥೆ ಹೇಳಿದ ತರುವಾಯ ಮುಂದಿನ ಭಾಗವನ್ನು ಜಾಬಾಲಿಗಳೇ ಮುಂದುವರಿಸುತ್ತಾರೆ. ಹಿಂದಣ ಜನ್ಮಗಳ ಕಥೆಯನ್ನು ಹೇಳಲು ಮತ್ತಾವ ಸಾಧನವೂ ಇಲ್ಲದಾಗ, ಕವಿ ತ್ರಿಕಾಲಜ್ಞಾನಿಗಳ ಸಹಾಯವನ್ನು ಪಡೆಯುತ್ತಾನೆ; ಶಾಕುಂತಲದಲ್ಲಿ ದೂರ್ವಾಸರ ಶಾಪ ಬಂದಂತೆ, ಮುನಿಗಳು ಗಿಳಿಮರಿ ಆಶ್ರಮಕ್ಕೆ ಬಂದೊಡನೆ, ಮುಗುಳ್ನಗೆ ನಕ್ಕು, "ತನ್ನ ಪಾಪದ ಫಲವನ್ನು ಅನುಭವಿಸುತ್ತಾನೆ," ಎಂದು ನುಡಿಯುತ್ತಾರೆ. ಆಗ ಗಂಭೀರವಾದ ಅವರ ಚಿತ್ರ ನಮ್ಮೆದುರು ಬಂದು ನಿಲ್ಲುತ್ತದೆ.

ಇನ್ನುಳಿದ ಪಾತ್ರಗಳೆಂದರೆ ಪ್ರಜೆಗಳ ಮೆಚ್ಚಿಕೆಯನ್ನು ಪಡೆದ ತಾರಾಪೀಡ, ಕುಶಲಬುದ್ಧಿಯ ಮಂತ್ರಿ ಶುಕನಾಸ, ಶೂದ್ರಕ, ಕೇಯೂರಕ ಇವರೇ. ಬಾಣಕವಿ ಎಲ್ಲರ ಪಾತ್ರಗಳಿಗೂ ಸಾಕಷ್ಟು ಲಕ್ಷ್ಯ ಪೂರೈಸಿದ್ದಾನೆ. ಆದರೆ ಅದನ್ನು ಚಿತ್ರಿಸುವ ಶೈಲಿ ಅಷ್ಟೇ ಗಂಭೀರವಾದ್ದರಿಂದ, ಪ್ರಥಮದೃಷ್ಟಿಗೆ ಅವುಗಳ ಸೂಕ್ಷ್ಮತೆ ವಿದಿತವಾಗದೆ ಹೋಗಬಹುದು.

## ಮಹಾಶ್ವೇತೆ

ಮಹಾಶ್ವೇತೆ ಗಂಧರ್ವರಾಜ ಹಂಸನ ಮಗಳು; ತಾಯಿಯೊಡನೆ ಅಚ್ಛೋದ ಸರಸ್ಸಿಗೆ ಸ್ನಾನಕ್ಕಾಗಿ ಬಂದಾಗ ಮುನಿಕುಮಾರ ಪುಂಡರೀಕನನ್ನು ಕಂಡು ಮಾರು ಹೋಗುತ್ತಾಳೆ. ಅಲ್ಲಿಂದಲೇ ಅವಳ ವಿರಹ, ದುಃಖ, ಪ್ರಾರಂಭವಾಗುತ್ತವೆ. ಮಹಾಶ್ವೇತೆ ಒಳ್ಳೇ ಸುಂದರಿ, ವಿದ್ಯಾವಿಶಾರದೆ. ಶಿವಾಲಯದಲ್ಲಿ ವೀಣೆನುಡಿಸುತ್ತ, ಹೇಳುವ ಹಾಡಿನ ಇಂಪು ನಾಲ್ಕು ದಿಕ್ಕಿನಲ್ಲಿಯೂ ಹರಡಿ, ಚಂದ್ರಾಪೀಡನನ್ನು ಆಕರ್ಷಿಸುತ್ತದೆ. ವಿನಯದಿಂದ ಅತಿಥಿಗಳಿಗೆ ಆದರಾತಿಥ್ಯವನ್ನು ನೀಡಿ, ತನ್ನ ಕಥೆಯನ್ನು ಕೇಳಬೇಕೆಂಬ ಆಶೆಯನ್ನೂ ಪೂರೈಸಿ, ತನ್ನ ಪ್ರಾಣಸಖಿಯ ಹಟವನ್ನು ಬಿಡಿಸಲು, ಯೋಗ್ಯ ಸಾಧನವನ್ನೇ ತೆಗೆದುಕೊಂಡು ಹೊರಡುತ್ತಾಳೆ 'ಕಾದಂಬರಿ'ಯ ತಾಯಿ ತಂದೆಗಳು ಮಹಾಶ್ವೇತೆಯ ಮಾತಿಗೆ ಮನ್ನಣೆ ಕೊಡುತ್ತಿದ್ದರೆಂಬುದು ಅವಳ ಮಾತಿನಿಂದಲೇ ಸ್ಪಷ್ಟವಾಗುತ್ತದೆ. ಕೊನೆಗೆ ಪುಂಡರೀಕನ ದೇಹತ್ಯಾಗದೊಡನೆ ಮಹಾಶ್ವೇತೆ ಸರ್ವವನ್ನೂ ತ್ಯಜಿಸಿ, ದೈವೀವಾಣಿಯ ಮೇಲೆ ನಂಬುಗೆಯಿಟ್ಟು, ತಪಸ್ಸನ್ನಾಚರಿಸುತ್ತ ಶಿವಾಲಯದಲ್ಲಿ ಕಾಲಕಳೆಯುತ್ತಾಳೆ. ವೈಶಂಪಾಯನನನ್ನು ಶಪಿಸಿದ್ದು ಅವಳು ಪುಂಡರೀಕನಲ್ಲಿಟ್ಟ ದೃಢಪ್ರೇಮದ ಕುರುಹು. ಮಹಾಶ್ವೇತೆಯ ಜೀವನ ಕಟುವಾದ ಅನುಭವಗಳಿಂದ, ದುಃಖಸಹನೆಯಿಂದ, ಉನ್ನತವಾಗಿ ಪವಿತ್ರ ಪ್ರೇಮದ ಸಿದ್ಧಿಯತ್ತ ಸಾಗುತ್ತದೆ; 'ಕಾದಂಬರಿ'ಯ ಎಲ್ಲ ಪಾತ್ರಗಳಲ್ಲಿ, ಇದು ಉತ್ತಮ ಪಾತ್ರ ಎಂದು ಹೇಳಬಹುದು.

## ಕಾದಂಬರಿ

'ಕಾದಂಬರಿ' ಚಿತ್ರರಥ ಗಂಧರ್ವರಾಜನ ಮಗಳು. ಮಹಾಶ್ವೇತೆಯ ಪ್ರಿಯಸಖಿ, ಸುಂದರಿ; ತನ್ನ ಸಖಿ ಮಹಾಶ್ವೇತೆಯ ಗತಿ ಹೀಗಾಯಿತಲ್ಲ ಎಂದು ನೊಂದುಕೊಂಡು ತಾನೂ ವಿವಾಹವಾಗುವದಿಲ್ಲವೆಂದು ಹಟಹಿಡಿಯು

ಮೂವತ್ತಾರು

ತ್ತಾಳೆ. ಆದರೆ ಪ್ರಥಮ ದೃಷ್ಟಿಯಲ್ಲಿಯೇ ಚಂದ್ರಾಪೀಡನಿಗೆ ಮಾರು ಹೋಗು ತ್ತಾಳೆ. ಅವಳ ವಿರಹದ ವರ್ಣನೆ, ಪ್ರೇಮದ ವಿಕಾಸಗಳನ್ನು ಕವಿ ಬಹು ಸೂಕ್ಷ್ಮವಾಗಿ ವರ್ಣಿಸಿದ್ದಾನೆ. ಚಂದ್ರಾಪೀಡನ ದೇಹಾಂತವಾದಾಗ ಕಾದಂಬರಿ ಅಗ್ನಿಪ್ರವೇಶವನ್ನು ಮಾಡಲಿಚ್ಛಿಸುತ್ತಾಳೆ. ಆದರೆ ಆಕಾಶವಾಣಿ ಅವಳನ್ನೂ ತಡೆಹಿಡಿಯುತ್ತದೆ. ಕೊನೆಗೆ ಚಂದ್ರಾಪೀಡನು ದಿವ್ಯ ದೇಹದಿಂದ ಪುನರ್ಜ-ನ್ಮವನ್ನು ಪಡೆದಾಗ ಅವರೀರ್ವರ ಸಮಾಗಮವಾಗಿ, ಕಥೆ ಸುಖಾಂತವಾಗಿ ಕೊನೆಗೊಳ್ಳುತ್ತದೆ.

'ಕಾದಂಬರಿ'ಯಲ್ಲಿ ಬರುವ ಇನ್ನುಳಿದ ಸ್ತ್ರೀಪಾತ್ರಗಳೆಂದರೆ ತಾರಾ-ಪೀಡನ ಮಹಾರಾಣಿ ವಿಲಾಸವತಿ, ಪತ್ರಲೇಖೆ, ತರಳಿಕೆ ಇತ್ಯಾದಿ. ಈ ಪಾತ್ರಗಳ ಚಿತ್ರ ಸ್ಫುಟವಾಗಿ ಬರದಿದ್ದರೂ ಚಿತ್ರ ಕಣ್ಣೆದುರು ಬರುವಂತಿದೆ ಎಂದು ಹೇಳಬಹುದು !

## ಬಾಣಕಾಲದ ಜೀವನ

ಕವಿ 'ಹರ್ಷಚರಿತ'ವನ್ನು ಮೊದಲು ರಚಿಸಿದ್ದೋ, 'ಕಾದಂಬರಿ' ಯನ್ನೋ ಎಂಬುದು ಸ್ಪಷ್ಟವಾಗಿ ತಿಳಿಯದು. ಆದರೂ 'ಹರ್ಷಚರಿತ'ದ ಪ್ರಾರಂಭದಲ್ಲಿ ಕವಿ ತನ್ನ ವಿಷಯವನ್ನು ಹೇಳಿಕೊಂಡಿರುವಷ್ಟು 'ಕಾದಂಬರಿ' ಯಲ್ಲಿ ಹೇಳಿಕೊಂಡಿಲ್ಲ. ಹರ್ಷಚರಿತದಲ್ಲಿ ವಾಸ್ತವಿಕತೆ ಸ್ವಲ್ಪ ಹೆಚ್ಚು. ಬಾಣನ ಕಾಲದ ಇತರ ಗ್ರಂಥಗಳನ್ನು, ಉದಾಹರಣೆಗೆ ಬಾಣನ ಆಶ್ರಯದಾತನಾದ ಶ್ರೀಹರ್ಷನ ನಾಟಕಗಳನ್ನು ಓದಿದರೆ ಆ ಕಾಲದ ಜೀವನಪರಿಚಯ ಇನ್ನೂ ಹೆಚ್ಚಾಗಿ ದೊರೆಯಬಹುದು; ಆದರಲ್ಲಿಯೂ ಶ್ರೀಹರ್ಷನ ಕೊನೆಯ ಕೃತಿ 'ನಾಗಾನಂದ' ವನ್ನೋದಿದರೆ ! ಶ್ರೀಹರ್ಷನಿಗಿದ್ದ ನಿಷ್ಪಕ್ಷಪಾತ ನ್ಯಾಯಬುದ್ಧಿ, ಬೌದ್ಧ ತತ್ವಗಳಲ್ಲಿದ್ದ ಅವನ ಆದರ ಇವುಗಳನ್ನು 'ಹರ್ಷಚರಿತ'ದಲ್ಲಿ ಕಾಣುತ್ತೇವೆ. 'ಕಾದಂಬರಿ' ಯಲ್ಲಿ ಹೆಚ್ಚಾಗಿ ಬಂದುದು ವೈಭವ, ಕಲ್ಪನಾ ವೈಭವಗಳಿಂದ ಸುರಮ್ಯವಾದ ರಾಜರುಗಳ ವರ್ಣನೆ, ಆಸ್ಥಾನದ ವರ್ಣನೆ; ಹುಲಿ ಹುಲ್ಲೆಗಳು ನಿಸರ್ಗಸಿದ್ಧವಾದ ವೈರಭಾವವನ್ನು ಮರೆತು, ಸಖ್ಯ ದಿಂದಿದ್ದ ಮುನಿಗಳ ತಪೋಭೂಮಿಯ ದಿವ್ಯ ಮಹಿಮೆ ! ಚತುರಂಗ ಬಲದ ವರ್ಣನೆಯನ್ನು ಮಾಡುವದಾದರೆ ಕವಿ ಸೈನ್ಯದ ನಾಲ್ಕೂ ಅಂಗಗಳನ್ನು ಎತ್ತಿ ಹಿಡಿದುಬಿಡುತ್ತಾನೆ; ಆದರೆ ಅದೇ ಶ್ರೀಹರ್ಷನ ನಾಟಕಗಳಲ್ಲಿ ಮೂರು ಅಂಗಗಳ ವರ್ಣನೆ ಮಾತ್ರ ಬರುತ್ತದೆ. ಕವಿಯ ಪ್ರಗಾಢವಾದ ಜ್ಞಾನದ

ಮೂಲಕ, ಕವಿಯ ಪಾಂಡಿತ್ಯದ ಮೂಲಕ, ಆ ಕಾಲದ ಜೀವನದ ನಿಜವಾದ ದರ್ಶನ ಮರೆಯಾಗುತ್ತದೆಯೆಂದು ಮಾತ್ರ ಹೇಳಬಹುದು.

## ಸಂಸ್ಕೃತ ಸಾಹಿತ್ಯದಲ್ಲಿ ಬಾಣಕವಿಯ ಸ್ಥಾನ

ಬಾಣನು ಆ ಕಾಲದ ಸುವಿಖ್ಯಾತ ಕವಿ, ಗದ್ಯಲೇಖಕ; ಆದರೆ ಕಾಲಿದಾಸ, ಭಾಸರ ಯುಗದಲ್ಲಿ ಅವರ ಶೈಲಿಯನ್ನೇ ಅನುಕರಿಸಿ ಬರೆದ ಗ್ರಂಥಗಳನ್ನು ನಾವು ಕಾಣುವಂತೆ, ಇಲ್ಲಿ ಹೆಚ್ಚಾಗಿ ಕಾಣೆವು. ಬಾಣನ ಶ್ಲೇಷಾಲಂಕಾರದ ಅನುಕರಣೆ, ಶಿಲಾಲೇಖಗಳಲ್ಲಿ ಅಲ್ಲಲ್ಲಿ ಮೂಡಿಬಂದಿದೆ. ಧನಪಾಲನ 'ತಿಲಕಮಂಜರಿ' ಯಲ್ಲಿ, ಉದಯದೇವ, ವಾದೀಭಸಿಂಹನ, 'ಗದ್ಯಚಿಂತಾಮಣಿ' ಯಲ್ಲಿ, 'ಕಾದಂಬರಿ' ಯ ಶೈಲಿಯ ಅನುಕರಣೆ ಕಂಡು ಬರುತ್ತದೆ. ಆದರೆ ಆ ಶೈಲಿ ಪಂಡಿತಕವಿಗಳಿಗೇ ಸಾಧ್ಯವೆಂದೋ ಅಥವಾ ಜನಸಾಮಾನ್ಯರ ತಿಳಿವಿಗೆ ನಿಲುಕದೆಂದೋ, ಹೆಚ್ಚಾಗಿ ಅನಂತರದ ಕಾಲದಲ್ಲಿ ಜನಪ್ರಿಯವಾಗಲಿಲ್ಲ.

ಕಥೆಯಲ್ಲಿ ಕಥೆಯನ್ನೊಳಕೊಂಡ, 'ಜಾತಕ' ಕಥೆಗಳ ಪ್ರಭಾವವೂ ಇದರ ಮೇಲೆ ಸಾಕಷ್ಟಾಗಿರಬೇಕು. ಆದರೆ ಇವುಗಳ ಜೊತೆಗೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವೂ 'ಕಾದಂಬರಿ' ಕಥಾರಚನೆಯ ಮೇಲಾಗಿದೆಯೋ ಹೇಗೆ? ಎಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಗ್ರೀಕರಿಗೂ ಭಾರತೀಯರಿಗೂ ನಿಕಟವಾದ ಸಂಬಂಧ ಒಂದು ಕಾಲದಲ್ಲಿತ್ತು; ಈ ಸಂಬಂಧದ ಪರಿಣಾಮ ಸಾಹಿತ್ಯದಲ್ಲೂ ಏಕೆ ಮೂಡಿರಬಾರದು? 'ಕಾದಂಬರಿ'ಯಲ್ಲಿ ಬರುವ ನಾಯಿಕೆಯ ವರ್ಣನೆ, ಪ್ರಾಣಿವನಸ್ಪತಿಗಳ ಜಗತ್ತಿನಿಂದ ಉಪಮೆಗಳನ್ನು ಆಯ್ದುಕೊಳ್ಳುವ ಕವಿಯ ಮೋಹ, ಇವು ಗ್ರೀಕಸಾಹಿತ್ಯದಲ್ಲಿಯ ಈ ಭಾಗವನ್ನು ಪೂರ್ಣವಾಗಿ ಹೋಲುತ್ತವೆ. ಗ್ರೀಕ ಸಾಹಿತ್ಯಕ್ಕೆ ಭಾರತೀಯ ಸಾಹಿತ್ಯ ಪ್ರೇರಕವೋ ಅಥವಾ ಭಾರತೀಯ ಸಾಹಿತ್ಯಕ್ಕೆ ಗ್ರೀಕಸಾಹಿತ್ಯವೋ ಎಂಬುದು ಮಾತ್ರ ಇನ್ನೂ ಆಳವಾದ ಅಧ್ಯಯನದ ವಿಷಯವಾಗಿಯೇ ಉಳಿಯುತ್ತದೆ!

## ಹೊಸಗನ್ನಡ ಸಾಹಿತ್ಯದ ವಿಕಾಸ

ಸಂಸ್ಕೃತದಲ್ಲಿಯೇ ಸಾಹಿತ್ಯರಚನೆ ಮಾಡುವದು ಪಾಂಡಿತ್ಯದ ಕುರುಹೆಂಬ ಭಾವನೆ ಮಾಯವಾಗಿದ್ದರೂ, ಕನ್ನಡದಲ್ಲಿ ಸಾಹಿತ್ಯರಚನೆಯಾಗುವದು

ಸುಲಭವಾದ ಮಾತಾಗಿರಲಿಲ್ಲ. ಹದಿನೇಳನೆಯ ಶತಮಾನದಲ್ಲಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಕನ್ನಡ ಗ್ರಂಥಗಳು ಅಸಂಖ್ಯವಾಗಿ ಬಂದರೂ, ಅವೆಲ್ಲ ಹಳಗನ್ನಡ ಗದ್ಯ-ಪದ್ಯಗಳಲ್ಲಿ; ಹಳಗನ್ನಡವು ಹೊಸಗನ್ನಡವಾಗಿ ಪರಿಣಮಿಸ ಬೇಕಾದರೆ, ಅದು ಜೀವಂತ ಭಾಷೆಯಾಗಿ, ಜನರ ಮಾತಿನ ಪ್ರವಾಹದೊಡನೆ ಬೆರೆತು ಹೋಗಬೇಕಾಗುತ್ತದೆ. ಬಳಿಕ ಅದು ಗ್ರಾಂಥಿಕವಾಗಿ ಮನ್ನಣೆಯನ್ನು ಪಡೆದಾಗ, ಹೊಸಗನ್ನಡವೂ ಭಾಷೆಯ ಒಂದು ಅವಸ್ಥೆಯಾದೀತು !

ಆದರೆ ಕನ್ನಡದಲ್ಲಿ ಹೇಳದೆ, ಜನತೆಯ ಜೀವನ ಪ್ರತಿಬಿಂಬಿತವಾಗದೆ, ಕನ್ನಡಿಗರು ತಿಳಿಯುವದು ಹೇಗೆ ? ಗ್ರಂಥರಚನೆ ಹೊಸಗನ್ನಡದಲ್ಲಾದರೂ ಸ್ವತಂತ್ರವಾದ ಕೃತಿಗಳು ಮೊದಲು ಬರಲಿಲ್ಲ. ಅಚ್ಚಗನ್ನಡ ಸ್ಥಳವಾದ ಧಾರವಾಡದಲ್ಲಿಯೂ ಕನ್ನಡ ಶಾಲೆ ಬಹುಕಾಲದವರೆಗೆ ಇರಲಿಲ್ಲವೆಂದ ಮೇಲೆ ಮಾತೃಭಾಷೆಯ ಶಿಕ್ಷಣ, ಅಭಿಮಾನಗಳಾದರೂ ಉಂಟಾಗುವದು ಹೇಗೆ ? ಹಿಂದುಸ್ಥಾನದಲ್ಲೆಲ್ಲ ಬೀಸಿದ ಸಾಹಿತ್ಯಕ್ರಾಂತಿಯ ಗಾಳಿ ಕೊನೆಗೆ ಕರ್ನಾಟಕ ದಲ್ಲೂ ಬೀಸಿತು. ಗುಜರಾಥದಲ್ಲಿ ಕಾದಂಬರೀ ಸಾಹಿತ್ಯರಚನೆ ನಡೆದಾಗ, ಮಹಾರಾಷ್ಟ್ರದಲ್ಲಿ ಹರಿನಾರಾಯಣ ಆಪಟೆಯವರ ಸ್ವತಂತ್ರ ಕಾದಂಬರಿಗಳು ಹೊರಡುತ್ತಿದ್ದಾಗ, ಕರ್ನಾಟಕದಲ್ಲೂ ಬಂಕಿಮಚಂದ್ರರ ಕೃತಿಗಳ ಅನುವಾದ ನಡೆಯಿತು; ಸಂಸ್ಕೃತ ಗ್ರಂಥಗಳ ಹೊಸಗನ್ನಡ (ಅಂದಿನ ಹೊಸಗನ್ನಡ) ರೂಪಾಂತರಗಳೂ ಬರತೊಡಗಿದವು. ಅಂದಿನ ಹೊಸಗನ್ನಡದಲ್ಲಿ ಹಳಗನ್ನಡದ ಪ್ರತ್ಯಯಗಳೂ, ಸಂಸ್ಕೃತದ ಉರುಟಾದ ದೊಡ್ಡ ದೊಡ್ಡ ಸಮಾಸಗಳೂ, ಧಾರಾಳವಾಗಿ ಸೇರಿದ್ದನ್ನು ಕಾಣುತ್ತೇವೆ. ಆದರೂ ಹೊಸಗನ್ನಡದ ಆ ಮೊದಲ ರೂಪವನ್ನು ವಿಕಾಸಗೊಳಿಸುವ ಪ್ರಯತ್ನ ಕೈಕೊಂಡವರಲ್ಲಿ, 'ಮುದ್ರಾಮಂಜೂಷ'ವನ್ನು ರಚಿಸಿದ ಕೆಂಪುನಾರಾಯಣ, 'ಕಾದಂಬರಿ' ಯನ್ನು ರಚಿಸಿದ ಶ್ರೀ ಗಂಗಾಧರ ತುರಮುರಿ, ವೆಂಕಟ ರಂಗೋ ಕಟ್ಟಿ ಇವರೇ ಮೊದಲಾದ ಆಚಾರ್ಯರುಗಳ ಹೆಸರನ್ನು ಹೇಳಬಹುದು. ಅಲ್ಲಿಂದೀಚೆಗೆ ಐತಿಹಾಸಿಕ, ಪೌರಾಣಿಕ ಕಥೆಗಳನ್ನು ಕನ್ನಡಗದ್ಯದಲ್ಲಿ ಹೇಳಿದವರು ಶ್ರೀ ಗಳಗನಾಥರು; ಕೆರೂರ ವಾಸುದೇವಾಚಾರ್ಯರೂ ಹೊಸಗನ್ನಡದ ವಿಕಾಸಕ್ಕಾಗಿ ಹೆಣಗಿದವರಲ್ಲಿ ಒಬ್ಬರು. ಆ ತರುವಾಯ ಹೊಸಗನ್ನಡ ಸಾಹಿತ್ಯವೂ ವಿವಿಧ ಮುಖವಾಗಿ ಗದ್ಯ—ಪದ್ಯಗಳಲ್ಲಿ, ಪ್ರಬಂಧ, ನಾಟಕ, ಚರಿತ್ರ, ಭಾವಗೀತ, ಅಷ್ಟಷಟ್ಪದಿ ಎಂದು ಮುಂತಾಗಿ ಬೆಳೆದಿದೆ.

ಜುಗಪತಿ ತ್ರಿಂಭಕ್ತ

# ತೂರಮರಿಯವರ ಜೀವನ ಹಾಗೂ ಇತರ ಕೃತಿಗಳು

( ಜನನ ೧೮೩೭, ಮರಣ. ೫—೧೦—೧೮೭೭ )

ಗಂಗಾಧರಯ್ಯನವರು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ತೂರಮರಿಯವರು. ಚನ್ನಬಸಪ್ಪನವರ ಮಕ್ಕಳಾದ ಇವರು ಅಥಣಿಯ ಹಿರಿಯ ಮಠದ ಮಡಿವಾಳ ಸ್ವಾಮಿಗಳಿಗೆ ದತ್ತಕ ಹೋಗಿದ್ದರು. ಪೇಶ್ವೆಯ ಪ್ರಭಾವದಿಂದ ಮರಾಠಿಯೇ ಶಿಕ್ಷಣ ಭಾಷೆಯಾಗಿದ್ದ ಅಂದಿನ ಉತ್ತರ ಕರ್ನಾಟಕದ ಪರಿಸ್ಥಿತಿಗೆ ಅನುಗುಣವಾಗಿ ಇವರ ಪ್ರಾಥಮಿಕ ಶಿಕ್ಷಣವು ಮರಾಠಿಯ ಮುಖಾಂತರವೇ ದೊರೆತರೂ ಮನೆಯಲ್ಲಿ ಮಡಿವಾಳ ಸ್ವಾಮಿಗಳ ನೆರವಿನಿಂದ ಇವರು ಸಂಸ್ಕೃತ–ಕನ್ನಡದಲ್ಲಿ ಅಪಾರ ಪಾಂಡಿತ್ಯ ಸಂಪಾದಿಸಿ ಕಾವ್ಯವಾಚನ, ಪುರಾಣಪ್ರವಚನದಲ್ಲಿ ಅದ್ವಿತೀಯರೆನಿಸಿಕೊಂಡರು.

ದೇಶೀಯ ಶಾಲೆಗಳು ಕ್ರಮವಾಗಿ ಕನ್ನಡದಲ್ಲಿ ಪರಿವರ್ತನೆಗೊಂಡಂತೆ, ಸ್ಥಾನಿಕ ಪಂಡಿತರು ಅಲ್ಲಿ ಉಪಾಧ್ಯಾಯರಾಗತೊಡಗಿದರು. ಇಂಥ ಸಮಯದಲ್ಲಿ ಗಂಗಾಧರಯ್ಯನವರೂ ೩೫ ರೂಪಾಯಿ ಮಾಸಿಕ ವೇತನದ ಮೇಲೆ ಹುನಗುಂದ ಶಾಲೆಯ ( ಅಂದು ಇದು ಬೆಳಗಾವಿ ಜಿಲ್ಲೆಯ ಭಾಗವಾಗಿತ್ತು. ) ಮುಖ್ಯೋಪಾಧ್ಯಾಪಕರಾದರು.

ತುಸು ದಿವಸಗಳಲ್ಲಿಯೇ ತಮ್ಮ ಕಾರ್ಯದಕ್ಷತೆ ಹಾಗೂ ವಿದ್ವತ್ತಿನಿಂದ ಮೇಲಧಿಕಾರಿಗಳನ್ನು ಸಂತೋಷಪಡಿಸಿ, ಬೆಳಗಾವಿ ನಾರ್ಮಲ್ ಟ್ರೇನಿಂಗ ಸ್ಕೂಲಿನಲ್ಲಿ ಕನ್ನಡ ಪಂಡಿತರ ಹುದ್ದೆಯನ್ನು ಪಡೆದರು; ಹಾಗೂ ಸ್ವಪರಿ. ಶ್ರಮದಿಂದ ಇಂಗ್ಲೀಷು ಕಲಿತು ಕ್ರಿ. ಶ. ೧೮೬೬ ( ಜುಲಾಯಿ ) ರಲ್ಲಿ ಆಗ ಕನ್ನಡ ಅಸಿಸ್ಟಂಟ ಟ್ರಾನ್ಸಲೇಟರರಾಗಿದ್ದ ಗೋವಿಂದರಾವ ಕಂಠಿಯವರ ಸ್ಥಾನಕ್ಕೆ ವರ್ಗಾಯಿಸಲ್ಪಟ್ಟರು. ಅಧಿಕಾರದೊಂದಿಗೆ ಮರುವರ್ಷ ಟ್ರೇನಿಂಗ-ಸ್ಕೂಲಿನ ಉಪಮುಖ್ಯಾಧ್ಯಾಪಕ ಹುದ್ದೆಯೂ ದೊರೆತಿತು. ಕ್ರಿ. ಶ. ೧೮೭೫ ( ಜೂನ ೧ ) ರಲ್ಲಿ ಈ ವಿದ್ಯಾಸಂಸ್ಥೆಯು ಬೆಳಗಾವಿಯಿಂದ ಧಾರವಾಡಕ್ಕೆ ಸ್ಥಳಾಂತರಿಸಲ್ಪಟ್ಟಾಗ ಕೆಲದಿನ ಇವರು ಬೆಳಗಾವಿಯ ಹಾಯಸ್ಕೂಲಿನಲ್ಲಿ ಕನ್ನಡ ಪಂಡಿತರಾಗಬೇಕಾಯಿತು. ಮುಂದೆ ಸ್ವಲ್ಪೇ ದಿನಗಳಲ್ಲಿ ಅಸಿಸ್ಟಂಟ ಟ್ರಾನ್ಸಲೇಟರ ಕಚೇರಿಯೂ ಧಾರವಾಡಕ್ಕೆ ಸ್ಥಾನಾಂತರಗೊಂಡದ್ದರಿಂದ

ಇವರೂ ಧಾರವಾಡಕ್ಕೆ ಹೋದರು ಅಲ್ಲಿ ಎರಡು ವರ್ಷ ಕೆಲಸ ಮಾಡಿ, ತಮ್ಮ ೫೦ ನೆಯ ವಯಸ್ಸಿನಲ್ಲಿ ಅಕಾಲಮೃತ್ಯುವಶವಾದರು.

ಗಂಗಾಧರಯ್ಯನವರು 'ಮಠಪತ್ರಿಕೆ' (ಶಾಲಾಪತ್ರಿಕೆಯ) ಯ ಸಂಪಾದಕರೂ 'ರಸಿಕರಂಜನಿ,' 'ಕರ್ನಾಟಕ ಜ್ಞಾನಮಂಜರಿ' (೧೮೭೪) ಮಾಸಪತ್ರಿಕೆಗಳ ಪ್ರಮುಖ ಲೇಖಕರೂ ಆಗಿದ್ದರು. 'ಶಾಲಾಪತ್ರಿಕೆ'ಯಲ್ಲಿ ಶಬ್ದಮಣಿದರ್ಪಣದ ಟೀಕೆ (೧೮೬೬ ರಿಂದ ೧೮೭೦) ಯನ್ನೂ, 'ಭಾಷಾ ದರ್ಪಣ'ವೆಂಬ ಸ್ವತಂತ್ರ ವ್ಯಾಕರಣವನ್ನೂ (೧೮೭೬) ಬರೆದು ಪ್ರಕಟಿಸಿ-ದರು. ಇವರ ಆಕಸ್ಮಿಕ ಮರಣದಿಂದ ಭಾಷಾದರ್ಪಣವು ಅರ್ಧಕ್ಕೆ ನಿಂತಿತು.

ಕ್ರಿ. ಶ. ೧೮೬೮ ರಲ್ಲಿ (ನವಂಬರ) ಬೆಳಗಾವಿಯಲ್ಲಿ ಸ್ಥಾಪಿತವಾದ ವೀರಶೈವ ವಿದ್ಯಾರ್ಥಿ ನಿಲಯದ ವ್ಯವಸ್ಥಾಪಕರಾಗಿ ಕೆಲದಿನ ಇದ್ದರು. ಅವರು ರಚಿಸಿದ ಗ್ರಂಥಗಳು ಕ್ರಮವಾಗಿ (ಕನ್ನಡ ಕವಿತಾಪದ್ಧತಿ, ಕನ್ನಡ ಕವಿತೆಯ ಎರಡನೆಯ ಮೂರನೆಯ ಪುಸ್ತಕಗಳು, ಕವಿತಾಸಂಗ್ರಹ, ಕೈವಲ್ಯಪದ್ಧತಿಯ ಟೀಕೆ, ಬಾಣಕಾದಂಬರಿ, ಬಾಲಕರ ಕನ್ನಡ ವಾಚನ ಪಾಠಗಳು, ರಾಜಶೇಖರ ವಿಳಾಸ ಟೀಕೆ, ಶಬ್ದಮಂಜರಿ), ಕೊನೆಯವೆರಡಕ್ಕೆ ಸರಕಾರದಿಂದ ಪುರಸ್ಕಾರವೂ ದೊರೆತಿತ್ತು.

# ಕನ್ನಡ ಗದ್ಯ ಕಾದಂಬರಿಯ ಅನುವಾದಶೈಲಿ

ಒಂದು ಭಾಷೆಯಲ್ಲಿಯ ಕೃತಿಯನ್ನು, ಅದರ ಅರ್ಥದ ಸ್ವಾರಸ್ಯ, ಪದ-ರಚನಾಕೌಶಲ್ಯಗಳೊಂದಿಗೆ ಇನ್ನೊಂದು ಭಾಷೆಯಲ್ಲಿ ಅನುವಾದಿಸುವದೆಂಪರಿ ಸುಲಭವಾದ ಮಾತಲ್ಲ. ಅದರಲ್ಲೂ ಸಂಸ್ಕೃತ ಗೌಡ ಭಾಷೆ, ಕನ್ನಡ ದ್ರಾವಿಡ ಭಾಷೆ; ಸಂಸ್ಕೃತದಿಂದ ಕನ್ನಡ ಪುಷ್ಟವಾಗಿದ್ದರೂ, ಬಾಣಕವಿಯ ದೀರ್ಘ ಸಮಾಸಗಳು, ನಾಲ್ಕು ಪುಟಗಳವರೆಗೂ ಹರಡಿದ ವಾಕ್ಯಗಳು ಕನ್ನಡದ ರಚನೆಗೆ ಹೊಂದಿಕೊಳ್ಳವು. ಆದರೆ ಶ್ರೀ ತೂರಮುರಿಯವರು ಕನ್ನಡ ಭಾಷೆಗೆ ಹೊಂದಿಕೊಳ್ಳುವಂತೆ, 'ಕಾದಂಬರಿ'ಯ ಜಟಿಲ ಕಥಾನಕವನ್ನು ಕನ್ನಡಿಸಿದ್ದಾರೆ. ಕಥೆಯ ಓಟವನ್ನೇ ನಿಲ್ಲಿಸಿಬಿಡುವಂಥ ಸುದೀರ್ಘವಾದ ವರ್ಣನೆಗಳನ್ನು ಅಲ್ಲಲ್ಲಿ ಬಿಟ್ಟುಕೊಡುವ ಸಾಹಸವನ್ನೂ ಅವರು ಮಾಡಿದ್ದಾರೆ. ಕಥೆಯ ಸಂವಿಧಾನ ಮರೆಯಾಗದಂತೆ, ಅದರ ಹಿರಿಮೆಗೆ ಕುಂದು ಬಾರದಂತೆ, ಗಟ್ಟಿ ಸಂಸ್ಕೃತದ ತಿಳಿಯಾದ ಭಾಷಾಂತರವನ್ನು ಕನ್ನಡಿಗರಿಗಿತ್ತು, ಭಾಷೆಗೂ, ಜನತೆಗೂ ಮಹದುಪಕಾರವನ್ನು ಮಾಡಿದ್ದಾರೆ.

ಕನ್ನಡದಲ್ಲಿ, ಸಣ್ಣಸಣ್ಣ ವಾಕ್ಯಗಳಲ್ಲಿ ಇರುವಷ್ಟು ಸ್ವಾರಸ್ಯ ದೊಡ್ಡ ವಾಕ್ಯಗಳಲ್ಲಿ ದೀರ್ಘಸಮಾಸಗಳಲ್ಲಿ ಕಂಡುಬರದು. ಉದಾಹರಣೆಗೆ— ಶುಕನಾಸರ ಉಪದೇಶದಲ್ಲಿ ಬರುವ ಮಾತುಗಳನ್ನೇ ನೋಡಬಹುದು. "ಛತ್ರ ಹಿಡಿಸಿಕೊಂಡಾಗಲೇ ಅವರಿಗೆ ಪರಲೋಕವು ಮರೆಯಾಗುವದು;" ಚಾಮರದ ಗಾಳಿಗೆ ಅವರ ಸತ್ಯಶೀಲತ್ವವು ಹಾರಿ ಹೋಗುವದು.... ದೊಡ್ಡದೊಡ್ಡ ತಪ್ಪುಗಳನ್ನು ಉಪೇಕ್ಷಿಸುವದೇ ಮನಸ್ಸಿನ ದೊಡ್ಡಿಸ್ತನವೆಂದೂ, ಜನರು ಹೇಳಿದಾಗ್ಯೂ, ತಾವು ಸುಮ್ಮನೆ ಕಣ್ಣುಮುಚ್ಚಿಕೊಂಡಿರುವದೇ ತಾಳ್ಮೆ-ಯೆಂದೂ.... ಅರಸರು ತಿಳಕೊಳ್ಳುತ್ತಾರೆ." ಇದರಲ್ಲಿ ಅರ್ಥವನ್ನು ತಿಳಿದು-ಕೊಳ್ಳುವಲ್ಲಿ ಯಾವ ತೊಂದರೆಯೂ ಇಲ್ಲ.

ಬೇಟೆಯ ಕೋಲಾಹಲದ ಪ್ರಸಂಗವನ್ನು ಗಿಳಿಮರಿ ಒಳ್ಳೇ ಆಶ್ಚರ್ಯ ಭಯಗಳಿಂದ ಹೇಳುತ್ತಿರುತ್ತದೆ. ಆ ಸಮಯದಲ್ಲಿ ಬಾಣಕವಿ, ದೀರ್ಘ ಸಮಾಸಗಳಿಂದ ಕೂಡಿದ ಒಂದು ದೊಡ್ಡ ವಾಕ್ಯವನ್ನು ಇಟ್ಟುಬಿಟ್ಟಿದ್ದಾನೆ, "ಏಕದಾ ತು ಪ್ರಭಾತಸಂಧ್ಯಾರಾಗಲೋಹಿತೆ, ಅಪರ ಜಲನಿಧಿತಟಮವತರತಿ ಚಂದ್ರಮಸಿ, ವಿಘಟಮಾನ ಕಮಲಖಂಡ ಮಧುಸೀಕರಿಸಾರವರ್ಷಿಣಿ

ಕುಸುಮಾಮೋದ ತರ್ಪಿತಾಲಿಜಾಲೆ.... ಮಹಾನ್ ಮೃಗಯಾ ಕೋಲಾಹಲಧ್ವನಿರುದಚರತ್ " ಆದರೆ ಇದೇ ವಾಕ್ಯದ ಅರ್ಥ, ಸಣ್ಣ ಸಣ್ಣ ವಾಕ್ಯಗಳಲ್ಲಿ ತಿಳಿಯಾಗಿ ಕನ್ನಡದಲ್ಲಿ ಬಂದಿದೆ. "ಒಂದು ದಿನ ಮುಂಜಾವಿನಲ್ಲಿ ಎಂಟೂ ದಿಕ್ಕುಗಳು ಸ್ವಚ್ಛವಾಗಿಯೂ, ವಿಸ್ತೀರ್ಣವಾಗಿಯೂ ತೋರಹತ್ತಿದವು. ಕೊಳದೊಳಗಿನ ತಾವರೆಗಳ ಮೇಲೆ ತುಂಬಿಗಳೆರಗಿ ಝೇಂಕಾರ ಮಾಡಹತ್ತಿದವು.... ಅಷ್ಟರೊಳಗೆ ಬೇಟೆಯಾಡಿ ಬಂದ ಭಿಲ್ಲರ ಕೋಲಾಹಲ ಧ್ವನಿಯು ನನ್ನ ಕಿವಿಗೆ ಬಿತ್ತು."

ಬಾಣನಲ್ಲಿ ಅಪರಿಮಿತವಾಗಿ ಬರುವ ಶ್ಲೇಷೆಯನ್ನು ಕನ್ನಡದಲ್ಲಿ ತರುವದು ಸಾಧ್ಯವಿಲ್ಲ. ಅಕೃತ್ರಿಮವಾಗಿ ಒಂದೊಂದೆಡೆ ಬರಬಹುದು. ಆದರೆ ಎಲ್ಲೆಡೆಗೂ ಅದನ್ನು ತರುವ ಪ್ರಯತ್ನವನ್ನು ತೂರಮುರಿಯವರು ಬಿಟ್ಟುಗೊಟ್ಟದ್ದು ನಿಜವಾಗಿಯೂ ಸ್ತುತ್ಯವಾದುದು.

ಪ್ರಾಸದ ಮೋಹಕ್ಕೂ ಅವರು ಕಟ್ಟುಬಿದ್ದಿಲ್ಲ. ಕೆಂಪುನಾರಾಯಣನ ಗದ್ಯವನ್ನೂ, ಕಟ್ಟಿಯವರ ಗದ್ಯಶೈಲಿಯನ್ನೂ ನೋಡಿದರೆ, ತೂರಮುರಿಯವರು ಕನ್ನಡ ಸಾಹಿತ್ಯದ ಸರಲ ಸೌಂದರ್ಯಕ್ಕೆ ಮೆಚ್ಚಿದ್ದರೆನ್ನುವದು ಸ್ಪಷ್ಟ. ಈ ದೃಷ್ಟಿಯಿಂದ ತೂರಮುರಿಯವರ ಗದ್ಯಶೈಲಿ, ಹೊಸಗನ್ನಡದ ಮೊದಲಿನ ಗದ್ಯಶೈಲಿಗಿಂತ ಒಂದು ಹೆಜ್ಜೆ ಮುಂದೆ!

ಹೊಸಗನ್ನಡ ಗದ್ಯ ಸಾಹಿತ್ಯದ ತಳಹದಿಯನ್ನು ರೂಪಿಸಿ ಭದ್ರಗೊಳಿಸುವ ಆ ಕಾಲದಲ್ಲಿ ತೂರಮುರಿಯವರು ಕೈಕೊಂಡ ಕಾರ್ಯ ನಿಜವಾಗಿಯೂ ಅಭಿನಂದನೀಯವಾದುದು. ಸಂಸ್ಕೃತದ ಮಹತ್ಕೃತಿಯ ಸಾರವನ್ನೂ ಕನ್ನಡದಲ್ಲಿ ತಿಳಿಯಾಗಿ ಸ್ವಾರಸ್ಯವಾಗಿ ಹೇಳಬಹುದೆಂಬುದನ್ನು ಜನಕೆಗೆ ತೋರಿಸಿ ಕೊಟ್ಟರು. ಶ್ರೀ ತೂರಮುರಿಯವರು 'ಕಾದಂಬರಿ' ಯನ್ನಲ್ಲದೆ ಶಬ್ದ ಮಂಜರೀಕೋಶವನ್ನೂ ರಚಿಸಿದ್ದಾರೆ. ಹೊಸಗನ್ನಡ ಗದ್ಯದ ಪತಾಕೆಯನ್ನೆತ್ತಿ ತೂರಮುರಿಯವರು, ೧೯೭೦ ರಲ್ಲಿ ಕಾಲವಶರಾದರು. ಅವರಂತಹ ಜೀವದ ನಷ್ಟದಿಂದ ಕನ್ನಡನಾಡಿಗೂ, ಸಾಹಿತ್ಯಕ್ಕೂ ಅಪಾರವಾದ ಹಾನಿ ತಟ್ಟಿದೆ! ಆ ಸಮಯದಲ್ಲಿ ಅವರು ಕೈಕೊಂಡು ಪೂರ್ತಿಗೊಳಿಸಿದ ಕಾರ್ಯ ನಿಜವಾಗಿಯೂ ಪ್ರೇರಕವಾಗಿದೆ.

ಧಾರವಾಡ
೨ನೇ ಜೂನ ೧೯೭೩

ಸರೋಜಿನಿ ಮಹಿಷಿ, ಎಂ.ಎ.

[illegible]

## ಕಾದಂಬರೀ ಕಥೆಯೊಳಗೆ ಬರುವವರ ಹೆಸರುಗಳು

**ಶೂದ್ರಕ**—ವಿದಿಶಾಪಟ್ಟಣದ ಅರಸು. (ಚಂದ್ರಾಪೀಡನ ಎರಡನೆಯ ಜನ್ಮ)

**ಕುಮಾರಪಾಲಿತ**—ಶೂದ್ರಕನ ಪ್ರಧಾನನು.

**ಮಾತಂಗ**—ಕಿರಾತನು.

**ಜಾಬಾಲಿ**—ಋಷೀಶ್ವರನು. ಈತನ ಆಶ್ರಮದಲ್ಲಿ ವೈಶಂಪಾಯನ ಗಿಳಿಯು ದಿನಗಳೆಯಿತು.

**ಹಾರೀತ**—ಜಾಬಾಲಿಯ ಮಗ.

**ತಾರಾಪೀಡ**—ಉಜ್ಜಯಿನೀಪಟ್ಟಣದ ಅರಸು.

**ವಿಲಾಸವತಿ**—ತಾರಾಪೀಡನ ಪಟ್ಟದ ರಾಣಿ.

**ಚಂದ್ರಾಪೀಡ**—ತಾರಾಪೀಡನ ಮಗನು. (ಪುಂಡರೀಕನ ಶಾಪದಿಂದ ಭೂಮಿಗೆ ಅವತರಿಸಿದ ಚಂದ್ರನು)

**ಪತ್ರಲೇಖೆ** – ಚಂದ್ರಾಪೀಡನ ತಾಂಬೂಲದ ಕರಡಿಗೆ ಹಿಡಿಯುವ ಪ್ರೀತಿಪಾತ್ರಳಾದ ದಾಸಿ. (ಭೂಮಿಗೆ ಅವತರಿಸಿದ ರೋಹಿಣಿ)

**ಶುಕನಾಸ**—ತಾರಾಪೀಡನ ಪ್ರಧಾನನು.

**ಮನೋರಮೆ**—ಶುಕನಾಸನ ಹೆಂಡತಿ.

**ವೈಶಂಪಾಯನ**—ಶುಕನಾಸನ ಮಗನು; ಚಂದ್ರಾಪೀಡನ ಜೀವದ ಗೆಳೆಯನು. (ಪುಂಡರೀಕನ ಎರಡನೆಯ ಜನ್ಮ) ಈತನೇ ಮಹಾಶ್ವೇತೆಯ ಶಾಪದಿಂದ ಗಿಳಿಯಾಗಿ ಹುಟ್ಟಿದನು.

**ಇಂದ್ರಾಯುಧ**—ಚಂದ್ರಾಪೀಡನ ಕುದುರೆ. (ಕಪಿಂಜಲನ ಎರಡನೆಯ ಜನ್ಮ)

**ಶ್ವೇತಕೇತು**—ತಪಸ್ವಿಯು.

**ಪುಂಡರೀಕ**, **ಕಪಿಂಜಲ** —ಜೀವದ ಗೆಳೆಯರಾದ ಋಷಿಕುಮಾರರು.

**ಹಂಸ**, **ಗೌರಿ** —ಮಹಾಶ್ವೇತೆಯ ತಂದೆತಾಯಿಗಳಾದ ಗಂಧರ್ವರು.

ಮಹಾಶ್ವೇತೆ—ಗಂಧರ್ವಕನ್ನಿಕೆ.

ತರಲಿಕೆ—ಮಹಾಶ್ವೇತೆಯ ದಾಸಿಯು.

ಚಿತ್ರರಥ<br>ಮದಿರೆ } —ಕಾದಂಬರಿಯ ತಂದೆತಾಯಿಗಳಾದ ಗಂಧರ್ವರು.

ಕಾದಂಬರಿ—ಗಂಧರ್ವಕನ್ನಿಕೆ.

ಕೇಯೂರಕ—ಕಾದಂಬರಿಯ ದಾಸನು.

ಮದಲೇಖೆ—ಕಾದಂಬರಿಯ ದಾಸಿಯು.

ಲಕ್ಷ್ಮಿ—ಒಬ್ಬ ಚಾಂಡಾಲಕನ್ನಿಕೆಯು.

ಕನ್ನಡ

# ಕಾದಂಬರೀ ಕಥೆ

ಮಾಳವದೇಶದಲ್ಲಿ ವೇತ್ರವತೀ ನದೀತೀರದಲ್ಲಿ ವಿದಿಶಾ ಎಂಬ ಪಟ್ಟಣ-ವಿತ್ತು; ಅಲ್ಲಿ ಪೂರ್ವಕಾಲದಲ್ಲಿ ಶೂದ್ರಕನೆಂಬ ಅರಸನು ರಾಜ್ಯವಾಳುತ್ತಿದ್ದನು. ಈತನು ನಾಲ್ಕು ಸಮುದ್ರಗಳಿಂದ ಬಳಸಲ್ಪಟ್ಟ ಯಾವತ್ತು ಜಂಬೂದ್ವೀಪ ವನ್ನು ಆಳುತ್ತಿದ್ದುದರಿಂದ ಎಲ್ಲ ಅರಸರು ಈತನ ಅಪ್ಪಣೆಯ ಮೇರೆಗೆ ನಡ ಕೊಳ್ಳುತ್ತಿದ್ದರು. ಈತನು ತನ್ನ ಭುಜಬಲ ಪರಾಕ್ರಮದಿಂದ ಎಲ್ಲ ವೈರಿ ಭೂಪರನ್ನು ತಲೆವಾಗಿಸಿ, ಪ್ರೀತಿಯಿಂದ ಮಾಂಡಲಿಕ ಭೂಪಾಲರನ್ನು ಮೆಚ್ಚಿಸಿ, ರಾಜನೀತಿಯಿಂದ ಸರ್ವ ಪ್ರಜೆಗಳನ್ನು ಪರಿಪಾಲಿಸುತ್ತಿದ್ದನು. ಆದುದರಿಂದ, ಯಾವತ್ತು ಜನರು ಯಾವಾಗಲೂ ಸುಖದಿಂದ ಸಂಸಾರ ಮಾಡುತ್ತ ಹಾಡಿ ಹರಸಿ, ಈತನಿಗೆ ಕಲ್ಯಾಣವಾಗಲೆಂತಲೂ, ಈತನೇ ಚಿರಕಾಲ ರಾಜ್ಯವಾಳಲೆಂತಲೂ, ದೇವರನ್ನು ಬೇಡಿಕೊಳ್ಳುತ್ತಿದ್ದರು. ಬೇಡುವ ಬಡವರಿಗೆ ಕೊಡುವಲ್ಲಿ ಕೊಡಗೈ ದೊರೆ ಈತನೇ ಎಂದರೂ ಸಲ್ಲುವದು. ಈ ಅರಸನು, ಸಕಲ ಶಾಸ್ತ್ರಗಳಲ್ಲಿಯೂ ಕಲೆಗಳಲ್ಲಿಯೂ ನಿಪುಣನಾಗಿ, ಸದ್ಗುಣಗಳಿಗೆ ತವರುಮನೆಯಾಗಿದ್ದನು.

ಈತನು ಪೃಥ್ವಿಯನ್ನು ಆಳುತ್ತಿರುವಾಗ, ಆನೆಗಳಲ್ಲಿಯೇ ಮದವಿಕಾರ-ವಿತ್ತಲ್ಲದೆ, ಈತನ ನಾಡೊಳಗಿನ ಜನರಲ್ಲಿದ್ದಿಲ್ಲ; ಖಡ್ಗಗಳಲ್ಲಿ ಕಲಂಕ ವಿತ್ತಲ್ಲದೆ, ಈತನ ಆಳಿಕೆಯಲ್ಲಿದ್ದಿಲ್ಲ; ಜನರಿಗೆ ಶಾಸ್ತ್ರಚಿಂತನವಲ್ಲದೆ ಬೇರೆ ಚಿಂತೆಯಿದ್ದಿಲ್ಲ; ತೆರವಾದ ಮನೆಗಳು, ಪಗಡೆ ಚತುರಂಗಪಟಗಳ ಮೇಲಲ್ಲದೆ, ಶೂದ್ರಕನ ರಾಜ್ಯದಲ್ಲಿದ್ದಿಲ್ಲ; ಕನಸಿನ ಹೊರತು, ಜನರೊಳಗೆ ಅಸಂಗತ ಭಾಷಣವಾಗುತ್ತಿದ್ದಿಲ್ಲ; ಈತನ ರಾಜ್ಯದೊಳಗಿನವರಿಗೆ, ಪರಲೋಕದ ಹೊರತು ಬೇರೆ ಯಾತರದೂ ಅಂಜಿಕೆಯಿದ್ದಿಲ್ಲ.

ಈ ಅರಸನ ಬಳಿಯಲ್ಲಿ ಕುಲಪರಂಪರಾಗತರಾದಂಥ, ಕುಲೀನರಾದಂಥ, ನೀತಿಶಾಸ್ತ್ರಜ್ಞರಾದಂಥ, ನಿರ್ಲೋಭಿಗಳಾದಂಥ ವಿದ್ವಾಂಸರಾದ ಮಂತ್ರಿಗಳು ಅನೇಕರಿದ್ದರು. ಇವರು ಬಹು ಜಾಣತನದಿಂದಲೂ ತತ್ಪರತೆಯಿಂದಲೂ ರಾಜಕಾರ್ಯಗಳನ್ನು ನಡಸುತ್ತಿದ್ದುದರಿಂದ, ಅರಸನಿಗೆ ರಾಜ್ಯಭಾರದ ಚಿಂತೆಯಿದ್ದಿಲ್ಲ.

ಈ ಅರಸನಿಗೆ ಮಕ್ಕಳಿದ್ದಿಲ್ಲ; ಮುಂದೆ ಪಟ್ಟಕ್ಕೆ ಪುತ್ರಸಂತಾನವಾಗ ಬೇಕೆಂದು ಮಂತ್ರಿಮುಂತಾದವರೆಲ್ಲರೂ ಬಯಸುತ್ತಿದ್ದಾಗ್ಯೂ, ಸ್ತ್ರೀಸುಖಕ್ಕೆ ಈತನ ಮನಸ್ಸು ಎಳಸುತ್ತಿದ್ದಿಲ್ಲ. ಚೆಲ್ವಿಕೆಯಿಂದ ರತಿದೇವಿಯನ್ನು ನಾಚಿಸಿ ತಲೆವಾಗಿಸುವಂಥ, ವಿಲಾಸಗಳಿಂದ ಮನಸ್ಸಿಗೆ ಸೊಗಸುಗೊಳಿಸುವಂಥ, ವಿನಯಗುಣದಿಂದ ವರ್ತಿಸುವಂಥ, ಕುಲೀನ ಪತ್ನಿಯರಿದ್ದರೂ ಈ ಅರಸನು ಅವರ ಭೋಗಸುಖಕ್ಕೆ ಎರವಾಗಿದ್ದನು. ಕಾರಣವೇನಂದರೆ, ಈತನು ತನ್ನ ಗೆಳೆಯರಾದ ಅರಸುಮಕ್ಕಳೊಡಗೊಂಡು, ಒಮ್ಮೊಮ್ಮೆ ಹಾಡುವದರಲ್ಲಿ, ಒಮ್ಮೊಮ್ಮೆ ವೀಣಾಮೃದಂಗಗಳನ್ನು ಬಾರಿಸುವದರಲ್ಲಿ, ಒಮ್ಮೊಮ್ಮೆ ಬೇಟೆಯಾಡುವದರಲ್ಲಿ, ಒಮ್ಮೊಮ್ಮೆ ಪಂಡಿತಜನರನ್ನು ಕೂಡಿಸಿ ಕಾವ್ಯ ನಾಟಕ ಮುಂತಾದ ಗ್ರಂಥಗಳನ್ನು ರಚಿಸುವದರಲ್ಲಿ, ಒಮ್ಮೊಮ್ಮೆ ಶಾಸ್ತ್ರೀಯ ವಿಷಯ ವಿವೇಚನ ಮಾಡುವದರಲ್ಲಿ, ಒಮ್ಮೊಮ್ಮೆ ಇತಿಹಾಸ ಪುರಾಣ ಕಥೆಗಳನ್ನು ಕೇಳುವದರಲ್ಲಿ, ಒಮ್ಮೊಮ್ಮೆ ಅರಮನೆಗೆ ಬಂದ ಅತಿಥಿಗಳಿಗೂ ಯತಿಗಳಿಗೂ ಆದರಸತ್ಕಾರಮಾಡಿ, ಅವರ ಬಯಕೆಗಳನ್ನು ಪೂರ್ಣಮಾಡುವದರಲ್ಲಿ, ಯಾವಾಗಲೂ ಹೊತ್ತುಗಳೆಯುತ್ತಿದ್ದನು.

ಒಂದು ದಿನ ಮುಂಜಾವಿನಲ್ಲಿ, ಸೂರ್ಯನು ಮೂಡಣಿಂದ ಮೇಲಕ್ಕೇರಿ ತನ್ನ ಹೊಂಬಣ್ಣದ ಕಿರಣಗಳನ್ನು ಹರವುತ್ತ ಬರುವಾಗ, ಶೂದ್ರಕರಾಜನು ಸಭಾಮಂಟಪದಲ್ಲಿ ಸುಖಾಸನದ ಮೇಲೆ ಅದೇ ಬಂದು ಕುಳಿತಿದ್ದನು. ಅಷ್ಟರಲ್ಲಿ, ಮೈಗೆ ಚಂದನವನ್ನು ಪೂಸಿಕೊಂಡು, ಬಿಳಿಯ ಬಟ್ಟೆಯನ್ನುಟ್ಟು ಕೊಂಡು, ಬಲಗೈಯೊಳಗೆ ಬಂಗಾರದ ಬೆತ್ತವನ್ನು ಹಿಡಕೊಂಡು, ನಡುವಿನ ಎಡಗಡೆ ಜೋತಾಡುವ ಕತ್ತಿಯಿಂದ ಸರ್ಪಯುಕ್ತವಾದ ಚಂದನದ ಬಳ್ಳಿಯಂತೆ ಒಪ್ಪುವ ಒಬ್ಬ ದ್ವಾರಪಾಲಿಕೆಯು ಸಿಂಹಾಸನದ ಹತ್ತಿರ ಬಂದು, ಮೊಣಕಾಲೂರಿ, ನೆಲಕ್ಕೆ ಕೈಹಚ್ಚಿ, ಅರಸನಿಗೆ ಮುಜುರೆ ಮಾಡಿ ಎದ್ದು ನಿಂತುಕೊಂಡಳು. ಆಗ ಓಲಗದಲ್ಲಿ ಕುಳಿತ ಮಾಂಡಲಿಕ ಭೂಪಾಲರ

ಕಿರೀಟಗಳ ರತ್ನಗಳೊಳಗೆ ಅವಳ ಪಡಿನೆಳಲು ಪ್ರತಿಬಿಂಬಿಸಿದ್ದರಿಂದ, ಅರಸನ ಮೂರ್ತಿಮಂತವಾದ ಆಜ್ಞೆಯನ್ನು ಅವರು ಶಿರಸಾವಹಿಸಿಕೊಂಡಿರುತ್ತಾರೋ ಏನೋ ಅನ್ನುವಂತೆ ತೋರಿತು. ಇಂಥ ದ್ವಾರಪಾಲಿಕೆಯು, ನಮ್ರಭಾವದಿಂದ ಅರಸನಿಗೆ ಕೈಮುಗಿದು,— “ಜೀಯಾ ಚಿತ್ತೈಸಬೇಕು, ತೆಂಕಣನಾಡಿನಿಂದ ಒಬ್ಬ ಚಾಂಡಾಲ ಕನ್ನಿಕೆಯು, ಕೈಯೊಳಗೆ ಒಂದು ಗಿಳಿಯ ಪಂಜರವನ್ನು ಹಿಡಕೊಂಡು, ಆ ಗಿಳಿಯನ್ನು ಒಡೆಯರಿಗೆ ಕಾಣಿಕೆ ಕೊಡಬೇಕೆಂತಲೂ ಸ್ವಾಮಿಗಳ ದರ್ಶನಸುಖವನ್ನು ಅನುಭೋಗಿಸಬೇಕೆಂತಲೂ, ಹಾರೈಸಿಕೊಂಡು ಬಂದಿದ್ದಾಳೆ. ದೊರೆಗಳ ಅಪ್ಪಣೆಯಾದಂತೆ ನಡಕೊಳ್ಳುವೆನು” ಎಂದು ಬಿನ್ನವಿಸಿ ಸುಮ್ಮನೆ ನಿಂತಳು. ಈ ಮಾತು ಕೇಳಿ ಅರಸನು, ಸುತ್ತುಮುತ್ತು ಕುಳಿತ ಮಾಂಡಲಿಕರ ಮುಖನೋಡಿ, “ಚಿಂತೆಯಿಲ್ಲ, ಒಳಗೆ ಬರಲಿ” ಎಂದು ಅಪ್ಪಣೆ ಕೊಟ್ಟ ಕೂಡಲೆ, ದ್ವಾರಪಾಲಿಕೆಯು ಹೋಗಿ, ಆ ಚಾಂಡಾಲ ಕನ್ನಿಕೆಯನ್ನು ಒಳಗೆ ಕರಕೊಂಡು ಬರುವಾಗ, ಆಕೆ ದೂರಿಂದ ಸಭೆಯ ನಡುವೆ ಪ್ರಜ್ವಲಿಸುವದೊಂದು ಮಂಟಪವನ್ನು ಕಂಡಳು. ಆ ಮಂಟಪದ ನಾಲ್ಕೂ ಮೂಲೆಗೆ ರತ್ನಖಚಿತವಾದ ನಾಲ್ಕು ಕಂಬಗಳಿದ್ದವು ಆ ಕಂಬಗಳ ತುದಿಗೆ ಬಂಗಾರದ ನಾಲ್ಕು ಸರಪಳಿಗಳನ್ನು ತೊಡಕಿಸಿ, ಮೇಲೆ ಬಿಳೇ ರೇಶಿಮೆಯ ಮೇಲ್ಕಟ್ಟು ಕಟ್ಟಿ, ಆ ಮೇಲ್ಕಟ್ಟಿನ ದಂಡೆ ಹಿಡಿದು ಮುತ್ತಿನ ಗೊಂಚಲುಗಳನ್ನು ಸಾಲ್ಗೊಳಿಸಿ ಜೋಲುಬಿಟ್ಟಿದ್ದರು. ಇಂಥ ಮಂಟಪದ ಮಧ್ಯದಲ್ಲಿ, ಚೆಲ್ವಾದ ಚಂದ್ರಕಾಂತದ ಸಿಂಹಾಸನದ ಮೇಲೆ, ಅರಸನು ಕುಳಿತಿದ್ದನು. ಆತನ ಎಡಬಲದಲ್ಲಿ ಇಬ್ಬರು ಸುಂದರ ಸ್ತ್ರೀಯರು ನಿಂತು, ಬಂಗಾರದ ಕಾವಿನ ಚಾಮರಗಳನ್ನು ಹಿಡಿದು, ತೋಳುಗಳನ್ನು ನೆಗಪಿ ಸೂಳರಿದು ಡಾಳಿಸುತ್ತಿದ್ದರು. ಅರಸಿನ ಮೈಮೇಲಿನ ಬಿಳಿಯ ಉಡಿಗೆಯು, ಇಂಗಡಲೊಳಗಿನ ಬೆಳ್ನೊರೆಯನ್ನು ಹೋಲುತ್ತಿರುವದು; ಎದೆಗೆ ತೊಡೆದ ಅರಗಜ, ಅಷ್ಟಗಂಧಗಳ ಸುವಾಸನೆಯು ಸುತ್ತಲೆ ಚಿಮ್ಮುತ್ತಿರುವದು. ನೊಸಲೊಳಗಿನ ಊರ್ಣಾ ಎಂಬ ಸಾರ್ವಭೌಮ ಚಿಹ್ನವು, ಮೃಣಾಲತಂತುವಿನಂತೆ ಸೂಕ್ಷ್ಮತೆಯಿಂದ ಒಪ್ಪುತ್ತಿರುವದು; ಕಿರೀಟದ ಮೇಲೆ ಹವಳಮಲ್ಲಿಗೆ ಹೂವಿನ ತುರಾಯವು ಶೋಭಿಸುತ್ತಿರುವದು; ಇಂದ್ರನೀಲಮಣಿಯ ನೆಲಗಟ್ಟಿನಲ್ಲಿ ಪ್ರತಿಬಿಂಬಿಸಿದ ಅರಸನ ನೆಳಲು, ಪೃಥ್ವಿಯು ತನ್ನ ಪತಿಯನ್ನು ಪ್ರೀತಿಯಿಂದ ಹೃದಯದೊಳಗೇ ಇಟ್ಟುಕೊಂಡಿದ್ದಾಳೋ

ಏನೋ ಎನ್ನುವಂತೆ ತೋರುತ್ತಿರುವದು. ಈ ಮೇರೆಗೆ ಶೋಭಿಸುವ ಶೂದ್ರಕ ರಾಜನನ್ನು ಆ ಚಾಂಡಾಲ ಕನ್ನಿಕೆಯು ನೋಡಿ, ದೂರ ನಿಂತು, ತಾನು ಬಂದದ್ದು ಸರ್ವರಿಗೆ ತಿಳಿಯಬೇಕೆಂಬ ಬಗೆಯಿಂದ, ಕಂಕಣಗಳು ಝಣ-ರೆನ್ನುವ ಹಾಗೆ ಕೋಮಲವಾದ ಕೈಯೆತ್ತಿ, ಬಿದಿರಜೆಳಿಕೆಯನ್ನು ನೆಲಕ್ಕೆ ಅಪ್ಪಳಿಸಲು, ಒಮ್ಮಿಂದೊಮ್ಮೆ ಆದ ಸಪ್ಪಳ ಕೇಳಿ ಶೂದ್ರಕನ ಮುಖ ನೋಡುತ್ತ ಕುಳಿತ ಮಾಂಡಲಿಕ ಮುಕುಟವರ್ಧನರೆಲ್ಲರು ಗಕ್ಕನೆ ತಿರುಗಿ ಅವಳನ್ನು ನೋಡಿದರು.

ಆಗ ದ್ವಾರಪಾಲಿಕೆಯು—“ಜೀಯಾ ಚಾಂಡಾಲ ಕನ್ನಿಕೆಯನ್ನು ನೋಡ ಬೇಕು” ಎಂದು ಅರಿಕೆ ಮಾಡಿಕೊಂಡ ಬಳಿಕ, ಅರಸನು ಅವಳನ್ನು ದಿಟ್ಟಿಸಿ ನೋಡಹತ್ತಿದನು. ಅವಳ ಮುಂದೆ, ಮೈಮೇಲಿ ಬಿಳೇ ಬಟ್ಟೆ ಹೊತ್ತಂಥ ಒಬ್ಬ ದಿನಹೋದ ಮನುಷ್ಯನಿದ್ದನು; ಆವನು ಹೊಲೆಯನಾಗಿದ್ದರೂ, ಸೌಮ್ಯ ಪುರುಷನಂತೆ ತೋರುತ್ತಿದ್ದನು. ಆಕೆಯ ಹಿಂದೆ ಒಬ್ಬ ಹುಡುಗ ನಿದ್ದನು; ಆವನೂ ಹೊಲೆಯರವನೇ. ಆ ಹುಡುಗನ ಎರಡೂ ಕೆನ್ನೆಗಳ ಮೇಲಿನ ಜುಲುಪಿಗಳು ಗಾಳಿಗೆ ಹಾರಾಡುತ್ತಿದ್ದವು; ಅವನು ಕೈಯೊಳಗೆ ಬಂಗಾರದ ತಂತಿಯ ಪಂಜರವನ್ನು ಹಿಡಿದಿದ್ದನು; ಆದರೊಳಗೆ ಒಂದು ಗಿಳಿ-ಯಿತ್ತು. ಅದರ ಹಸರು ಬಣ್ಣದಿಂದ ಆ ಪಂಜರವು ಪಚ್ಚರತ್ನದ ಪಂಜರದ ಹಾಗೆ ಕಾಣಿಸುತ್ತಿರುವದು. ಆ ಚಾಂಡಾಲ ಕನ್ನಿಕೆಯು ಬಹಳ ಕಪ್ಪು ಇದ್ದದರಿಂದ, ಇಂದ್ರನೀಲಮಣಿಯ ಗೊಂಬೆಯು ಮಾತಾಡುವಂತೆ ಒಪ್ಪು-ತ್ತಿರುವಳು. ಹಿಮ್ಮಡತನಕ ಇಳಿಬಿದ್ದ ಕರಿಯ ನಿಲುವಂಗಿಯನ್ನು ತೊಟ್ಟುಕೊಂಡು, ಮೇಲೆ ಹೊಂಬಣ್ಣದ ಶೆಲ್ಲೆಯನ್ನು ಹೊತ್ತಿದ್ದಳು; ತಲೆ ಗೂದಲೊಳಗೆ ಹಸ್ತಿದಂತದ ಹಣಿಗೆ ಇಟ್ಟುಕೊಂಡದರಿಂದ, ಅದು ನೀಲ ವರ್ಣದ ಆಕಾಶದೊಳಗಿನ ಚಂದ್ರಬಿಂಬದಂತೆ ಹೊಳೆಯುತ್ತಿರುವದು. ಅವಳ ನೊಸಲೊಳಗಿನ ಗೋರೋಚನದ ಬೊಟ್ಟು ನೆಟ್ಟಗೆ ಎದ್ದು ಕಾಣಿಸುತ್ತಿರು ವದು. ಅಂಗಾಲಿಗೆ ಅಲತಿಗೆಯ ರಸವನ್ನು ತೊಡೆದುದರಿಂದ, ಆಕೆಯ ಅಡಿಗಳು ಅಶೋಕದ ತಳಿರುಗಳಂತೆ ತೋರುತ್ತಿರುವವು. ಕಾಲೊಳಗಿನ ಪೈಜಣದ ರತ್ನಪ್ರಭೆಯು ಅವಳ ಮೈಯಲ್ಲಿ ಹಬ್ಬಿರುವದು. ತಲೆಯಲ್ಲಿ ಚಂದನದ ಎಳೆದಳಿರು ಮುಡಿದು, ಕೈಯಲ್ಲಿ ಕಮಲಪುಷ್ಪವನ್ನು ಹಿಡಿದಿದ್ದಳು. ನೂತನ ಯೌವನದಿಂದಲೂ, ಸರಿಯಾದ ಆಕಾರದಿಂದಲೂ, ಲೋಕೋತ್ತರ-

ವಾದ ಲಾವಣ್ಯದಿಂದಲೂ, ಪುರುಷರ ಮನಸ್ಸನ್ನು ಎಳಕೊಳ್ಳುವಲ್ಲಿ ಸಂಪನ್ನೆ ಳಿದ್ದಳು. ಹೊಲೆಯರಲ್ಲಿ ಹುಟ್ಟಿದ್ದೊಂದೇ ಕುಂದಲ್ಲದೆ, ಬೇರೆ ಯಾವ ಕುಂದೂ ಇದ್ದಿಲ್ಲ. ಇಂಥ ಭುವನಸುಂದರಿಯಾದ ಮಾತಂಗಕನ್ನಿಕೆಯನ್ನು ನೋಡಿ ಅರಸನು ಬೆರಗಾಗಿ ಮನದೊಳಗೆ— "ಅಹಹಾ ಬ್ರಹ್ಮನು ಎಂಥ ಹುಚ್ಚನು! ಎಂಥಲ್ಲಿ ರೂಪಲಾವಣ್ಯದ ನಿಕ್ಷೇಪವನ್ನು ಇಟ್ಟನು! ಆಕೃತಿ ಯಿಂದ ಅತಿ ಮನೋಹರಳಾದಾಗ್ಯೂ, ಹೊಲೆಯರ ಕುಲದಲ್ಲಿ ಹುಟ್ಟಿದ್ದರಿಂದ ಇವಳು ದೂಷಿತಳೇ ಸರಿ. ಸೌಂದರ್ಯದ ಹೆಮ್ಮೆಯುಳ್ಳ ಸಕಲ ಲೋಕ ದೊಳಗಿನ ಸ್ತ್ರೀಯರನ್ನು ಈಕೆ ಸೋಲಿಸಲೆಂಬ ಬಗೆಯಿಂದ, ಬ್ರಹ್ಮನು ಇಂಥ ಚಲ್ವಿಕೆಯಿಟ್ಟನೋ! ಇಲ್ಲವೆ, ಮುಟ್ಟಿದರೆ ಮಾಸುವಳೆಂತಲೂ, ಮಾಸಿದರೆ ತಾನು ನಿರ್ಮಾಣಮಾಡಿದ ಸುಕುಮಾರತನಕ್ಕೆ ಭಂಗಬರುತ್ತದೆಂತಲೂ ಬಗೆದು, ಇವಳ ಚಲ್ವಿಕೆಯು ಅಚ್ಚಳಿಯದೆ ಸ್ವಚ್ಛವಾಗಿರಲೆಂದು, ಮುಟ್ಟ-ಬಾರದ ಕುಲದಲ್ಲಿ ಇವಳನ್ನು ಹುಟ್ಟಿಸಿದನೋ! ಏನೋ!" ಎಂದು ಯೋಚಿಸುತ್ತಿರುವಾಗ, ಆ ಚಾಂಡಾಲ ಕನ್ನಿಕೆಯು ಅರಸನಿಗೆ ತಲೆವಾಗಿ ನೆಲಮುಟ್ಟಿ ನಮಿಸಿ, ಆತನ ಅಪ್ಪಣೆಯಿಂದ, ಇಂದ್ರನೀಲಮಣಿಯ ನೆಲಗಟ್ಟಿನ ಮೇಲೆ ಕುಳಿತುಕೊಂಡಳು. ಅವಳ ಸಂಗಡ ಬಂದ ಆ ಮುದುಕನು, ಆ ಹುಡುಗನ ಕೈಯೊಳಗಿನ ಗಿಳಿಯ ಪಂಜರ ತಕ್ಕೊಂಡು ಮುಂದಕ್ಕೆ ಬಂದು, ಅದನ್ನು ಮುಂದೆ ಮಾಡಿ ವಿನಯದಿಂದ "ಜೀಯಾ, ಈ ಗಿಳಿಯು ಸಕಲ ಶಾಸ್ತ್ರಗಳನ್ನೂ ರಾಜನೀತಿಯನ್ನೂ ಕಲಿತಿದೆ; ಇತಿಹಾಸ, ಪುರಾಣ, ಸಂಗೀತ, ಸುಭಾಷಿತ, ನಾಟಕ, ನೃತ್ಯ ಮುಂತಾದ ಕಲೆಗಳನ್ನು ಚೆನ್ನಾಗಿ ಬಲ್ಲದು; ವಿನೋದದ ಮಾತುಗಳನ್ನಾಡುವಲ್ಲಂತೂ ಮೇಲಾದದ್ದು; ವೀಣಾಮೃದಂಗ ಗಳನ್ನು ಬಾರಿಸಬಲ್ಲದು; ಇದರ ಹೆಸರು ವೈಶಂಪಾಯನ; ದೊರೆಗಳಲ್ಲಿ ಎಲ್ಲ ರತ್ನಗಳುಂಟು; ಇದೂ ಒಂದು ರತ್ನವು ಸ್ವಾಮಿಗಳ ಸನ್ನಿಧಾನದಲ್ಲಿರ-ತಕ್ಕದ್ದೆಂಬ ಇಚ್ಛೆಯಿಂದ, ಈ ಕನ್ನಿಕೆಯು ಒಡೆಯರ ಅಡಿಗಳ ಬಳಿಗೆ ಬಂದಿದ್ದಾಳೆ; ದಯಮಾಡಿ ಇದನ್ನು ಅಂಗೀಕರಿಸಬೇಕು" ಎಂದು ಆ ಪಂಜರವನ್ನು ಮುಂದಿಟ್ಟು, ಹಿಂದಕ್ಕೆ ಸರಿದನು.

ಕೂಡಲೆ ಆ ಪಂಜರದೊಳಗಿನ ಅರಗಿಳಿಯು ಅರಸನ ಮುಖವನ್ನು ನೋಡಿ, ಬಲಗಾಲೆತ್ತಿ- "ಭೂಲೋಕದೊಡೆಯನೇ, ನಿನಗೆ ಜಯವಾಗಲಿ" ಎಂದು ಹರಸಿ, ಅರಸನನ್ನು ಅನುಲಕ್ಷಿಸಿ ಈ ಕಂದವನ್ನು ಅಂದಿತು:—

" ದೊರೆಗಳೆ ನಿಮ್ಮರಿಗಳ ಹೆಂ।
ಡಿರ ಎದೆಗಳು† ಮಿಂದು ತೋರ್ಪುವಾ ಕಣ್ಣೀರಿಂ ॥
ದುರಿದು ಶೋಕಾಗ್ನಿಯಿಂದಂ।
ವರಯತಿ ತಪಮಾಡುವಂತೆ ತೊರೆವಾಹಾರಂ " ॥ ೧ ॥

ತಾತ್ಪರ್ಯ:— ದೊರೆಗಳೇ, ನಿಮ್ಮ ವೈರಿಗಳ ಹೆಂಡಿರ ಎದೆಗಳು ತಪಸ್ಸುಮಾಡುತ್ತವೆಯೋ ಏನೋ ಅನ್ನುವಂತೆ ತೋರುತ್ತವೆ. ಹೇಗಂದರೆ, ತಪಸ್ಸು ಮಾಡುವವರು ಯಾವಾಗಲೂ ಸ್ನಾನಮಾಡುವಂತೆ, ಇವೂ ಕಣ್ಣೀ-ರಿಂದ ತೊಯ್ಯುತ್ತವೆ; ಅವರು ಬೆಂಕಿಯನ್ನು ಇಟ್ಟುಕೊಂಡಂತೆ ಇವೂ ದುಃಖಾಗ್ನಿಯನ್ನು ಇಟ್ಟುಕೊಂಡಿವೆ; ಅವರು ಆಹಾರವನ್ನು ತೊರೆಯುವಂತೆ ಇವೂ ಆ (ಮುತ್ತಿನ) ಹಾರವನ್ನು ತೊರೆದಿರುವವು.

ಅರಸನು ಈ ಕಂದವನ್ನು ಕೇಳಿ ಆಶ್ಚರ್ಯಗೊಂಡು, ಬಳಿಯಲ್ಲಿ ಕುಳಿತ ಬೃಹಸ್ಪತಿಸಮಾನನಾದ ಕುಮಾರಪಾಲಿತನೆಂಬ ಮುಖ್ಯ ಮಂತ್ರಿಗೆ, ಹರ್ಷ-ದಿಂದ—" ನೀವು ಈ ಗಿಳಿಯ ನುಡಿಗಳನ್ನು ಕೇಳಿದಿರೋ! ಇದರ ಸ್ವರವೆಷ್ಟು ಮಂಜುಳವು! ವರ್ಣೋಚ್ಚಾರವೆಷ್ಟು ಸ್ಪಷ್ಟವು! ಬಹುತರವಾಗಿ ಪಶುಪಕ್ಷಿಗಳು ಆಹಾರನಿದ್ರಾಭಯ ಮುಂತಾದವುಗಳನ್ನು ಮಾತ್ರ ಬಲ್ಲವು. ಬುದ್ಧಿಪೂರ್ವಕವಾಗಿ ಹೊಸ ಕಲ್ಪನೆಗಳನ್ನು ಅರಿಯವು. ಈ ಪಕ್ಷಿಯು, ತಾನು ಕಲ್ಪನೆಯಿಂದ ರಚಿಸಿ, ಈ ಕಂದವನ್ನು ಅಂದಿತು. ಇದು ಬಹು ಆಶ್ಚರ್ಯವು" ಅಂದನು. ಇದನ್ನು ಕೇಳಿ ಕುಮಾರಪಾಲಿತನು—" ಜೀಯಾ ಇದರೊಳಗೇನು ಆಶ್ಚರ್ಯ? ಗಿಳಿ, ಗೊರವಂಕ ಮುಂತಾದ ಕೆಲವು ಪಕ್ಷಿಗಳು, ಕಲಿಸಿದರೆ ಕಲಿತು ಮಾತಾಡುತ್ತವೆ. ಅಂಥದರೊಳಗೂ ಇವು, ಪೂರ್ವಜನ್ಮದ ಕರ್ಮಧರ್ಮಗಳ ಸಂಯೋಗದಿಂದ, ಒಂದೊಂದು ವೇಳೆ ಶಾಸ್ತ್ರನೀತಿಗಳನ್ನು ಸಹ ಕಲಿಯಬಹುದು" ಎಂದು ಮಾತಾಡುವಷ್ಟರೊಳಗೆ ಆರು ತಾಸಿನ ಭೇರಿ ಬಾರಿಸಿತು. ಆ ಧ್ವನಿಯನ್ನು ಕೇಳಿ, ಸ್ನಾನದ ಸಮಯವಾಯಿತೆಂದು ಓಲಗದೊಳಗಿನ ಸರ್ವಮಾಂಡಲಿಕ ಭೂಪಾಲರಿಗೆ ಅಪ್ಪಣೆ ಕೊಟ್ಟು, ಅರಸನು ಸಭಾಮಂಟಪದಿಂದ ಎದ್ದು, ತಾನೇ ಆ ಚಾಂಡಾಲ ಕನ್ನಿಕೆಗೆ "ಸ್ವಸ್ಥದಿಂದ ಇಲ್ಲಿ ಇರು" ಎಂದು ಹೇಳಿ ವೈಶಂಪಾಯನನನ್ನು ಒಳಗೆ

---

† ಮೂಲ ಗ್ರಂಥದಲ್ಲಿ "ಸ್ತನಯುಗ" ಎಂದು ಅದೆ.

ಒಪ್ಪು ಏನಾದರೂ ತಿನ್ನಿಸೆಂದು, ತನ್ನ ತಾಂಬೂಲದ ಕರಡಿಗೆ ಹಿಡಿಯುವ ಸ್ತ್ರೀಗೆ ಅಪ್ಪಣೆ ಮಾಡಿ ಅಂತಃಪುರವನ್ನು ಹೊಕ್ಕನು.

ಬಳಿಕ ಅರಸನು, ತನ್ನ ಮಿತ್ರರಾದ ರಾಜಪುತ್ರರನ್ನು ಸಂಗಡ ಕರಕೊಂಡು ಗರಡಿಮನೆಗೆ ಹೋಗಿ, ಅಲ್ಲಿ ಗರಡಿಸಾಧಕ ಮಾಡಿ, ಲೋಡು ತಿರುವಿ, ಕುಸ್ತಿ ಹಿಡಿದು ಜೋರನೆ ಬೆವತನು; ಆಗ ಆತನ ಮೈಮೇಲಿನ ಬೆವರ ಹನಿಗಳು ಮುತ್ತುಗಳಂತೆ ಶೋಭಿಸುತ್ತಿದ್ದವು.

ಅಷ್ಟರೊಳಗೆ, ಸೇವಕರು ಸ್ನಾನಗೃಹದೊಳಗೆ ಮೇಲೆ ಮೇಲ್ಕಟ್ಟು ಕಟ್ಟಿ, ಕೆಳಗೆ ಸ್ಫಟಿಕದ ಚೌಕಿಯನ್ನು ಇಟ್ಟು, ಒಂದು ಮಗ್ಗಲಿಗೆ ಗಂಧೋದಕ ತುಂಬಿದ ಬಂಗಾರದ ಡೋಣಿಯನ್ನೂ, ಒತ್ತಟ್ಟಿಗೆ ಘನುಗುಜವಾದಿ ಬೆರೆದ ನೀರು ತುಂಬಿದ ಬೆಳ್ಳಿಯ ಕೊಡಗಳನ್ನೂ ಇಟ್ಟು, ಸ್ನಾನದ ಸರ್ವ ಸಿದ್ಧತೆ ಮಾಡಿದ್ದರು. ಅರಸನು ಬಂದು, ಸ್ಫಟಿಕದ ಚೌಕಿಯ ಮೇಲೆ ಕುಳಿತ ಕೂಡಲೆ ಮಾರ್ಗ ನಿರೀಕ್ಷಿಸುತ್ತ ನಿಂತ ವಾರನಾರಿಯರು, ತವಕದಿಂದ ತಮ್ಮ ಎದೆಯ ಮೇಲಿನ ಸೆರಗು ಒಡ್ಯಾಣದೊಳಗೆ ತೊಡಕಿಸಿಕೊಂಡು, ಮುಂಗೈ ಕಂಕಣಗಳನ್ನು ಹಿಂದಕ್ಕೆ ಸರಿಸಿಕೊಂಡು, ಕಾಲೊಳಗಿನ ಪೈಜಣಗಳನ್ನು ತೆಗೆದಿಟ್ಟು, ಮುಂದಕ್ಕೆ ಬಂದ ಮುಂದಲೆಯ ಕೂದಲುಗಳನ್ನು ಹಿಂದಕ್ಕೆ ತಿದ್ದಿಕೊಂಡು, ಸೀರೆಯ ನಿರಿಗೆಗಳನ್ನು ಕಾಲೊಳಗೆ ಅವಚಿ ಹಿಡಕೊಂಡು, ಅರಸನ ಮೈಗೆ ಮಲ್ಲಿಗೆ ಎಣ್ಣೆಯನ್ನು ಪೂಸಿ, ಕೋಮಲವಾದ ಕೈಗಳಿಂದ ತಿಕ್ಕಿ ತಿಕ್ಕಿ ಮೈತೊಳೆದರು. ಆಗ ಜಲದೇವತೆಗಳು ವರುಣನಿಗೆ ಸ್ನಾನ ಮಾಡಿಸುತ್ತಾರೋ ಏನೋ ಅನ್ನುವಂತೆ ತೋರಿತು.

ಈ ಮೇರೆಗೆ, ಅರಸನು ಸ್ನಾನಮಾಡಿ, ಸೂಕ್ಷ್ಮವಾದ ಬಿಳಿಯ ಮಡಿ ವಸ್ತ್ರವನ್ನು ಉಟ್ಟುಕೊಂಡು, ತಲೆಗೆ ಬಿಳಿಯ ರೇಶಿಮೆಯ ಶಾಲನಾಮೆಯನ್ನು ಸುತ್ತಿಕೊಂಡು, ಮಂತ್ರೋದಕದಿಂದ ಸೂರ್ಯನಿಗೆ ಅರ್ಘ್ಯಕೊಟ್ಟು, ಪಿತೃ ತರ್ಪಣ ಮಾಡಿ, ದೇವರ ಮನೆಯೊಳಗೆ ಹೋಗಿ, ಶಿವಪೂಜೆ ಮಾಡಿ, ಹೋಮಶಾಲೆಯಲ್ಲಿ ಹೋಮಕರ್ಮವನ್ನು ತೀರಿಸಿ, ವಿಲೇಪನ ಗೃಹದೊಳಗೆ ಹೊಕ್ಕು, ಹಣೆಗೆ ಕೇಶರಗಂಧದ ಬೊಟ್ಟು ಹಚ್ಚಿಕೊಂಡು, ಕಸ್ತೂರೀ ಕರ್ಪೂರಗಳಿಂದ ಬೆರೆದ ಶ್ರೀಗಂಧವನ್ನು ಸರ್ವಾಂಗಕ್ಕೂ ಲೇಪನ ಮಾಡಿಕೊಂಡು, ಮೈಮೇಲೆ ಬಲುಬೆಲೆಯ ಶಾಲುಜೋಡಿಯನ್ನು ಹೊತ್ತುಕೊಂಡು, ಭೋಜನಶಾಲೆಯೊಳಗೆ ದಿನಾಲು ತನ್ನ ಪಂಕ್ತಿಯಲ್ಲಿ ಉಂಬ ಅಪ್ತರಾದ

ರಾಜಪುತ್ರರೊಡಗೊಂಡು, ಪ್ರೀತಿಯಿಂದ ಷಡ್ರಸಾನ್ನವನ್ನು ಯಥೇಚ್ಛವಾಗಿ ಭೋಜನ ಮಾಡಿದನು.

ಬಳಿಕ ತ್ರಯೋದಶಗುಣ ತಾಂಬೂಲ ಸವಿದು, ಭೋಜನವಾದ ಮೇಲೆ ಹೋಗಿ ಕುಳಿತುಕೊಳ್ಳುವ ಮಂಟಪಕ್ಕೆ ಹೋದನು. ಆ ಮಂಟಪದ ನಾಲ್ಕು ಮಗ್ಗಲಿಗೆ ಸ್ಫಟಿಕದ ಗೋಡೆಯಂತೆ ಒಪ್ಪುವ ಬಿಳೀ ಪರದೆಗಳು ಇಳಿಬಿಟ್ಟಿದ್ದವು. ಕಸ್ತೂರಿಯೊಡನೆ ಬೆರೆದ ಚಂದನೋದಕದಿಂದ ನೆಲವನ್ನು ಸಾರಿಸಿ, ಅದರ ಮೇಲೆ ಅರಳಮಲ್ಲಿಗೆ ಹೂವುಗಳನ್ನು ಹರವಿದ್ದರಿಂದ, ಆ ನೆಲವು ನಕ್ಷತ್ರಗಳಿಂದ ಶೋಭಿಸುವ ಆಕಾಶಮಂಡಲದಂತೆ ಒಪ್ಪುತ್ತಿತ್ತು. ಆ ಮಂಟಪದ ನಾಲ್ಕು ಮೂಲೆಯ ಬೆಳ್ಳಿಯ ಕಂಬಗಳಲ್ಲಿ ಕೆತ್ತಿದ ಪುತ್ಥಳಿಗಳು ಗೃಹದೇವತೆಗಳಂತೆ ಶೋಭಿಸುತ್ತಿದ್ದವು. ಆ ಮಂಟಪದ ಮಧ್ಯಭಾಗದಲ್ಲಿ ಸ್ಫಟಿಕದ ಕಟ್ಟೆಯ ಮೇಲೆ ಹಸ್ತಿದಂತದ ಮಂಚವಿಟ್ಟು, ಅದರ ಮೇಲೆ ಹಂಸತುಪ್ಪಳ ಹಾಸಿಗೆ ಹಾಕಿ, ಮೇಲೆ ಅದೇ ಆಗ ಅರಳಿದ ಜಾಜಿಮಲ್ಲಿಗೆ ಹೂವುಗಳ ತನಿಗಂಪಿನಿಂದಲೂ, ಅಗರುಧೂಪದಿಂದಲೂ, ಘಮಘಮಿಸುವ ಬಿಳಿಯ ಬಟ್ಟೆಯನ್ನು ಹಾಸಿ, ಮೇಲ್ಗಡೆಗೆ ಕುತ್ನಿಯ ತಲೆದಿಂಬನ್ನೂ ಕಾಲ-ದೆಸೆಗೆ ಶಾಲಜೋಡಿಯನ್ನೂ ಇಟ್ಟಿದ್ದರು. ಆ ಮಂಚದ ಮೇಲೆ ಅರಸನು ಕುಳಿತುಕೊಂಡು, ಯಾವಾಗ ಆ ಗಿಣಿಯ ಮುಖದಿಂದ ಅದರ ವೃತ್ತಾಂತವನ್ನೆಲ್ಲ ಕೇಳೇನೆಂದು ಲವಲವಿಕೆಯುಳ್ಳವನಾಗಿ "ಅಂತಃಪುರದೊಳಗಿನ ವೈಶಂಪಾಯನನನ್ನು ತಕ್ಕೊಂಡು ಬಾ" ಎಂದು ಹತ್ತಿರ ನಿಂತ ತೊತ್ತಿಗೆ ಅಪ್ಪಣೆ ಮಾಡಿದನು. ಆ ತೊತ್ತು ಆ ಗಿಣಿಯ ಪಂಜರ ತಂದು ಮುಂದಿಟ್ಟ ಕೂಡಲೆ ಅರಸನು ಗಿಳಿಯನ್ನು ನೋಡಿ—"ರಾಣಿವಾಸದೊಳಗೆ ನೀನು ಏನೇನು ತಿಂದಿ?" ಎಂದು ಕೇಳಲು—"ಜೀಯಾ, ಜೇಂಗೊಡದೊಳಗಿನ ನೆಲ್ಲಿಕಾಯಿಗಳನ್ನೂ, ಸೊಕ್ಕಿದ ಕೋಗಿಲೆಗಳ ಕಣ್ಣುಗಳ ಬಣ್ಣದ ನೀರಲ ಹಣ್ಣುಗಳನ್ನೂ, ಸಿಂಹನ ಹೊಡತಕ್ಕೆ ನೆತ್ತರಗೂಡಿ ಅದೇ ಉದುರಿ ಬಿದ್ದ ಆನೆದಲೆಯೊಳಗಿನ ಮುತ್ತುಗಳಂತೆ ಕಂಗೊಳಿಸುವ ದಾಳಿಂಬಬೀಜಗಳನ್ನೂ, ದ್ರಾಕ್ಷೆಯ ಹಣ್ಣುಗಳನ್ನೂ ರಾಣಿದೊರೆಗಳು ತಾವೇ ತಮ್ಮ ಕೈಮುಟ್ಟಿ ನನಗೆ ಅತಿ ಪ್ರೀತಿಯಿಂದ ತಿನಿಸಿ, ಬಳಿಕ ರಾಯನೆಲ್ಲಿಯ ರಸವನ್ನು ಕುಡಿಸಿದರು; ಆ ಫಲಗಳೆಲ್ಲ ಅಮೃತದಂತೆ ನನಗೆ ಸವಿ ಹತ್ತಿದವು" ಎಂದು ಆ ಗಿಳಿಯು ಹೇಳುವಾಗ ನಡುವೆ ಅರಸು—"ಒಳ್ಳೆಯದು ಇದು ಇರಲಿ; ಮೊದಲು ನನಗೆ

ನಿನ್ನ ವೃತ್ತಾಂತವನ್ನು ಹೇಳು. ನೀನು ಯಾವ ನಾಡೊಳಗೆ ಹುಟ್ಟಿದಿ ? ನಿನ್ನ ತಾಯಿ ತಂದೆಗಳು ಯಾರು ? ನಿನಗೆ ವೈಶಂಪಾಯನನೆಂಬ ಹೆಸರು ಬಂದ ಕಾರಣವೇನು ? ನಿನಗೆ ವೇದಶಾಸ್ತ್ರಜ್ಞಾನವು ಹೇಗೆ ಪ್ರಾಪ್ತವಾಯಿತು ? ಇದೆಲ್ಲ ನಿನಗೆ ಜನ್ಮಾಂತರದ ಸ್ಮರಣದಿಂದ ಪ್ರಾಪ್ತವಾಯಿತೋ ? ಯಾವ-ನಾದರೂ ಸಿದ್ಧಪುರುಷನ ವರದಿಂದ ಪ್ರಾಪ್ತವಾಯಿತೋ ? ಇಲ್ಲವೆ ಪಕ್ಷಿಯ ರೂಪವನ್ನು ತಾಳಿ ಗುಪ್ತ ರೂಪದಿಂದಿರುವ ಯಾವನಾದರೂ ಮಹಾಪುರುಷ ನಿರುವಿಯೋ ? ನೀನು ಮೊದಲು ಎಲ್ಲಿ ಇದ್ದಿ ? ಹುಟ್ಟಿ ಎಷ್ಟು ದಿವಸ ವಾಯಿತು ? ನೀನು ಇಷ್ಟು ಜಾಣನಿದ್ದು ಆ ಚಾಂಡಾಲ ಕನ್ನಿಕೆಯ ಕೈಯೊಳಗೆ ಸಿಕ್ಕ ಕಾರಣವೇನು ? ಇಲ್ಲಿಗೆ ಬಂದ ಕಾರಣವೇನು ? ಇದನ್ನೆಲ್ಲ ಸಾದ್ಯಂತವಾಗಿ ನಮಗೆ ವಿಸ್ತರಿಸಬೇಕು" ಎಂದು ಆ ಗಿಳಿಗೆ ಅಪ್ಪಣೆ ಮಾಡಿದನು.

ಈ ಮೇರೆಗೆ ಅರಸನು ಆದರದಿಂದ ತಾನಾಗಿ ಕೇಳಿದ್ದಕ್ಕೆ ವೈಶಂಪಾ-ಯನ ಗಿಳಿಯು ಕ್ಷಣಹೊತ್ತು ಮನದೊಳಗೆ ಆಲೋಚಿಸಿ ಆನಂದಬಟ್ಟು, "ಜೀಯಾ, ನನ್ನ ಕಥೆಯು ಬಹು ವಿಸ್ತಾರವಿದೆ, ತಮಗೆ ಬೇಸರುಬಂದೀತು. ಆದರೂ ಕೇಳುವ ಕಾಂಕ್ಷೆಯಿದ್ದರೆ ಹೇಳುತ್ತೇನೆ, ಚಿತ್ತಗೊಟ್ಟು ಆಲಿಸಬೇಕು" ಎಂದು ಹೇಳಲಾರಂಭಿಸಿತು.

ಮೂಡಣ-ಕಡಲ ಮೊದಲ್ಗೊಂಡು ಪಡುವಣ ಕಡಲ ಪರ್ಯಂತರ ಹಬ್ಬಿದಂಥ ವಿಂಧ್ಯಾಟವಿಯೆಂಬುದೊಂದು ದೊಡ್ಡ ಅರಣ್ಯವಿದೆ. ಅದರೊಳಗೆ ಹಿಂಡುಗಟ್ಟಿ ತಿರುಗುತ್ತಿರುವ ಸಾವಿರಾರು ಕಾಡಾನೆಗಳ ಮದೋದಕ ಬಿದ್ದು ಯಾವಾಗಲೂ ನೆಲವು ನೆನೆಯುವದರಿಂದ, ಅಲ್ಲಿಯ ಮರಗಳು ಬಹು ಎತ್ತರ ವಾಗಿ ಬೆಳೆದು, ಮುಗಿಲಿಗೆ ಮುದ್ದು ಕೊಡುತ್ತವೆ. ಅವುಗಳ ತುದಿಯ ಮೇಲಿನ ಹೂವುಗಳು ಆಕಾಶದೊಳಗಿನ ತಾರೆಗಳಂತೆ ಒಪ್ಪುವವು. ಆ ಕಾನನದೊಳಗೆ ಹುಲಿ, ಕರಡಿ, ಸಿಂಹ ಮುಂತಾದ ಕ್ರೂರಮೃಗಗಳ ಧ್ವನಿಗಳು ಯಾವಾಗಲೂ ಕಿವಿಗೆ ಬೀಳುತ್ತವೆ; ಅದರೊಳಗಿನ ಮರಿ ಆನೆಗಳು ಸೊಂಡಿಲು ಹಾಕಿ ಎಳೆದೆಳೆದು ಉದುರಿಸಿದ ತಮಾಲತಳಿರುಗಳ ತನಿಗಂಪು, ಕಡಿವಡೆದ ಚಂದನ ವೃಕ್ಷಗಳ ಇನಿಗಂಪು, ಓಡಾಡುವ ಕಸ್ತೂರೀಮೃಗ, ಪುನುಗಿನ ಬೆಕ್ಕುಗಳ ಮೈಗಂಪು ಒಟ್ಟುಗೂಡಿ ವನವೆಲ್ಲ ಘಮಘಮಿಸುತ್ತದೆ. ಅಲ್ಲಲ್ಲಿಗೆ ತೆಂಗು, ಅಡಿಕೆ, ಮಾವು ಮುಂತಾದ ಮರಗಳೂ, ಕೇದಗಿ ಬಾಳೆಗಳ ಬನಗಳೂ, ಎಲೆ

ಯಾಲಕ್ಕಿಗಳ ತೋಟಗಳೂ, ಬಿದುರು ಬೆತ್ತಗಳೂ ಒಪ್ಪುವವು. ದಣಿದು ಬಂದ ದಾರಿಕಾರರಿಗೆ ಕುಳಿತುಕೊಳ್ಳುವದಕ್ಕೆ ಅಲ್ಲಲ್ಲಿಗೆ ಹಾಸಿದ ಲವಂಗಲತೆಗಳ ಎಳೆದಳಿರುಗಳೂ, ಮಲ್ಲಿಗೆಯ ಮಂಟಪಗಳೂ ಶೋಭಿಸುತ್ತವೆ. ಕೆಲವೆಡೆಯಲ್ಲಿ ಕೋಗಿಲೆಗಳ ಪಂಚಮಸ್ವರವೂ ಕೆಲವೆಡೆಯಲ್ಲಿ ತಾಳವೃಕ್ಷಗಳ ಫಲಗಳ ತೂತಿನೊಳಗೆ ಗಾಳಿ ಹೋಗುವದರಿಂದ ಉಂಟಾಗುವ ಮಂಜುಳ ಧ್ವನಿಗಳೂ ಕೇಳಬರುತ್ತವೆ. ಅಲ್ಲಲ್ಲಿಗೆ ನೀರಿನ ಝರಿಗಳು ಹರಿಯುತ್ತವೆ. ಮಂಗಗಳು ಮರಗಳ ಟೊಂಗೆಗಳನ್ನು ಮುರಿಮುರಿದು ಚೆಲ್ಲಿ, ಇತ್ತಿಂದತ್ತ, ಅತ್ತಿಂದಿತ್ತ ಹಾರಾಡುತ್ತವೆ.

ಈ ಮೇರೆಗೆ ಮನಸ್ಸಿಗೆ ಸೊಗಸಾದ ವಿಂಧ್ಯಾಟವಿಯೊಳಗೆ ದಂಡಕಾರಣ್ಯವೆಂಬುದೊಂದು ಪ್ರದೇಶವಿದೆ. ಅದರ ಮೇರೆಯ ಮೇಲೆ ಸಕಲ ಲೋಕ ಪ್ರಖ್ಯಾತನಾದ ಅಗಸ್ತ್ಯ ಋಷಿಯ ಆಶ್ರಮವುಂಟು. ಆ ಋಷಿಯ ಹೆಂಡತಿ ಲೋಪಾಮುದ್ರೆಯು ತಮ್ಮ ಆಶ್ರಮದ ಸುತ್ತು ಮುತ್ತು ಹಣ್ಣಿನ ಗಿಡಗಳನ್ನೂ, ಹೂವಿನ ಬಳ್ಳಿಗಳನ್ನೂ ಹಚ್ಚಿ, ತಾನೇ ಅವುಗಳಿಗೆ ಕಟ್ಟೆಯ ಕಟ್ಟಿ, ದಿನಾಲು ನೀರು ಹಣಿಸಿ ಮಕ್ಕಳಂತೆ ಅವುಗಳನ್ನು ಪ್ರೀತಿಯಿಂದ ಬೆಳೆಸಿದ್ದಾಳೆ. ಇವರ ಮಗನಾದ ದೃಢದಸ್ಯು ಎಂಬವನು ಬ್ರಹ್ಮಚರ್ಯ ವ್ರತವನ್ನು ಕೈಕೊಂಡು ಪರ್ಣಕುಟಿಯೊಳಗೆ ಭಿಕ್ಷೆಬೇಡುತ್ತ ಬಹುಕಾಲದಿಂದ ಅಲ್ಲಿ ಇರುತ್ತಾನೆ. ಸುತ್ತು ಮುತ್ತಲು ಬಾಳೆಯಬನವಿರುವದರಿಂದ, ಆ ಆಶ್ರಮದ ನಾಲ್ಕೂ ಮಗ್ಗಲುಗಳು ಹಚ್ಚಗೆ ಸೊಂಪಾಗಿ ಶೋಭಿಸುತ್ತವೆ. ಈ ಬಾಳೆಯ ಬನದ ದಂಡೆಗೆ ಹತ್ತಿ ಗೋದಾವರೀ ನದಿಯು ಹರಿಯುತ್ತದೆ. ಅದೇ ಆಶ್ರಮಸ್ಥಾನದಲ್ಲಿ ದಶರಥನ ಮಗನಾದ ರಾಮಚಂದ್ರನು ತಂದೆಯ ವಚನವನ್ನು ಕಡೆಗಾಣಿಸುವದಕ್ಕಾಗಿ ರಾಜ್ಯದೊರೆದು ಬಂದು, ಪಂಚವಟಿಯಲ್ಲಿ ಲಕ್ಷ್ಮಣನ ಕೈಯಿಂದ ಪರ್ಣಶಾಲೆಯನ್ನು ಮಾಡಿಸಿ ಸೀತೆಸಹಿತ ಆ ಅಗಸ್ತ್ಯ ಋಷಿಯ ಸೇವೆ ಮಾಡುತ್ತ ಹಲವು ಕಾಲ ಇದ್ದನು. ಅದೇ ಸ್ಥಾನದಲ್ಲಿ ಮಾರೀಚನೆಂಬ ರಾಕ್ಷಸನು ಮಾಯೆಯಿಂದ ಕಾಂಚನಮೃಗವನ್ನು ತೋರಿಸಿ, ಸೀತೆಗೆ ಲೋಭ ಹುಟ್ಟಿಸಿ ರಾಮಚಂದ್ರನನ್ನು ಮೋಸಗೊಳಿಸಿ ದೂರ ಒಯ್ದುದ್ದರಿಂದ, ರಾವಣನು ಸೀತೆಯನ್ನು ಕದ್ದೊಯ್ದನು. ಬಳಿಕ ಸೀತೆಯ ವಿಯೋಗದಿಂದ ದುಃಖಿತರಾದ ರಾಮಲಕ್ಷ್ಮಣರನ್ನು ಯೋಜನಬಾಹುಕಬಂಧರೆಂಬ ದೈತ್ಯರು ಒಮ್ಮಿಂದೊಮ್ಮೆ ಬಂದು ತಡೆಯಲು, ರಾಮನು ಕಾದಿ ಅವರನ್ನು ಕೊಂದನು.

ಸ್ತ್ರೀವಿರಹದ ವ್ಯಥೆಯು ತನಗಾಗಬಾರದೆಂಬ ಬಗೆಯಿಂದ ರಾಮನು ಸೀತೆಯಂಥಾದ್ದೊಂದು ಗೊಂಬೆಯನ್ನು ಮಾಡಿ, ತನ್ನ ಆಶ್ರಮದಲ್ಲಿ ಇಟ್ಟಿದ್ದನು; ಅದು ಇನ್ನೂ ಅಲ್ಲಿಯೇ ಇದೆ. ರಾಮಚಂದ್ರನು ಕಂದಮೂಲಗಳನ್ನು ಅಗಿದಗಿದು ತೆಗೆದ ತೆಗ್ಗುಗಳು ಅಲ್ಲಲ್ಲಿಗೆ ಇನ್ನೂ ಹಾಗೆಯೇ ಇವೆ. ಈ ಪ್ರಕಾರ, ಪುರಾತನಕಾಲದ ಕುರುಹುಗಳು ಆ ಆಶ್ರಮಸ್ಥಾನದಲ್ಲಿ ಇಂದಿಗೂ ಸ್ಪಷ್ಟವಾಗಿ ಕಂಗೊಳಿಸುತ್ತವೆ. ಈ ಅಗಸ್ತ್ಯಾಶ್ರಮದ ಹತ್ತಿರವೇ ಪಂಪಾಸರೋವರವುಂಟು. ಆ ಸರೋವರದ ಪಡುವಣ ಪ್ರದೇಶದಲ್ಲಿ, ರಘುವೀರನ ಕೂರಂಬುಗಳ ಹೊಡತಕ್ಕೆ ಕಡಿವಡೆದ ಸಪ್ತತಾಳವೃಕ್ಷಗಳ ನೆರೆಯಲ್ಲಿಯೇ ಒಂದು ಬಹುಕಾಲದ ದೊಡ್ಡ ಶಾಲ್ಮಲೀವೃಕ್ಷ (ಬೂರಲಮರ) ಇದೆ. ಆ ಗಿಡದ ಬುಡಕ್ಕೆ ಒಂದು ದೊಡ್ಡ ಮುದಿ ಹೆಬ್ಬಾವು ಸುತ್ತುಹಾಕಿಕೊಂಡಿರುವದರಿಂದ, ಕಟ್ಟೆಯ ಕಟ್ಟಿದಂತೆ ಕಾಣುತ್ತಿರುವದು. ಆ ಮರದ ಟೊಂಗೆಗಳು ಬಹು ವಿಸ್ತಾರವಾಗಿ ಗಗನಮಂಡಲದಲ್ಲೆಲ್ಲ ಪಸರಿಸಿರುವದರಿಂದ ಅದು ತನ್ನ ಮಾರುಹಾಕಿ ದಿಕ್ಕುಗಳನ್ನು ಅಳೆಯುತ್ತದೆಯೋ ಏನೋ ಅನ್ನುವಂತೆ ತೋರುತ್ತಿರುವದು. ಅದರ ಟೊಂಗೆಗಳ ಮೇಲೆ ಲೆಕ್ಕವಿಲ್ಲದಷ್ಟು ಹಾವಿನ ಪರೆಗಳು ಜೋತಾಡುತ್ತಿರುವದರಿಂದ, ಅದು ಸೂಕ್ಷ್ಮವಾದ ಬಿಳಿಯ ಶಲ್ಲೆಯನ್ನು ಮೈಮೇಲೆ ಹೊತ್ತುಕೊಂಡಂತೆ ಒಪ್ಪುತ್ತಿರುವದು. ಆ ಗಿಡದ ಬುಡದಿಂದ ತುದಿತನಕ ಸಾವಿರಾರು ಬಳ್ಳಿಗಳು ಹಬ್ಬಿರುವದರಿಂದ, ಮುಪ್ಪಿನ ಕಾಲಕ್ಕೆ ಅದರ ಮೈಮೇಲಿನ ನರಗಳು ಎದ್ದಂತೆ ಕಾಣುತ್ತಿರುವವು. ಅದರ ಮುಳ್ಳುಗಳು, ಮೈತುಂಬ ಎದ್ದ ನರವುಲಿಗಳಂತೆ ತೋರುತ್ತಿರುವವು. ಅದರ ತುದಿಯ ಮೇಲಿನ ಅರಳೆಯು ನರೆಗೂದಲುಗಳಂತೆ ಒಪ್ಪುವದು.

ಆ ಮರದ ಪೊದರುಗಳಲ್ಲಿಯೂ, ಪೊದೆಗಳಲ್ಲಿಯೂ, ತುದಿಯಲ್ಲಿಯೂ ನಾಡುನಾಡುಗಳಿಂದ ಬಂದ ಸಾವಿರಾರು ಗಿಳಿಗಳು ಗೂಡು ಕಟ್ಟಿಕೊಂಡಿರುತ್ತಿದ್ದವು. ಬುಡದಿಂದ ತುದಿತನಕ ಮುಳ್ಳುಗಳಿದ್ದ ಕಾರಣ, ಆ ಮರವು ಮನುಷ್ಯರಿಗೆ ಏರಲಸಾಧ್ಯವಾದುದರಿಂದ, ಆ ಗಿಳಿಗಳಿಗೆ ಏನೂ ಹೆದರಿಕೆ ಇದ್ದಿಲ್ಲ. ಬಹಳ ಹಳೆಯದಾದುದರಿಂದ, ಆ ಮರದ ಎಲೆಗಳೆಲ್ಲ ಉದುರಿ ಹೋದರೂ, ಆ ಗಿಳಿಗಳೇ ಅದರ ದಟ್ಟವಾದ ಹಸರೆಲೆಗಳಂತೆ ಕಾಣಿಸುತ್ತಿರುವವು. ಪಕ್ಕ ಬಲಿತು ಹಾರಲಿಕ್ಕೆ ಬಾರದ ಮರಿಗಳನ್ನು ಗೂಡುಗಳೊಳಗೆ ಇಟ್ಟು, ಆ ಗಿಳಿಗಳು ಹಗಲು ಹೊರಗೆ ಹೋಗಿ, ಆಗಾಗ್ಗೆ ಆಹಾರ ತಂದು ಮರಿಗಳಿಗೆ

ಗುಟುಕುಕೊಟ್ಟು, ಇರುಳೆಲ್ಲ ತಮ್ಮ ತಮ್ಮ ಮರಿಗಳನ್ನು ಮಗ್ಗುಲೊಳಗಿಟ್ಟು ಕೊಂಡು ಮರದ ಮೇಲೆ ಸುಖದಿಂದ ಇರುತ್ತಿದ್ದವು.

ಅದೇ ಮರದ ಮೇಲೆ, ಒಂದು ಹಳೆಯ ಗೂಡಿನೊಳಗೆ, ಒಂದು ಮುದಿ-ಗಿಳಿಯು ತನ್ನ ಹೆಂಡತಿಯೊಡನೆ ಇರುತ್ತಿತ್ತು. ಅದಕ್ಕೆ ದೈವಯೋಗದಿಂದ ನಾನೊಬ್ಬನೇ ಮಗನು ಹುಟ್ಟಿದೆನು. ನಾನು ಹುಟ್ಟಿದಕೂಡಲೆ, ನನ್ನ ತಾಯಿಯು ಪ್ರಸವವೇದನೆಯಿಂದ ತೀರಿಕೊಂಡಳು. ತನ್ನ ಪ್ರಿಯ ಪತ್ನಿಯು ಮುಪ್ಪಿನ ಕಾಲದಲ್ಲಿ ಸತ್ತುದ್ದರಿಂದ ನನ್ನ ತಂದೆಗೆ ಬಹಳ ದುಃಖವಾಯಿತು; ಆದರೂ ಸ್ತ್ರೀಶೋಕವನ್ನು ತಡಕೊಂಡು ಪುತ್ರಪ್ರೀತಿಯಿಂದ ನನ್ನನ್ನು ಕಾಪಾಡಿದನು. ಮುಪ್ಪಿನಿಂದ ಆತನ ಹಲವು ಗರಿಗಳು ಉದುರಿ ಹೋಗಿದ್ದವು. ಕಾಳು ಮುಂತಾದ ಕಠಿಣ ಪದಾರ್ಥಗಳನ್ನು ಕುಕ್ಕಿಕುಕ್ಕಿ ಆವನ ಚಂಚುಪುಟವು ಮೊಂಡವಾಗಿತ್ತು. ಆವನಿಗೆ ದೂರ ಹಾರಿಹೋಗುವ ಶಕ್ತಿಯಿದ್ದಿಲ್ಲ; ಅಂಥದ ರೊಳಗೂ ನಡುನಡುಗುತ್ತ ಆ ಮರದ ಬುಡಕ್ಕೆ ಹೋಗಿ ಪಕ್ಷಿಗಳು ತಿನ್ನುವಾಗ ಅವುಗಳ ಬಾಯೊಳಗಿಂದ ಬಿದ್ದ ಹಣ್ಣುಹಂಪಲಗಳನ್ನೂ, ಹಾಲುಗಾಳು ಗಳನ್ನೂ ತಂದು, ನನಗೆ ಗುಟುಕುಕೊಟ್ಟು ಉಳಿದರೆ ತಾನು ತಿನ್ನುತ್ತಿದ್ದನು.

ಒಂದುದಿನ ಮುಂಜಾವಿನಲ್ಲಿ, ಎಂಟೂ ದಿಕ್ಕುಗಳು ಸ್ವಚ್ಛವಾಗಿಯೂ ವಿಸ್ತೀರ್ಣವಾಗಿಯೂ ತೋರಹತ್ತಿದವು; ಎಳೆಬಿಸಿಲು ಬಿದ್ದುದರಿಂದ, ಕಾನನದೊಳಗಿನ ಗಿಡಗಳ ಮೇಲಿನ ಹೂವುಗಳು ಚಂದವಾಗಿ ಕಾಣುತ್ತಿದ್ದವು; ಆ ಹೂವುಗಳ ಮೇಲೆಯೂ, ಕೊಳದೊಳಗಿನ ತಾವರೆಗಳ ಮೇಲೆಯೂ, ತುಂಬಿಗಳೆರಗಿ ಝೇಂಕಾರಸ್ವರ ಮಾಡಹತ್ತಿದವು; ನವಿಲುಗಳೆದ್ದು ಆಡಲನು-ವಾದವು; ಸಿಂಹಗಳು ಆಕಳಿಸಹತ್ತಿದವು; ಮಲಗಿದ ಮದೋನ್ಮತ್ತವಾದ ಆನೆಗಳನ್ನು ಹೆಣ್ಣಾನೆಗಳು ಎಬ್ಬಿಸಹತ್ತಿದವು; ಇರುಳು ಅರಳಿದ ಹೂವುಗಳು ಮುಂಜಾವಿನ ಮಂಜಿನ ಹನಿಗಳ ಭಾರದಿಂದ ನೆಲಕ್ಕುದುರಿದವು; ಋಷಿಗಳ ತಪೋವನದೊಳಗಿನ ಹೋಮಧೂಮವು ಮೇಲಕ್ಕೆದ್ದಿತು; ಮಂಜಿನ ಹನಿಗೂಡಿ ತಂಪಾದಂಥ, ತಾವರೆಗೊಳದ ಮೇಲೆ ಹಾದು ಕಂಪಾದಂಥ, ಮುಂಜಾವಿನ ಮಂದಮಾರುತವು ಸುಳಿಯಹತ್ತಿತು; ಪಕ್ಷಿಗಳು ಆನಂದದಿಂದ ಆಕಾಶದೊಳಗೆ ಹಾರತೊಡಗಿದವು; ಎರಳೆಯ ಹಿಂಡುಗಳು ಸ್ವೇಚ್ಛೆಯಿಂದ ತಿರುಗಾಡಹತ್ತಿದವು; ಪಂಪಾಸರೋವರದ ದಂಡೆಯ ಮೇಲಿನ ಚಕೋರ, ಚಕ್ರವಾಕ, ಮರಾಳ ಪಕ್ಷಿಗಳು ಕಿಲಿಕಿಲಿಸಹತ್ತಿದವು; ಅಷ್ಟರೊಳಗೆ ಒಂದು

ತಾಸು ಹೊತ್ತು ಏರಿತು; ನಾನು ಇರುವ ಮರದ ಮೇಲಿನ ಗಿಳಿಗಳೆಲ್ಲ, ಆಹಾರದ ಸಲುವಾಗಿ ತಮ್ಮ ತಮ್ಮ ಮನಸ್ಸಿಗೆ ಬಂದಕಡೆಗೆ ಹಾರಿಹೋದವು; ಗೂಡುಗಳೊಳಗೆ ಅವುಗಳ ಮರಿಗಳಿದ್ದರೂ, ಆ ಮರದ ಮೇಲೆಲ್ಲಿಯೂ ಶಬ್ದ-ವಾಗುತ್ತಿದ್ದಿಲ್ಲ; ಆ ಕಾರಣ ನಾನೂ ನಮ್ಮ ತಂದೆಯೂ ಗೂಡಿನೊಳಗೆ ಸ್ವಸ್ಥವಾಗಿ ಕುಳಿತುಕೊಂಡಿದ್ದೆವು; ಅಷ್ಟರೊಳಗೆ, ಒಮ್ಮಿಂದೊಮ್ಮೆಲೇ ಆ ಕಾನನದೊಳಗೆ ಬೇಟೆಯಾಡಬಂದ ಭಿಲ್ಲರ ಕೋಲಾಹಲ ಧ್ವನಿಯು ನನ್ನ ಕಿವಿಗೆ ಬಿತ್ತು.

ಅದನ್ನು ಕೇಳಿದಕೂಡಲೆ, ಯಾವತ್ತು ಕಾಡುಮೃಗಗಳು ಹಾಹಾಕಾರ ಕಾಲ್ದೆಗೆಯಲಾರಂಭಿಸಿದವು; ಆನೆಯ ಮರಿಗಳು ಅಂಜಿ ಘೀಳಿಡುತ್ತ ಓಡಿದವು; ಕಾಡಹಂದಿಗಳು ಮುಸುಗುಟ್ಟುತ್ತ ಮುಂದುವರಿದವು; ಕಾಡಕೋಣಗಳು ಕೊಂಯಿಕಿಡುತ್ತ ಓಡಿದವು; ಗವಿಯೊಳಗಿನ ಮಲಗಿದ ಸಿಂಹಗಳು ಎದ್ದು ಗರ್ಜಿಸಿದವು; ಅಂಥ ಆರ್ಭಟವನ್ನು ನಾನು ಎಂದೂ ಕೇಳಿದ್ದಿಲ್ಲ; ನನ್ನ ಕಿವಿಗಳು ಗಡಿದು ಹಾಕಿದವು; ನನ್ನ ಎದೆ ಒಡೆದು, ಮೈಯೊಳಗೆ ನಡುಗು ಹುಟ್ಟಿ, ಅಂಜಿ ತಂದೆಯ ಮಗ್ಗಲೊಳಗೆ ಹೊಕ್ಕು ಅಡಗಿಕೊಂಡೆನು.

ನಾನು ಕಿವಿಗೊಟ್ಟು ಕೇಳುವಾಗ ಆ ಬೇಟೆಗಾರರು ತಮ್ಮ ತಮ್ಮೊಳಗೆ— "ಎಲೆಲೆ ಇಲ್ಲಿ ನೋಡು! ಕಾಡಾನೆಗಳು ಮುರಿದ ಸಾಲಮಡ್ಡಿಯ (ಧೂಪದ) ಗಿಡಗಳು ಎಷ್ಟು ನಾರುತ್ತವೆ! ಇಲ್ಲಿ ನೋಡು! ಮರಿಯಾನೆ-ಗಳು ತುಳಿತುಳಿದು ಚೆಲ್ಲಿದ ತಂಗೊಳದೊಳಗಿನ ತಾವರೆಗಳ ಸುವಾಸನೆಯೆಷ್ಟು ಘಮಘಮಿಸುತ್ತದೆ! ಅತ್ತನೋಡಿರಿ! ಕಾಡಕೋಣಗಳು ಕೋಡುಗಳಿಂದ ಚಿಮ್ಮಿ ಚಿಮ್ಮಿ ಹಾರಿಸಿದ ಹುತ್ತಿನ ಕೆಂಧೂಳಿಯೇಳುತ್ತದೆ. ಇಲ್ಲಿ ನೋಡು! ಮೆಲಕಾಡಿಸುವಾಗ ಎರಳೆಗಳ ಬಾಯೊಳಗಿನ ಬುರುಗೆಷ್ಟು ಬಿದ್ದಿದೆ. ಇಲ್ಲಿ ಕಾಡ ಮಿಕಗಳು ಕೋರೆಗಳಿಂದ ಅಗಿದು ತಿಂದು ತಿಂದು ಚೆಲ್ಲಿದ ಚೀಕಿನ ಗಡ್ಡೆಗಳೂ, ಬಾಳದಬೇರುಗಳೂ ಎಷ್ಟು ಬಿದ್ದಿವೆ ನೋಡಿರಿ! ಅಲ್ಲಿ ಕಾಡೆಮ್ಮೆಗಳು ತಿಕ್ಕಿದ ರಾಯನೆಲ್ಲಿಯಗಿಡದ ತೊಗಟೆಯ ಬಾಸ ಬರುತ್ತದೆ. ಅದೇ ಅಲ್ಲಿ ಚಿಗುರೆ ಗಳು ಓಡುತ್ತವೆ; ಅತ್ತಕಡೆ ಕಾಡಹಂದಿಗಳು ಕೆಸರೊಳಗಿಂದ ಹೊರಬಿದ್ದವು; ಆಚೆಯಕಡೆ ನವಿಲುಗಳು ಇದ್ದಹಾಗೆ ತೋರುತ್ತದೆ. ಸುಮ್ಮನೆ ಯಾಕೆ ನೋಡುತ್ತೀರಿ? ಹೊರಗಿಂದ ಹೋಗಿ ಕಣಿವೆಯ ಬಾಯಿಗೆ ದಾಂಕಟ್ಟೆ

ಕೊಂಡು ನಿಲ್ಲಿರಿ; ಗುಡ್ಡದ ಓರೆಯ ಹಿಡಿದು ಆಡ್ಡಾಡಿರಿ; ಮರವೇರಿ ನೋಡಿರಿ; ಕೊರಳ ಕುಣಿಕೆಯ ಉಚ್ಚಿ ನಾಯಿಯನ್ನು ಬಿಡು; ಕವಣೆಯ ಹೊಡೆ; ಕಲ್ಲು ಒಗೆ; ಬಿಲ್ಲೇರಿಸು; ಬಾಣವಹೂಡು; ಕೋಲು ತಿವಿ; ಬಲೆಹಾಕು, ಮೊಲ ಹೊಡೆ; ಕೊಲ್ಲಿಲೆ ಕೊಲ್ಲು; ಕಡಿಯಲಿ ಕಡಿ; ಕಾಲಗ್ಯಾರೀ ಹಿಡಿದು ಎಳೆ" ಎಂದು ಒದರಾಡುವ ಬೇಟೆಗಾರರ ಅಬ್ಬರವು ಅರಣ್ಯವನ್ನೆಲ್ಲ ತುಂಬಿತು. ಎತ್ತ ನೋಡಿದರೂ ಗೊಂದಲವೇ ಮುಸುಕಿತು. ಬೇಟೆಗಾರರಿಗೆ ಅಂಜಿ ಸಿಂಹಗಳು ಗರ್ಜಿಸುತ್ತ ಹಿಂದಕ್ಕೆ ಓಡಿದವು. ನಾಯಿಗಳು ಬೆನ್ನಟ್ಟಿಬಂದು ಹಿಡಿದು, ಹಲ್ಲುಗಳಿಂದ ಮೈಯೆಲ್ಲ ಹರಿದುದರಿಂದ ಚಿಗುರೆಗಳು ಒದ್ದಾಡಿದವು. ಎಳೆಗರುಗಳು ಅಂಜಿ, ಎತ್ತ ತಪ್ಪಿಸಿಕೊಂಡು ಹೋದವೋ ಎಂದು, ಕಾಡಾಕಳುಗಳು ಅಂಬಾ ಎಂದು ಒದರುತ್ತ, ಅವುಗಳನ್ನು ಹುಡುಕಹತ್ತಿದವು. ಸಾವಿಗಂಜಿ ಸಾವಿರಾರು ಪಕ್ಷಿಗಳು ಈ ಮರದಿಂದ ಆ ಮರಕ್ಕೆ ಆ ಮರದಿಂದ ಈ ಮರಕ್ಕೆ ಹಾರಾಡುತ್ತ ಕಿಲಿಕಿಲಿಸಹತ್ತಿದವು. ಅಷ್ಟರೊಳಗೆ, ಬಿಲ್ಲಾಳುಗಳು ಹೆದೆಯನ್ನು ಕಿವಿವರೆಗೆ ಜಗ್ಗಿ, ಜಗ್ಗಿ, ಅಂಬುಗಳನ್ನು ಎಸೆಯುವಾಗ ಬಿಲ್ಲುಗಳಿಂದುಂಟಾದ ಠಣತ್ಕಾರವೂ, ಕಡುಗಲಿಗಳು ಎಡೆಬಿಡದೆ ಎದೆಮಾಡಿ ಕಡಿಯುವಾಗ ಕಾಡಕೋಣಗಳ ಕೋಡಿಗೆ ತಾಕಿದ ಖಡ್ಗಗಳ ಖಣಖಣಾಟವೂ ಬೆದರಿ ಕಂಡಕಡೆಗೆ ಓಡುವ ಗಂಡೆರಳೆಗಳ ಬೆನ್ನಹತ್ತಿದ, ಬೇಟೆಯ ನಾಯಿಗಳ ಬೊಗಳಾಟವೂ, 'ಹಿಡಿ ಹಿಡೀರಿ. ಹೊಡಿ ಹೊಡೀರಿ' ಎಂಬ ಕುಲ್ಲಭಿಲ್ಲರ ಗುಲ್ಲುಗಳೂ, ಒಬ್ಬುಳಿಗೂಡಿ ತುಂಬಿದುದರಿಂದಂತೂ, ಬಿರುಗಾಳಿ ಬಿಟ್ಟಾಗ ಕಡಲು ಭೋರ್ಗರೆಯುವಂತೆ ಕಾನನವೆಲ್ಲ ಪ್ರತಿಧ್ವನಿಗೊಂಡಿರುವದು.

ಇಷ್ಟು ಆರ್ಭಟವು ಯಾತರದೆಂದು ನಾನು ನಮ್ಮ ತಂದೆಯ ಪಕ್ಕದೊಳಗಿಂದ ಹೊರಬಿದ್ದು, ತಲೆ ಎತ್ತರಿಸಿ, ಸಪ್ಪಳ ಕೇಳಬಂದತ್ತ ಮೆಲ್ಲಗೆ ಗೂಡಿನೊಳಗಿಂದಲೇ ಹಣಕಿನೋಡಹತ್ತಿದೆನು. ಆಗ ಆ ಕಾನನದೊಳಗಿಂದ ಎದುರಿಗೆ, ಯಮನಾಳುಗಳನ್ನು ಹೋಲುವಂಥ ಬೇಡರ ದಂಡು ಬರುತ್ತಿತ್ತು. ಆ ತಂಡದ ನಡುವೆ, ದಂಡಿನ ಒಡೆಯನು ಕರ್ರಗೆ ಕಾಲನಂತೆ ಕಾಣಿಸುತ್ತಿರುವನು. ಆತನಿಗೆ ಆದೇ ಹೊಸದಾಗಿ ಹರೆಯ ಬಂದು, ಮುಖಮೀಸೆ ಒಡೆಯಹತ್ತಿದದರಿಂದಲೂ, ಅವನ ಮೈಕಟ್ಟು ಬಲುಘಟ್ಟಿ ಇದ್ದುದರಿಂದಲೂ, ಕಬ್ಬಿಣದ ಗಂಡುಗೊಂಬೆಯಂತೆ ಕಾಣಿಸುತ್ತಿರುವನು. ತಲೆಯಮೇಲಿನ

ಉಂಗುರಗೂದಲುಗಳು ಹೆಡಕಿನ ಮೇಲೆ ಜೋತಾಡುತ್ತಿರುವದರಿಂದ, ಆನೆಯ ಮದೋದಕದಿಂದ ಮಲಿನವಾದ ಸಿಂಹನ ಕುತ್ತಿಗೆಯ ಮೇಲಿನ ಕೂದಲುಗಳಂತೆ ಒಪ್ಪುತ್ತಿರುವವು. ಅವನ ಹರವಾದ ಹಣೆಯೂ, ಉದ್ದ ಮೂಗೂ ಎದ್ದು ಕಾಣಿಸುತ್ತಿರುವವು. ಅವನ ಎಡಗಿವಿಯೊಳಗೆ ಜೋತಾಡುವ ರತ್ನದ ಬಾವುಲಿಯ ಕೆಂಬೆಳಗು ಕೆನ್ನೆಯ ಮೇಲೆ ಹೊಳೆಯುತ್ತಿರುವದು. ಆದೇ ಕೊಂದ ಆನೆಯ ಮದೋದಕವನ್ನು ಮೈಗೆಲ್ಲ ಹಚ್ಚಿಕೊಂಡದರಿಂದ ಕೃಷ್ಣಾಗರುಚಂದನವನ್ನು ತೊಡಕೊಂಡವನಂತೆ ತೋರುತ್ತಿರುವನು. ಆತನ ಕೆಂಗಣ್ಣುಗಳು ರಕ್ತದಿಂದ ತುಂಬಿ ತುಳುಕುವಂತೆ, ನೋಡುವವರಿಗೆ ಭೀತಿಯನ್ನು ಬೀರುತ್ತಿರುವವು. ಮೊಣಕಾಲತನಕ ಇಳಿಬಿದ್ದ ಅವನ ನಿಡಿದೋಳುಗಳು, ಕಾಡಾನೆಯ ಸೊಂಡಿಲದಂತೆ, ದುಂಡಗೆ ಒಪ್ಪುತ್ತಿರುವವು. ಅವನು ತನ್ನ ಮುಂಡಿಯೊಳಗಿನ ತಿಂಡಿಯ ರಕ್ತವನ್ನು, ಶಸ್ತ್ರದಿಂದ ತಿವಿದು ತೆಗೆತೆಗೆದು, ವನದೇವಿಗೆ ಅರ್ಪಿಸುತ್ತಿದ್ದನು. ಅದರಿಂದ ಅವನ ಮುಂಡಿಗಳಿಗೆ ಗುಂಡಗುಂಡನ್ನ ಕಲೆಗಳು ಬಿದ್ದಿದ್ದವು; ಅವನ ಹರವಾದ ಎದೆಯ ಮೇಲಿನ ಬೆವರಹನಿಗಳು, ಕಾಡಮಿಕಗಳನ್ನು ಒತ್ತರದಿಂದ ಕೊಲ್ಲುವಾಗ ಹತ್ತಿದ ನೆತ್ತರ ಹನಿಗಳೊಡನೆ ಬೆರೆತು, ಗುಂಜೆಗಳನ್ನು ಕೂಡಿಸಿ ಪೋಣಿಸಿ ಮಾಡಿದ ಮುತ್ತಿನ ಮಾಲೆಯಂತೆ ಒಪ್ಪುತ್ತಿರುವವು. ಗರಡಿಸಾಧಕಮಾಡಿದವನಾದದರಿಂದ ಹೊಟ್ಟೆಯು ತೆಳ್ಳಗೆ, ತೊಡೆಗಳು ಗಡುತರವಾಗಿ ಬಹು ಚಂದಕಾಣಿಸುತ್ತಿರುವನು. ಅವನು ಸಿಟ್ಟಿನವನಿದ್ದುದರಿಂದ ಹಣೆಯ ಮೇಲಿನ ನರಗಳು ಉಬ್ಬಿ, ಹುಬ್ಬುಗಂಟುಹಾಕಿ ಭಯಂಕರನಾಗಿ ತೋರುತ್ತಿರುವನು. ಅವನ ಸುತ್ತುಮುತ್ತು ಬೇಟೆಯ ನಾಯಿಗಳು ತೇಕುತ್ತ, ನಾಲಿಗೆ ತೆರಕೊಂಡು ಬೆನ್ನಹತ್ತಿ ಬರುತ್ತಿದ್ದವು.

ಆ ಬೇಡರೊಡೆಯನ ಬೆಂಗೊಂಡು ಬರುವ ನೂರಾರು ಮಂದಿ ಬೇಟೆಗಾರರೊಳಗೆ, ಹಲವರು ಚವರೀಮೃಗಗಳ ಬಾಲಗಳನ್ನೂ, ಆನೆಯ ಕೋರೆಗಳನ್ನೂ, ಹೊರೆಕಟ್ಟಿ ತಲೆಯಮೇಲೆ ಹೊತ್ತುಕೊಂಡು, ಕೆಲವರು ಜೇನಹುಟ್ಟುಗಳನ್ನು ಎಲೆಯ ದೊನ್ನೆಗಳೊಳಗೆ ಹಾಕಿಕೊಂಡು, ಹಲವರು ಪಿಶಾಚಿಗಳಂತೆ ಮಾಂಸವನ್ನು ತಕ್ಕೊಂಡು, ಹಲವರು ಹುಲಿದೊಗಲು, ಹುಲಿಯುಗುರು, ಸಿಂಹನಚರ್ಮ, ನವಿಲುಗರಿ, ಸಾರಂಗದ ಕೋಡು ಇವುಗಳನ್ನು ತಕ್ಕೊಂಡು ಬರುತ್ತಿದ್ದರು. ಆ ಬೇಡರು ಮೈಮೇಲೆ ಕರಿಯಬಟ್ಟೆಗಳನ್ನು ಹೊತ್ತುಕೊಂಡು,

ತಲೆಗೆ ನವಿಲುಗರಿಗಳನ್ನು ಸುತ್ತಿಕೊಂಡಿದ್ದರು. ಇಂಥ ಬೇಡರನ್ನೊಳಗೊಂಡು ಬರುವವನ ಹೆಸರು ಮಾತಂಗನೆಂದು ಹಿಂದಣಿಂದ ನನಗೆ ತಿಳಿಯಿತು.

ಆ ಬೇಡರನ್ನು ನೋಡಿ ನನ್ನ ಮನಸ್ಸಿಗೆ ಬಹಳ ಅಸಹ್ಯವಾಯಿತು. ಅವರ ಬಾಳುವೆಯ ಬಗೆ ಎಂಥ ಭಯಂಕರವು ನೋಡಿರಿ! ಅವರ ಹೊಲಸು ನಡತೆ-ಗಳನ್ನು ಎಷ್ಟೆಂದು ಹೇಳಲಿ! ನರಮಾಂಸವನ್ನು ದೇವಿಗೆ ಬಲಿಕೊಡುವದೇ ಅವರ ಧರ್ಮವಾಗಿದೆ. ಹಳಿಯತಕ್ಕ ಹೆಂಡಕಂಡಗಳೇ ಅವರ ಆಹಾರವು. ಬೇಟೆಯಾಡುವದೇ ಅವರ ಕುಲದ ಉದ್ಯೋಗವು. ನರಿಗಳ ಕೂಗುಗಳೇ ಅವರಿಗೆ ಶಾಸ್ತ್ರದ ವಚನಗಳು. ಪಶುಪಕ್ಷಿಗಳ ಜಾತಿಯ ಗುರುತು ಹಿಡಿ-ಯುವದೇ ವಿದ್ಯೆಯಾಗಿದೆ. ಅವರಿಗೆ ನಾಯಿಗಳ ಗೆಳೆತನವೇ ಗೆಳೆತನ. ರಣಗುಟ್ಟುವ ಕಾನನವೇ ಅವರ ಬಿಡಾರದೆಡೆ. ಬಿಲ್ಲುಬಾಣಗಳೇ ಅವರ ಗಳಿಕೆಯ ಇಡುಗಂಟು. ಮರುಳ ಮೃಗಗಳನ್ನು ಮೋಸಗೊಳಿಸುವ ಸಿಳ್ಳು-ಕೊಳಲುಗಳೇ ಅವರಿಗೆ ಇಂಪಾದ ಗಾಯನವು. ಅವರಿಗೆ ಹುಲಿಕರಡಿಗಳ ನೆರೆಯೇ ನೆರೆ. ಕಾಡಮಿಕಗಳ ರಕ್ತದಿಂದ ದೇವಿಗೆ ಅಭಿಷೇಕ ಮಾಡು ವದೇ ಅವರಿಗೆ ಭಕ್ತಿಯ ಮಾರ್ಗವಾಗಿದೆ. ಕಳವು, ಕೊಲೆ ಮುಂತಾದ ಕೀಳು ಕೆಲಸಗಳೇ ಅವರ ಕರ್ತವ್ಯಕರ್ಮಗಳಾಗಿವೆ.

ಈ ಮೇರೆಗೆ ಮನದೊಳಗೆ ವಿಚಾರಮಾಡುವಷ್ಟರೊಳಗೆ, ಆ ಮಾತಂಗನು, ಬೇಟೆಯ ದಣುವಾರಿಸಿಕೊಳ್ಳಬೇಕೆಂದು, ನಾನು ಇದ್ದ ಶಾಲ್ಮಲೀವೃಕ್ಷದ ನೆರಳಿಗೆ ಬಂದು, ಹೆಗಲಮೇಲಿನ ಬಿಲ್ಲನ್ನೂ, ಬೆನ್ನಿಗೆ ಕಟ್ಟಿದ ಬತ್ತಳಿಕೆಯನ್ನೂ, ನೆಲದಮೇಲಿಟ್ಟು, ತನ್ನ ಆಳು ಹಾಕಿದ್ದ ಎಲೆಯ ಗದ್ದುಗೆಯ ಮೇಲೆ ಕುಳಿತು ಕೊಂಡನು. ಅಷ್ಟರೊಳಗೆ, ಒಬ್ಬ ಬೇಡನು ಓಡುತ್ತ ಪಂಪಾಸರೋವರಕ್ಕೆ ಹೋಗಿ, ತಾವರೆಯೆಲೆಯ ದೊನ್ನಿಯೊಳಗೆ ತಣ್ಣನ್ನ ನೀರು ತುಂಬಿಕೊಂಡು ಬಂದು ಮುಂದಿಟ್ಟನು. ಮಾತಂಗನು ಆ ನೀರು ಕುಡಿದು, ಕ್ಷಣಹೊತ್ತು ದಣುವಾರಿಸಿಕೊಂಡು ಮುಂದಕ್ಕೆ ಸಾಗಿದನು. ಉಳಿದ ಬೇಡರು ನೀರು ಕುಡಿದು ಆತನ ಬೆನ್ನುಹತ್ತಿದರು. ಅವರೊಳಗಿನವನೊಬ್ಬ ಮುದಿಬೇಡನು, ಏನೂ ಬೇಟೆ ದೊರಕದ್ದರಿಂದ ಗಿಳಿಗಳನ್ನಾದರೂ ತಕ್ಕೊಂಡು ಹೋಗಬೇಕೆಂದು, ಅದೇ ಮರದ ಕೆಳಗೆ ಹಿಂದುಳಿದನು.

ಆ ದಂಡು ಮರೆಯಾದ ಕೂಡಲೆ, ಮರವನ್ನು ಎತ್ತ ಕಡೆಯಿಂದ ಹತ್ತ-ಬೇಕೆಂಬ ಹೆಂಚಿಕೆಯಿಂದ, ಬುಡದಿಂದ ತುದಿತನಕ ಬಹಳಹೊತ್ತು ಕಿಡಿಗಣ್ಣು

ಗಳಿಂದ ದಿಟ್ಟಿಸಿ ನೋಡುತ್ತ ನಿಂತುಕೊಂಡನು. ಆಗ, ಯಾವತ್ತೂ ಗಿಳಿಮರಿಗಳ ಜೀವವು ನೆತ್ತಿಯಿಂದಲೇ ಹೋಯಿತು. ಜೀಯಾ, ಕ್ರೂರಕರ್ಮಗಳನ್ನು ಮಾಡುವವನಿಗೆ ಯಾವದೂ ಅಸಾಧ್ಯವಲ್ಲವು. ನೋಡಿರಿ; ಆ ಮರವು ಎಷ್ಟೋ ತಾಳೆಯುಮರದುದ್ದವಿದ್ದರೂ, ಅದರ ಟೊಂಗೆಗಳು ಮುಗಿಲಿಗೆ ಮುಟ್ಟಿದ್ದರೂ, ಬುಡದಿಂದ ತುದಿತನಕ ಮುಳ್ಳುಗಳಿದ್ದರೂ, ಆ ಮುದಿಬೇಡನು ತೊಂದರೆಗೊಳ್ಳದೆ, ಸುಲಭವಾಗಿ ಅದನ್ನು ಏರಿದನು. ಕೆಲವು ಮರಿಗಳು ಪುಚ್ಛಬಾರದೆ, ಗೋಣುನಿಲ್ಲದೆ, ಹಾರುವಶಕ್ತಿಯಿಲ್ಲದೆ, ಮೈಮೇಲಿನ ಕೆಂಬಣ್ಣವು ಇನ್ನೂ ಹಾಗೇ ಇದ್ದುದರಿಂದ, ಆ ಬೂರಲಮರದ ಹೂವುಗಳಂತೆ ತೋರುತ್ತಿರುವವು; ಕೆಲವು ಪುಚ್ಛಬಲಿತ ಮರಿಗಳು ಅದರ ಕಾಯಿಗಳಂತೆ ಕಾಣುತ್ತಿರುವವು; ಇಂಥ ಮರಿಗಳನ್ನು, ಕೈ ಹಾಕಿ ಗೂಡುಗಳೊಳಗಿಂದ ಹಿರಿದು, ತೆಗೆತೆಗೆದು ಕೊಂದು, ನೆಲದ ಮೇಲೆ ಚೆಲ್ಲಿದನು. ಆ ರಕ್ಕಸನಂಥ ಬೇಡನು ಬಂದದ್ದನ್ನು ಕಂಡು ನಮ್ಮ ತಂದೆಯು, ಸಾಯುವ ಹೊತ್ತು ಬಂತೆಂದು ಹೌಹಾರಿ, ಇನ್ನೇನು ಮಾಡಲೆಂದು ಕಣ್ಣು ತುಂಬ ನೀರು ತಂದು, ಗದಗದನೆ ನಡುಗಿದನು; ಕಣ್ಣಿಗೆ ಕತ್ತಲೆಗವಿದು, ಕುತ್ತಿಗೆ ನರವುಬ್ಬಿ, ಬಾಯಿಂದ ಮಾತುಗಳೇ ಬರಲೊಲ್ಲವು; ನನ್ನ ನೆನಪಾದುದರಿಂದಂತೂ ಅವನ ದುಃಖಕ್ಕೆ ಅಳವಿಲ್ಲದ ಹಾಗಾಯಿತು. ನನ್ನನ್ನು ತನ್ನ ಎದೆಗೆ ಅವಚಿಕೊಂಡು, ಇನ್ನು ಯತ್ನವಿಾರಿತೆಂದು ಪಕ್ಕದೊಳಗಿಟ್ಟುಕೊಂಡು, ಆಶೆದೊರೆದು ಸುಮ್ಮನೆ ಕುಳಿತುಕೊಂಡನು. ಅಷ್ಟರೊಳಗೆ ಆ ಕಿರಾತನು ನಮ್ಮ ಗೂಡಿನ ಹತ್ತಿರ ಬಂದು, ಕರಿಯಹಾವಿನ ಹೆಡೆಯನ್ನು ಹೋಲುವಂಥ, ಕಾಡಹಂದಿಯ ನೆಣದಿಂದ ಹೊಲಸು ನಾರುವಂಥ, ಬಿಲ್ಲು ಹಿಡಿದು ದಡ್ಡು ಬಿದ್ದಂಥ, ತನ್ನ ಎಡಗೈಯನ್ನು ನಮ್ಮ ಗೂಡಿನೊಳಗೆ ಹಾಕಿದನು. ಆಗ ನಮ್ಮ ತಂದೆಯು ಸಂಕಟದಿಂದ ಅವನ ಕೈಕಚ್ಚಿ ಫಡಫಡನೆ ಪಕ್ಕ ಜಾಡಿಸಿ, ಒಳಹೊಕ್ಕು ಒದರಿದರೂ, ಆ ಚಾಂಡಾಲನು ಆ ಮುದಿ ಗಿಳಿಯನ್ನು ಗೂಡಿನೊಳಗಿಂದ ಹೊರಗೆ ಹಿರಿದು, ಗೋಣು ಮುರಿದು, ನೆಲಕ್ಕೆ ಒಗೆದನು. ತಂದೆಯ ಪಕ್ಕದೊಳಗೆ ಅಡಗಿದುದರಿಂದಲೂ, ಇನ್ನೂ ನಾಲ್ಕೊಪ್ಪತ್ತು ನಾನು ಜೀವದಿಂದಿರುವದಿದ್ದುದರಿಂದಲೂ, ಆ ಪಾಪಾತ್ಮನು ನನ್ನನ್ನು ನೋಡಲಿಲ್ಲ; ನಮ್ಮ ತಂದೆಯನ್ನು ಚೆಲ್ಲಿದಾಗ ಗಾಳಿ ಬಿಟ್ಟುದರಿಂದ, ತರಗೆಲೆಯ ರಾಶಿಯ ಮೇಲೆ ಹೋಗಿ ಬಿದ್ದ ಕಾರಣ ನನ್ನ ಮೈಗೆ ಪೆಟ್ಟು ಹತ್ತಲಿಲ್ಲ.

ಆ ಬೇಡನು ಮರದಮೇಲಿಂದ ಕೆಳಗಿಳಿದು ಬರುವಷ್ಟರೊಳಗೇ ನಾನು ಅತ್ತಿತ್ತ ಸರಿದಾಡಿ ಜೀವದಾಶೆಗಾಗಿ ಆ ತರಗೆಲೆಗಳೊಳಗೆ ಹೊಕ್ಕೆನು. ನನ್ನ ಪಕ್ಕದ ಬಣ್ಣವೂ ಆ ಎಲೆಗಳ ಬಣ್ಣವೂ ಒಂದೇ ಇದ್ದುದರಿಂದ ನಾನು ಅವನಿಗೆ ಕಾಣಿಸಲಿಲ್ಲ. ತಂದೆ ಸತ್ತದರಿಂದ ನಾನೂ ಅಲ್ಲಿಯೇ ಸಾಯ-ತಕ್ಕದ್ದು; ಅಂಥದರೊಳಗೆ ನಾನು ಮನಸ್ಸು ಕಲ್ಲುಮಾಡಿಕೊಂಡು, ಪಿತೃಭಕ್ತಿಯನ್ನು ಅಲ್ಲಗಳೆದು, ತಂದೆಯ ಹೆಣವನ್ನು ಅಲ್ಲಿಯೇ ಬಿಟ್ಟು ಜೀವ ಉಳಿಸಿಕೊಳ್ಳಬೇಕೆಂಬ ಆಶೆಯಿಂದ ಒದ್ದಾಡುತ್ತ ಉರುಳಾಡುತ್ತ, ಯಮನ ಬಾಯೊಳಗಿಂದ ತಪ್ಪಿಸಿಕೊಂಡು, ಎರಡನೆಯ ತಂದೆಯ ತೊಡೆಯ ಮೇಲೆ ಹೋಗಿ ಕುಳಿತುಕೊಳ್ಳುವಂತೆ ನೆರೆಯಲ್ಲಿರುವ ಒಂದು ತಮಾಲವೃಕ್ಷದ ಬುಡದಲ್ಲಿ ಹೋಗಿ ಕುಳಿತುಕೊಂಡೆನು. 'ಸತ್ತವರ ಮಕ್ಕಳು ಇದ್ದವರ ಕೈಯೊಳಗೆ' ಎಂಬ ಗಾದೆಯಂತೆ, ಆ ಮರವು ನನಗೆ ಆಶ್ರಯ ಕೊಟ್ಟಿತು. ಇತ್ತ ಆ ಬೇಡನು ಮರದ ಮೇಲಿಂದ ಕೆಳಗಿಳಿದು, ನೆಲದ ಮೇಲೆ ಅತ್ತಿತ್ತ ಬಿದ್ದ ಗಿಳಿಯ ಮರಿಗಳನ್ನೆಲ್ಲ ಕೂಡಹಾಕಿ, ಎಲೆಗಳೊಳಗೆ ಸುತ್ತಿ, ಬಳ್ಳಿಯಿಂದ ಬಿಗಿಬಿಗಿದು ಕಟ್ಟಿ, ತಲೆಯ ಮೇಲೆ ಇಟ್ಟುಕೊಂಡು, ಮಾತಂಗನು ಹೋದ ಹಾದಿಯ ಹಿಡಿದು ಓಡುತ್ತೋಡುತ್ತ ಹೋದನು. ಅವನು ಅತ್ತ ಹೋದಬಳಿಕ ನನಗೆ ತುಸು ಜೀವದ ಆಶೆ ಹುಟ್ಟಿತು. ಆದರೂ ತಂದೆ ಸತ್ತ ದುಃಖದಿಂದಲೂ, ಮರದ ಮೇಲಿಂದ ಕೆಳಗೆ ಬಿದ್ದುದರಿಂದಲೂ ಬಳಲಿಕೆ ಬಂದು ನನ್ನ ಮೈಯೊಳಗೆ ನಡುಗು ಹುಟ್ಟಿತು. ಆ ಕ್ರೂರನು ದೂರ ಹೋದನೋ ಇಲ್ಲವೋ ಎಂದು, ಅಂಜಂಜುತ್ತ ತಲೆ ಎತ್ತಿ ನಾಲ್ಕೂ ಕಡೆಗೂ ನೋಡಿದೆನು. ಹುಲ್ಲುಕಡ್ಡಿ ಅಲ್ಲಾಡಿದರೆ ಸಾಕು, ಆ ದುರುಳನೇ ಮರಳಿ ಬಂದನೋ ಏನೋ ಎಂದು ಸಂಶಯಗೊಂಡು ಹೆದರುವೆನು. ಅಂಥದರೊಳಗೆ ಗಂಟಲಾರಿ ನೀರಡಿಕೆಯಾಯಿತು. ಇನ್ನು ನೀರು ಎಲ್ಲಿದ್ದಾವು, ಎಂದು ಹುಡುಕುವ ಹವಣಿಕೆಯಿಂದ, ಆ ತಮಾಲವೃಕ್ಷದ ಬುಡದಿಂದ ಮೆಲ್ಲಗೆ ಹೊರಟೆನು. ಆಗ ನನ್ನ ಪಕ್ಕ ಬಲಿತಿದ್ದಿಲ್ಲ, ಗೋಣು ನಿಲ್ಲುತ್ತಿದ್ದಿಲ್ಲ; ನಡೆಯಲಿಕ್ಕೆ ಕಾಲೊಳಗೆ ಕಸುವು ಇದ್ದಿಲ್ಲ. ಆದುದರಿಂದ ಆಗಾಗ್ಗೆ ನನ್ನ ಮೋರೆಯು ನೆಲಕ್ಕೆ ಬಡಿಯುವದು; ಅಡಿಗಡಿಗೆ ಹೊಳಮೈಯಲ್ಲಿ ಬೀಳು ವೆನು; ಹೊರಳಾಡುತ್ತ ಹೋಗುವದರಿಂದ ಮೈಯೆಲ್ಲಾ ಮಣ್ಣಾಯಿತು; ಹೆಜ್ಜೆಹೆಜ್ಜೆಗೆ ತೇಕುಹತ್ತಿ ವಕವಕ ಬಾಯಿ ಬಿಡಹತ್ತಿದೆನು. ಎಷ್ಟು ಕಷ್ಟ

ವಾದರೂ ಬದುಕಬೇಕೆಂಬ ಆಶೆ ಬಿಡುವದಿಲ್ಲ ! ಸ್ವಾಮಿ, ಜೀವಕ್ಕಿಂತ ಪ್ರಿಯಕರವಾದದ್ದು ಜಗದೊಳಗೆ ಯಾವದೂ ಇಲ್ಲ! ನೋಡಿರಿ! ಅಂಥಾ ನನ್ನ ದಯಾಳು ತಂದೆ ತೀರಿದನೆಂಬ ಹಂಬಲವಿಲ್ಲದೆ, ಆ ಹೆಣವನ್ನು ಅಲ್ಲಿಯೇ ಬಿಟ್ಟು ನನ್ನ ಜೀವ ಉಳಿಸಿಕೊಳ್ಳುವದನ್ನೇ ನಾನು ನೋಡಿದೆನು. ಆದರಿಂದ ನನ್ನಂಥ ನಿರ್ದಯನೂ, ನಿಷ್ಠುರನೂ, ಕೃತಘ್ನನೂ, ತಂದೆಗೆ ಮರುಗದವನೂ ಲೋಕದೊಳಗುಂಟೇ! ಉಪಕಾರ ಮಾಡಿದ ತಂದೆಯನ್ನು ಬಯಸದೆ ಬದುಕುವವನ ಬಾಳ್ವೆ ಯಾತರ ಬಾಳ್ವೆ! ನೋಡಿರಿ, ನಾನು ಎಂಥ ಕಲ್ಲು ಮನಸ್ಸಿನವನು. ಮುಪ್ಪಿನ ಕಾಲದಲ್ಲಿ ಹೆಂಡತಿ ಸತ್ತ ದುಃಖವನ್ನು ತಡ ಕೊಂಡು, ಹುಟ್ಟಿದಂದಿನಿಂದ ನನ್ನನ್ನು ಜೋಪಾನ ಮಾಡಿ, ಕಡೆಗೆ ನನ್ನನ್ನು ಮಗ್ಗುಲೊಳಗೆ ಇಟ್ಟುಕೊಂಡು ಮರಣ ಹೊಂದಿದ ತಂದೆಯನ್ನು ನಾನು ಆಗಲೇ ಮರೆತೆನು. ಇದರಿಂದ ಜೀವವು ಎಷ್ಟು ಪ್ರಿಯಕರವು ನೋಡಿರಿ! ನನ್ನ ಸಲುವಾಗಿ ಎಷ್ಟೋ ಕಷ್ಟಗಳನ್ನು ಅನುಭೋಗಿಸಿ, ತನ್ನ ಜೀವಕ್ಕಿಂತ ನನ್ನನ್ನು ಹೆಚ್ಚು ನೋಡಿ ಸಲಹಿದ ತಂದೆಯನ್ನು ಮರೆತು, ನನ್ನ ಜೀವವನ್ನೇ ನೋಡಿ-ಕೊಂಡೆನು. ಅಂಥ ದುಃಖಾವಸ್ಥೆಯಲ್ಲಿ ಸಹ ನನಗೆ ನೀರಡಿಕೆಯಾಯಿತು. ನಿರ್ದಯತನದ ಮೂಲಕವಾಗಿಯೇ ಆಗ ನನಗೆ ಅಂಥ ನೀರಡಿಕೆಯಾಯಿತೋ ಏನೋ! ಕಲಹಂಸಗಳ ಕಲಕಲ ಧ್ವನಿಯು ದೂರದಿಂದ ಕೇಳಬಂದುದ ರಿಂದಲೂ, ಅರಳಿದ ತಾವರೆಗಳೊಳಗಿನ ತನಿಗಂಪು ನಾಲ್ಕು ದಿಕ್ಕಿಗೂ ಹರಿದು ಹೋಗಿ ತುಸು ತುಸು ಬಂದುದರಿಂದಲೂ ಇನ್ನೂ ಸರೋವರವು ಎಷ್ಟು ದೂರವಿದೆಯೋ ಏನೋ ಎಂದು ನನ್ನ ಹರಣ ಹಾರಿತು. ಬಿಸಿಲೇರಿ ನೆಲವು ಕಾದುದರಿಂದ ಮುಂದಕ್ಕೆ ಹೆಜ್ಜೆ ಇಡುವದಾಗಲೊಲ್ಲದು. ಈ ಮೇರೆಗೆ ಮರಣೋನ್ಮುಖನಾಗಿ ಬಳಲುತ್ತ ಬಿದ್ದುಕೊಂಡಾಗ ಹಾರೀತನೆಂಬ ಋಷಿಯು ಹಲವು ಮುನಿಕುಮಾರರನ್ನೊಡಗೊಂಡು ಅದೇ ಮಾರ್ಗದಿಂದ ಪಂಪಾ ಸರೋವರಕ್ಕೆ ಸ್ನಾನಕ್ಕೆ ಬಂದನು. ಸಾಧುಪುರುಷರ ಹೃದಯವು ಅತಿ ಕೋಮಲವೆಂಬ ಮಾತು ಸುಳ್ಳಲ್ಲ; ಅವರ ಅಂತಃಕರಣವು ಬೇಗನೆ ಕರಗು-ತ್ತದೆ. ನನ್ನನ್ನು ನೋಡಿ ಆ ಹಾರೀತಋಷಿಯು— "ಅದು ನೋಡು ಆ ಮರದ ಮೇಲಿಂದಲೋ, ಗಿಡಗನ ಬಾಯೊಳಗಿಂದಲೋ, ಅಲ್ಲಿ ಒಂದು ಗಿಳಿಯ ಮರಿಯು ಬಿದ್ದಿದೆ; ಅದಕ್ಕೆ ಇನ್ನೂ ಪುಚ್ಚ ಬಂದಿಲ್ಲ. ಓಡು ಓಡು, ಬೇಗನೆ ಅದನ್ನು ತಕ್ಕೊಂಡು ಬಾ" ಎಂದು ತನ್ನ ಸಂಗಡ ಬರುವ ಒಬ್ಬ ಋಷಿ-

ಕುಮಾರನಿಗೆ ಹೇಳಿ ತಾನು ಮುಂದೆ ಹೋಗಿ ಸರೋವರದ ದಂಡೆಯಮೇಲೆ ಒತ್ತಟ್ಟಿಗೆ ದಂಡಕಮಂಡಲುಗಳನ್ನು ಇಟ್ಟು, ಆತನ ಕೈಯೊಳಗಿಂದ ನನ್ನನ್ನು ತಕ್ಕೊಂಡು ನನ್ನ ಬಾಯೊಳಗೆ ತಾನೇ ತನ್ನ ತುದಿ ಬೆರಳಿನಿಂದ ನೀರ ಹನಿಯ ಬಿಟ್ಟು ನನಗೆ ಚೇತನ ಬರುವಂತೆ ಮಾಡಿ, ತಾವರೆ ಬಳ್ಳಿಯ ನೆರಳೊಳಗೆ ನನ್ನನ್ನು ಇಟ್ಟನು. ಬಳಿಕ ಸ್ನಾನಸಂಧ್ಯಾದಿ ಕರ್ಮಗಳನ್ನು ತೀರಿಸಿಕೊಂಡು, ಕಮಲಪುಷ್ಪಗಳಿಂದ ಸುಗಂಧಮಯವಾದ ಸರೋವರದೊಳಗಿನ ಸ್ವಚ್ಛ ನೀರನ್ನು ಕಮಂಡಲುವಿನೊಳಗೆ ತುಂಬಿಕೊಂಡು ನನ್ನನ್ನು ತಕ್ಕೊಂಡು ಹೊರಟನು. ಮುಂದೆ ಬರಬರುತ್ತ ಹೂವಿನ ಬಳ್ಳಿಗಳಿಂದಲೂ ಹಣ್ಣು ಗಳಿಂದೊರಗುವ ಗಿಡಗಳಿಂದಲೂ ರಮಣೀಯವಾದದ್ದೊಂದು ತಪೋವನ ವನ್ನು ಕಂಡೆನು. ಕೇದಗಿಯ ಹೊಡೆಗಳೊಳಗಿನ ಹುಡಿಯುದುರಿ ಆ ಆಶ್ರಮದ ನೆಲವೆಲ್ಲ ಅರಿಷಣ ಬಣ್ಣವಾಗಿತ್ತು. ಎತ್ತ ನೋಡಿದರೂ ನೆಲದ ಮೇಲೆಲ್ಲ ಹೂವುಗಳೇ ಹಾಸಿದ್ದವು; ಆ ತಪೋವನದೊಳಗಿನ ಋಷಿಗಳ ಆಶ್ರಮದ ಅಂಗಳದೊಳಗೆ ಕೆಲಕೆಲವೆಡೆಯಲ್ಲಿ ನೆಲ್ಲಿಯಕಾಯಿ, ಬೋರೆಯ ಹಣ್ಣು, ಬಾಳೆಯಹಣ್ಣು, ಲವಂಗ, ಅಂಬಸೋಲು ಮುಂತಾದವುಗಳ ರಾಶಿ ಗಳು ಶೋಭಿಸುತ್ತಿರುವವು. ಕೆಲವೆಡೆಗಳಲ್ಲಿ ಸಾವೆ, ರಾಜಗಿರಿ ಕಾಳುಗಳನ್ನು ಒಣಗಹಾಕಿದ್ದರು. ಕೆಲವೆಡೆಯಲ್ಲಿ ಮುನಿವಟುಗಳು ಅಧ್ಯಯನ ಮಾಡುತ್ತ ಕುಳಿತಿದ್ದರು. ಕೆಲವೆಡೆಯಲ್ಲಿ ಶುಕಸಾರಿಕೆಗಳು, ಋಷಿಗಳು ಉಚ್ಚರಿಸಿದ ಶಬ್ದಗಳನ್ನು ಕೇಳಿ ಕೇಳಿ, ಅವುಗಳನ್ನೇ ಮರಳಿ ಮರಳಿ ನುಡಿಯುತ್ತಿರುವವು. ಅಂಗಳದೊಳಗೆ ಆಡುವ ಮುನಿಗಳ ಮಕ್ಕಳ ಮೈಯನ್ನು ಎರಳೆಗಳು ತಮ್ಮ ಕೋಮಲವಾದ ನಾಲಿಗೆಯಿಂದ ನೆಕ್ಕುತ್ತಿದ್ದವು. ಅಗ್ನಿಯೊಳಗೆ ಹಾಕಿದ ಹೋಮದ್ರವ್ಯಗಳ ಸುವಾಸನೆಯು ಸುತ್ತಲೂ ಹರಡುತ್ತಿರುವದು. ಆ ಆಶ್ರಮದೊಳಗಿನ ಎಷ್ಟೋ ತಪಸ್ವಿಗಳು ಹಲವುತರದ ಗ್ರಂಥಗಳನ್ನು ಓದುತ್ತ ಕುಳಿತಿದ್ದರು. ಹಲವರು ಧರ್ಮಶಾಸ್ತ್ರಗಳನ್ನು ಪರಿಶೋಧಿಸುತ್ತಿದ್ದರು. ಹಲವರು ಪರ್ಣಶಾಲೆಗಳನ್ನು ಕಟ್ಟುತ್ತಿರುವರು. ಕೆಲವರು ಕೃಷ್ಣಾಜಿನ ವನ್ನು ಹದಗೊಳಿಸಿ ಮಿದುವು ಮಾಡುತ್ತಿರುವರು. ಕೆಲವರು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಯೋಗಾಭ್ಯಾಸ ಸಾಧನೆಗಳಲ್ಲಿ ತತ್ಪರರಾಗಿರುವರು. ಸುಳ್ಳು ಸಿಟ್ಟುಗಳೆಂಬವು ಆ ತಪಸ್ವಿಗಳಿಗೆ ಗೊತ್ತು ಇದ್ದಿಲ್ಲ. ಆ ತಪೋವನದೊಳಗೆ

ಹೋಗುವದಕ್ಕೆ ಕಾಮನಿಗೆ ಎಡೆಯಾಗುತ್ತಿದ್ದಿಲ್ಲ. ಶಾಂತಸ್ವಭಾವದಿಂದಲೂ, ತಪದ ತೇಜದಿಂದಲೂ, ಒಪ್ಪುವ ಯತೀಶ್ವರರನ್ನು ನೋಡಿ ನಾನು ಧನ್ಯನಾದೆನು.

ಆ ತಪೋವನದ ನಡುವೆ ಒಂದು ಅಶೋಕವೃಕ್ಷವಿದೆ. ಆ ವೃಕ್ಷದ ಎಲೆಗಳು ಆಲತಿಗೆಯ ರಸದೊಳಗೆ ಎದ್ದಿ ತೆಗೆದಂತೆ ಕೆಂಪಗೆ ಶೋಭಿಸುತ್ತಿರುವವು. ಆ ವೃಕ್ಷದ ಟೊಂಗೆಗಳಿಗೆ ಋಷಿಗಳು ತಮ್ಮ ಕೃಷ್ಣಾಜಿನಗಳನ್ನೂ ನೀರು ತುಂಬಿದ ಕಮಂಡಲುಗಳನ್ನೂ ತೂಗಹಾಕಿದ್ದರು. ಆದರ ಕಟ್ಟೆಯೊಳಗೆ ನಿಂತ ನೀರನ್ನು ಚಿಗರೆಯ ಮರಿಗಳು ಸುತ್ತುಮುತ್ತು ನಿಂತುಕೊಂಡು ಕುಡಿಯುತ್ತಿರುವವು. ಆ ಗಿಡದ ಬುಡಭಾಗದ ನೆಲವನ್ನು ಗೋಮಯದಿಂದ ಸಾರಿಸಿದ್ದರು. ಆ ಅಶೋಕವೃಕ್ಷದ ನೆಳಲೊಳಗೆ ಚರ್ಮಾಸನದ ಮೇಲೆ ವಯೋವೃದ್ಧನಾದ ಜಾಬಾಲಿ ಮಹರ್ಷೀಶ್ವರನು ಬಲಗೈಯೊಳಗೆ ರುದ್ರಾಕ್ಷ ಜಪಮಾಲೆ ಹಿಡುಕೊಂಡು ಕುಳಿತಿದ್ದನು. ಆತನ ಸುತ್ತು ಮುತ್ತು ಉಗ್ರ ತಪಶ್ಚರ್ಯಮಾಡಿದ ತಪಸ್ವಿಗಳು ಕುಳಿತುಕೊಂಡಿದ್ದರು. ಮುಪ್ಪಿನಿಂದ ಆತನ ಮೈಬಣ್ಣವು ಬೆಳ್ಳಗಾಗಿತ್ತು. ಆತನ ಮಸ್ತಕದ ಮೇಲಿನ ಬಿಳಿಯ ಜಡೆಗಳು ಮೈಮೇಲೆಯೂ ನೆಲದ ಮೇಲೆಯೂ ಬಿದ್ದಿರುವವು. ಹುಬ್ಬುಗಳು ಕಣ್ಣುಗಳ ಮೇಲೆ ಜೋತಾಡುತ್ತಿರುವವು. ಎಡೆಬಿಡದೆ ಶಿವಮಂತ್ರವನ್ನು ಉಚ್ಚರಿಸುವಾಗ ಆ ಋಷೀಶ್ವರನ ಹಸನಾದ ಹಲ್ಲುಗಳು ಹೊಳೆಯುತ್ತಿರುವವು. ಆತನ ಬಾಯೊಳಗಿಂದ ಆಗಾಗ್ಗೆ ಸೋಮರಸದ ತೇಗು ಬರುತ್ತಿದ್ದವು. ಆ ಋಷಿಯು ಬಹಳ ತೆಳ್ಳಗೆ ಇದ್ದುದರಿಂದ ಗಲ್ಲಗಳು ಒಳಸಿಕ್ಕು ಮೂಗೂ ಗದ್ದವೂ ಉದ್ದಕ್ಕೆ ಹಾಯ್ದಿದ್ದವು. ಕಣ್ಣೆವೆಗಳು ಉದುರಿ ಅಂಗಲಾಗಿದ್ದವು. ಕಿವಿಯಾಲೆಗಳು ಕೂದಲುಗಳಿಂದ ಮುಚ್ಚಿದ್ದವು. ಗಡ್ಡಮೀಸೆಗಳು ಹೊಕ್ಕಳತನಕ ಇಳಿಬಿದ್ದಿದ್ದವು. ಮೈತುಂಬಾ ನರಗಳು ಎದ್ದದರಿಂದ ಬಳ್ಳಿಗಳಿಂದ ಸುತ್ತುಹಾಕಿದ ಬಹುಕಾಲದ ಕಲ್ಪವೃಕ್ಷದಂತೆ ಕಂಗೊಳಿಸುತ್ತಿರುವನು. ಬಳಿಯಲ್ಲಿ ಭಾಗೀರಥಿಯ ಉದಕ ತುಂಬಿದ್ದೊಂದು ಸ್ಫಟಿಕದ ಕಮಂಡಲವಿಟ್ಟಿತ್ತು. ಈ ತಪಸ್ವಿಯ ತಪದ ಮಹಿಮೆಯನ್ನು ಎಷ್ಟೆಂದು ಹೇಳಲಿ! ಸ್ವಭಾವಸಿದ್ಧವಾಗಿ ಶಾಂತಮೂರ್ತಿಯಿದ್ದರೂ ಆತನ ತಪಶ್ಚರ್ಯದ ಪ್ರಭಾವವನ್ನು ಕಂಡು ನನಗೆ ಹೆದರಿಕೆ ಹುಟ್ಟಿತು. ಆತನ ಹೆಸರು ತಕ್ಕೊಂಡರೆ ಪಾಪಪರಿಹಾರವಾದೀತು; ಅಂಥ ತಪೋಮೂರ್ತಿ ಇದ್ದೆಡೆಯೇ ಸುಕ್ಷೇತ್ರವು. ಅಂಥ

ಆಶ್ರಮವಿರುವ ಭೂಮಿಯೇ ಪವಿತ್ರವು. ಅಂಥ ಕುಲಗುರುವಿನ ಸೇವೆಯಲ್ಲಿ ಹಗಲೂ ಇರಳೂ ಹೊತ್ತುಗಳೆಯುವ ಮುನಿಗಳೇ ಪುಣ್ಯವಂತರು. ಇಂಥ ಮಹಾಮಹಿಮನ ಜಿಹ್ವಾಗ್ರದಲ್ಲಿರುವ ವಾಗ್ದೇವಿಯೇ ಧನ್ಯಳು. ಈ ಮಹಾ ಮುನೀಶ್ವರನ ಮುಖವೇ ವೇದಗಳಿಗೆ ನೆಲೆಮನೆಯಾಗಿದೆ. ಮಳೆಗಾಲದಲ್ಲಿ ಕಲಕಾದ ಹೊಳೆಗಳು ಶರತ್ಕಾಲದಲ್ಲಿ ಸ್ವಚ್ಛವಾದಂತೆ ಕಲಿಕಾಲದಿಂದ ಮಲಿನ ವಾದ ಯಾವತ್ತೂ ವಿದ್ಯೆಗಳು ಈ ಋಷಿಯ ಆಶ್ರಯದಿಂದ ಪುನಃ ಸ್ವಚ್ಛ ವಾದವು. ಸನ್ಮಾರ್ಗಕ್ಕೆ ದರ್ಪಣನಾದಂಥ, ಸತ್ವಗುಣಕ್ಕೆ ಆಶ್ರಯ ನಾದಂಥ, ತಪೋಧನಕ್ಕೆ ಭಾಂಡಾರನಾದಂಥ, ಮದಮತ್ಸರಾದಿ ದುರ್ಗುಣ ಗಳಿಗೆ ಶತ್ರುವಾದಂಥ ಜಾಬಾಲಿ ಋಷೀಶ್ವರನ ಪ್ರಭಾವದಿಂದ ಆ ತಪೋವನ ದೊಳಗೆ ಒಬ್ಬರಿಗೊಬ್ಬರು ದ್ವೇಷ ಅಸೂಯೆಗಳನ್ನು ಮಾಡುತ್ತಿದ್ದಿಲ್ಲ. ಸೋಜಿಗವೆಷ್ಟು ನೋಡಿರಿ! ಅಲ್ಲಿಯ ಶ್ವಾಪದಗಳು ಸಹ ತಮ್ಮ ಸ್ವಾಭಾವಿಕ ವಾದ ವೈರಭಾವವನ್ನು ಬಿಟ್ಟು, ತಮ್ಮತಮ್ಮೊಳಗೆ ಒಂದಕ್ಕೊಂದು ಸ್ನೇಹ ಭಾವದಿಂದ ನಡಕೊಂಡು, ಶಾಂತಿಯಿಂದ ಆ ತಪೋವನದೊಳಗೆ ಸುಖವನ್ನು ಅನುಭೋಗಿಸುತ್ತಿರುವವು. ಚಿಗರೆಯ ಮರಿಗಳು ಸಿಂಹಶಿಶುಗಳ ಕೂಡಿ ಆಡಿ ಈಲಾಗಿ, ತಮ್ಮ ತಾಯಿಯ ಬಿಟ್ಟು ಹೆಣ್ಣು ಸಿಂಹನ ಮೊಲೆ ಕುಡಿಯು ವವು. ಆನೆಯ ಮರಿಗಳು ಸಿಂಹನ ಕುತ್ತಿಗೆಗೆ ಸೊಂಡಿಲನ್ನು ಸುತ್ತಿ ಚಲ್ಲಾಟ ದಿಂದ ಎಳೆದಾಡುವಾಗ ಆ ಸಿಂಹವು ಕಣ್ಣುಮುಚ್ಚಿಕೊಂಡು ಸ್ವಸ್ಥವಾಗಿ ನಿಲ್ಲುವದು. ಸ್ನಾನಮಾಡಿ ಕುಳಿತಂಥ ಮುನಿಕುಮಾರರಿಗೆ ಮಂಗಗಳು ಗಿಡದ ಮೇಲಿನ ಹಣ್ಣುಗಳನ್ನು ತಂದು ಕೊಡುವವು. ಸೊಕ್ಕಾನೆಗಳು ತಮ್ಮ ಮದೋದಕವನ್ನು ನೆಕ್ಕುವದಕ್ಕೆ ಗಲ್ಲದ ಮೇಲೆ ಬಂದು ಕುಳಿತ ಭ್ರಮರಗಳನ್ನು ಕಿವಿಬೀಸಿ ಹಾರಿಸುತ್ತಿದ್ದಿಲ್ಲ. ಇದನ್ನೆಲ್ಲ ಕಂಡು ಮನ ದೊಳಗೆ ಸೋಜಿಗಗೊಳ್ಳುವಷ್ಟರಲ್ಲಿ ಹಾರೀತನು ಆ ಅಶೋಕ ವೃಕ್ಷದ ಕೆಳಗೆ ಒತ್ತಟ್ಟಿಗೆ ನನ್ನನ್ನು ಇಟ್ಟು ತಂದೆಯಾದ ಜಾಬಾಲಿ ಋಷಿಯ ಚರಣಕ್ಕೆ ನಮಿಸಿ ದೂರ ದರ್ಭಾಸನದ ಮೇಲೆ ಕುಳಿತುಕೊಂಡನು. ಅಲ್ಲಿ ಕುಳಿತ ಮುನಿಗಳು ನನ್ನನ್ನು ನೋಡಿ ಈ ಶುಕಶಿಶುವು ಎಲ್ಲಿ ದೊರಕಿತು? ಎಂದು ಹಾರೀತನನ್ನು ಕೇಳಿದರು. ಅದಕ್ಕೆ ಹಾರೀತನು—"ನಾವು ಸ್ನಾನಕ್ಕೆ ಹೋಗುವಾಗ ಮಾರ್ಗದಲ್ಲಿ ಪಂಪಾಸರೋವರದ ದಂಡೆಯ ಹತ್ತರ ಒಂದು ಮರದ ಮೇಲಿನ ಗೂಡಿನೊಳಗಿಂದ ಇದು ಕೆಳಗೆ ಬಿದ್ದಿತ್ತು; ಬಿಸಿಲಿಗೆ ಬಳಲಿ

ಬಾಯಿಬಿಡಹತ್ತಿ ಈಗ ಸಾಯುತ್ತದೋ ಇನ್ನೊಂದು ಕ್ಷಣಕ್ಕೆ ಸಾಯುತ್ತದೋ ಅನ್ನುವ ಹಾಗೆ ಹೊರಳಾಡುತ್ತಿತ್ತು. ಗೂಡಿನೊಳಗೆ ಇಡಬೇಕಾದರೆ ಮರದ ಮೇಲೇರಲಿಕ್ಕೆ ಬಾರದ್ದರಿಂದ ಇತ್ತ ತಕ್ಕೊಂಡು ಬಂದೆನು; ಪಕ್ಕ ಬಲಿತು ಹಾರಾಡುವದಕ್ಕೆ ಬರುವ ತನಕ ಇದನ್ನು ಇಲ್ಲಿಯೇ ಜೋಕೆ ಮಾಡುವ. ಅನಾಥ ಪ್ರಾಣಿಗಳನ್ನು ಸಂರಕ್ಷಿಸುವದೇ ನಮ್ಮ ಧರ್ಮವು. ಪಕ್ಕ ಬಲಿತ ಬಳಿಕ ಇದು ಬೇಕಾದ ಕಡೆಗೆ ಹೋದರೂ ಸರಿಯೇ, ಇಲ್ಲಿ ಇದ್ದರೂ ಸರಿಯೇ ” ಎಂದನು. ಹೀಗೆ ಮಾತಾಡುವಾಗ ಆ ಜಾಬಾಲಿ ಋಷಿಗಳು ನನ್ನ ಕಡೆಗೆ ನೋಡಿದಿರುವಿ ನೋಡಿದರು. ನನ್ನ ಗುರುತು ಹತ್ತಿದ್ದರಿಂದ ಶಾಂತದೃಷ್ಟಿಯಿಂದ ಮರಳಿ ಮರಳಿ ನನ್ನನ್ನು ನೋಡಿ— “ ತನ್ನ ಮೈಸೊಕ್ಕಿನ ಫಲವನ್ನು ಅನುಭೋಗಿಸುತ್ತಾನೆ ” ಎಂದು ಅಂದರು. ತಪಃಸಾಮರ್ಥ್ಯದಿಂದ ತ್ರಿಭುವನವನ್ನು ಜ್ಞಾನದೃಷ್ಟಿಯಿಂದ ನೋಡುವ ಜಾಬಾಲಿ ಋಷೀಶ್ವರರು ಹೀಗೆ ಆಡಿದ್ದನ್ನು ಕೇಳಿ ಎಲ್ಲ ಮುನಿಗಳು ಬಹಳ ಆಶ್ಚರ್ಯಗೊಂಡು “ ಸ್ವಾಮಿಾ, ಇದು ಏನು ಮೈಸೊಕ್ಕು ಮಾಡಿತು ? ಜನ್ಮಾಂತರದಲ್ಲಿ ಈತನು ಯಾವನು ? ಗಿಳಿಯಾಗಿ ಹುಟ್ಟಿದ ಕಾರಣವೇನು? ಈತನ ಉತ್ಪತ್ತಿ ಹೇಗಾಯಿತು ? ಈತನ ಹೆಸರೇನು ? ಇದನ್ನೆಲ್ಲ ದಯಮಾಡಿ ನಮಗೆ ಹೇಳಬೇಕು ” ಎಂದು ವಿನಯದಿಂದ ಕೈಮುಗಿದು ಬಿನ್ನವಿಸಿದರು. ಆಗ ಜಾಬಾಲಿ ಋಷೀಶ್ವರರು— “ ಇದರ ವಿಲಕ್ಷಣವಾದ ಕಥೆಯು ಬಹಳ ವಿಸ್ತಾರವಾಗಿದೆ; ಈಗ ಸಂಜೆಯಾಗುತ್ತ ಬಂತು; ಸ್ನಾನಸಂಧ್ಯಾದಿ ನಿತ್ಯಕರ್ಮಗಳಿಗೆ ತಡವಾದೀತು; ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಉಪಾಹಾರ ತಕ್ಕೊಂಡು ಸ್ವಸ್ಥವಾಗಿ ಕುಳಿತುಕೊಂಡ ಬಳಿಕ, ನಿಮಗೆ ಈ ಕಥೆಯನ್ನು ವಿಸ್ತರಿಸುವೆನು. ಈ ಶಿಶುವಿಗೂ ಆಹಾರಹಾಕಿ ಇದನ್ನೂ ಸಮಾಧಾನಗೊಳಿಸಿರಿ; ಇದರ ವೃತ್ತಾಂತವನ್ನು ಹೇಳಲಾರಂಭಿಸಿದ ಬಳಿಕ ಇದಕ್ಕೆ ತನ್ನ ಜನ್ಮಾಂತರದ ಸಂಗತಿಗಳು ಕನಸಿನೊಳಗಿನ ಮಾತುಗಳು ಜಾಗ್ರದವಸ್ಥೆಯಲ್ಲಿ ನೆನಪಾಗುವಂತೆ ನೆನಪಾಗುವವು ” ಎಂದು ಹೇಳಿ ಸ್ನಾನಕ್ಕೆ ಹೋದರು. ಬಳಿಕ ಸಂಧ್ಯಾದಿ ಕರ್ಮಗಳನ್ನು ತೀರಿಸಿಕೊಳ್ಳುವಷ್ಟರೊಳಗೆ ನಾಲ್ಕು ಗಳಿಗೆ ರಾತ್ರಿಯಾಯಿತು. ಚಂದ್ರೋದಯವಾಗಿ ಬೆಳದಿಂಗಳು ಶೋಭಿಸಹತ್ತಿತು. ಮರಳಿ ಅದೇ ಅಶೋಕ ವೃಕ್ಷದ ಕೆಳಗೆ ಜಾಬಾಲಿ ಋಷೀಶ್ವರರು ಬಂದು ವೇತ್ರಾಸನದ ಮೇಲೆ ಕುಳಿತುಕೊಂಡರು. ಹಾರೀತಕುಮಾರನು ನನಗೆ ಹಣ್ಣು ತಿನಿಸಿ,

ನೀರು ಕುಡಿಸಿ, ನನ್ನನ್ನು ತಕ್ಕೊಂಡು ಯಾವತ್ತೂ ಮುನಿಗಳೊಡಗೂಡು ಅಲ್ಲಿಗೆ ಬಂದು— “ಜೀಯಾ, ತಾತನೇ, ಇವರೆಲ್ಲರೂ ಆ ಅದ್ಭುತ ಕಥೆಯನ್ನು ಕೇಳುವ ಲವಲವಿಕೆಯಿಂದ ಬಂದು ತಮ್ಮ ಸುತ್ತುಮುತ್ತು ಪಾರೈಸಿಕೊಂಡು ಕುಳಿತಿದ್ದಾರೆ; ನಮ್ಮ ಇಚ್ಛೆಯನ್ನು ಪೂರ್ಣಮಾಡಬೇಕು” ಎಂದು ಬೇಡಿ ಕೊಂಡನು. ಇದನ್ನು ಕೇಳಿ ನನ್ನನ್ನು ನೋಡಿ— “ಎಲೈ ಶಿಷ್ಯರೇ, ಈ ಸೋಜಿಗದ ಕಥೆಯನ್ನು ಚಿತ್ತಗೊಟ್ಟು ಆಲಿಸಿರಿ” ಎಂದು ಜಾಬಾಲಿ ಋಷೀಶ್ವರರು ಹೇಳಲುದ್ಯುಕ್ತರಾದರು.

## ಕಥಾರಂಭವು

ಅವಂತೀ ಪ್ರದೇಶದಲ್ಲಿ ಕ್ಷಿಪ್ರಾನದೀತೀರದ ಮೇಲೆ ಉಜ್ಜಯಿನೀ ಎಂಬ ದೊಂದು ಲೋಕವಿಖ್ಯಾತವಾದ ಪಟ್ಟಣವಿದೆ. ಅದರ ಸುತ್ತು ಮುತ್ತು ನಾಲ್ಕುಸುತ್ತಿನ ಎತ್ತರವಾದ ಕೋಟೆಯುಂಟು; ಆ ಕೋಟೆಯ ಸುತ್ತು ಹೊರಮಗ್ಗಲು ಆಳವಾದ ಅಗಳತವಿದೆ. ಆ ಪಟ್ಟಣದ ಪಗಡಿಸಾಲ ಪೇಟೆ ಯೊಳಗಿನ ಅಂಗಡಿಗಳೊಳಗೆ ಮಾರಾಟಕ್ಕೆ ಇಟ್ಟ ಮುತ್ತು, ಹವಳ, ವಜ್ರ, ಪಚ್ಚರತ್ನಗಳೂ ತರತರದ ಆಭರಣಗಳೂ ಅಂದಗೊಂಡು ಒಪ್ಪುತ್ತಿರು ವವು. ಅಲ್ಲಿಯ ಚಿತ್ರಶಾಲೆಯೊಳಗಿನ ದೇವಗಂಧರ್ವರ ಚಿತ್ರಗಳನ್ನು ನೋಡಿದರೆ, ಇವರೆಲ್ಲರು ಈ ಉಜ್ಜಯಿನೀ ನಗರದೊಳಗಿನ ಉತ್ಸವಗಳನ್ನು ನೋಡಲಿಕ್ಕೆ ಸ್ವರ್ಗದಿಂದ ಕೆಳಗಿಳಿದು ಬಂದಿದ್ದಾರೋ ಏನೋ ಅನ್ನುವಂತೆ ತೋರುವದು. ಅಲ್ಲಿಯ ಸುಂದರವಾದ ಗುಡಿಗಳ ಮೇಲಿನ ಬಂಗಾರದ ಕಲಶಗಳು ಮುಗಿಲನ್ನು ಮುದ್ದಿಸುವಂತೆ ಕಾಣಿಸುತ್ತಿರುವವು. ಅಲ್ಲಲ್ಲಿಗೆ ನೀರು ಪುಟಿಯುವ ಕಾರಂಜಿಗಳು ಒಪ್ಪುತ್ತಿರುವವು. ಆ ನಗರದೊಳಗೆ ಪರನಾರೀ ಸಹೋದರರಾದಂಥ, ಸಕಲ ವಿದ್ಯಾವಿಶಾರದರಾದಂಥ, ಹಲವು ಬರಹ ಭಾಷೆಗಳನ್ನು ಬಲ್ಲಂಥ, ಮಹಾಭಾರತ ರಾಮಾಯಣ ಇತಿಹಾಸಾನು- ರಾಗಿಗಳಾದಂಥ, ದಾನಶೀಲರಾದಂಥ, ಧಾರ್ಮಿಕರಾದಂಥ ಹಲವು ವ್ಯಾಪಾರ ಗಳನ್ನು ಮಾಡುವ ಕೋಟ್ಯಧೀಶರಾದಂಥ, ಸವಿಮಾತುಗಳನ್ನು ಆಡುವಂಥ, ಸದಾಚಾರಸಂಪನ್ನರಾದ ಜನರು ಸುಖದಿಂದ ಸಂಸಾರಮಾಡುತ್ತ ಇರುತ್ತಿ

ದ್ದರು. ಆ ಪಟ್ಟಣದೊಳಗಿನ ಗಚ್ಚಿನ ಮೇಲುಪ್ಪರಿಗೆಗಳು ಬಹು ಎತ್ತರ ವಾಗಿ ಬೆಳ್ಳಗೆ ಹೊಳೆಯುತ್ತಿರುವವು. ಆ ಊರೊಳಗೆ ಬೆಳಗುಮುಂಜಾವಿನ ನಾಲ್ಕು ಗಳಿಗೆ ರಾತ್ರಿ ಇರುವಾಗ ಅರಗಿಳಿಗಳು ಮಾತಾಡುವ ಮಂಜುಳ ಮಾತುಗಳೂ, ವಂದಿಗಳು ಅನ್ನುವ ಮಂಗಳಗೀತಗಳೂ ದಿನಾಲು ಕೇಳ ಬರುವವು; ವೇದಘೋಷವಂತೂ ಯಾವಾಗಲೂ ಸಾಗಿರುವದು. ಬಹಳ ಹೇಳುವದೇನು! ಯಾವಾತನ ಚರಣಧ್ಯಾನವನ್ನು ಎಡೆಬಿಡದೆ ದೇವದಾನ-ವರು ಮಾಡುತ್ತಾರೋ ಆ ಚಂದ್ರಶೇಖರನೇ ಇಲ್ಲಿ 'ಮಹಾಕಾಲೇಶ್ವರ' ನೆಂಬ ಹೆಸರು ಪಡೆದು ಕೈಲಾಸ ಪರ್ವತವನ್ನು ಬಿಟ್ಟು ಪ್ರೀತಿಯಿಂದ ತನ್ನ ಗಣಸ್ತೋಮದೊಡನೆ ಇರುತ್ತಾನೆ. ಇಂಥ ಈ ಉಜ್ಜಯಿನೀ ಪಟ್ಟಣವನ್ನು ಪೂರ್ವಕಾಲದಲ್ಲಿ ಎಲ್ಲ ಪ್ರಜೆಗಳ ಪೀಡೆಯನ್ನು ಪರಿಹರಿಸುವಂಥ ತಾರಾಪೀಡ ನೆಂಬ ಒಬ್ಬ ಅರಸನು ಆಳಿದನು. ಆ ಅರಸನು ನೀತಿಶಾಸ್ತ್ರವನ್ನೂ ಧರ್ಮ ಶಾಸ್ತ್ರವನ್ನೂ ಚೆನ್ನಾಗಿ ಬಲ್ಲವನಿದ್ದನು. ಪುರಾತನ ಕಾಲದಲ್ಲಿ ಆಗಿಹೋದ ಮಾಂಧಾತ, ನಹುಷ, ನಳ, ಅಂಬರೀಷ ಸಗರ ಮುಂತಾದ ಮಹಾರಾಜರಂತೆ ಈ ತಾರಾಪೀಡನು ಪರಾಕ್ರಮಶಾಲಿಯಾಗಿಯೂ ಪುಣ್ಯಶಾಲಿಯಾಗಿಯೂ ಒಪ್ಪುತ್ತಿದ್ದನು. ಈತನು ತನ್ನ ಬಾಹುಬಲದಿಂದ ಸಂಪೂರ್ಣ ಭೂಮಂಡಲ ವನ್ನು ಕೈವಶಮಾಡಿಕೊಂಡಿದ್ದನು. ಈತನ ಶುಭ್ರವಾದ ಕೀರ್ತಿಯು ಅಷ್ಟ ದಿಕ್ಕುಗಳಲ್ಲೆಲ್ಲ ತುಂಬಿ ಹಗೆಗಳ ಮುಖಕ್ಕೆ ಮಾತ್ರ ಕಪ್ಪು ಹಚ್ಚುತ್ತಿರುವದು. ಲಕ್ಷ್ಮಿಗೆ ನಿವಾಸಸ್ಥಾನನಾಗಿಯೂ, ಸತ್ಯಕ್ಕೆ ಆಶ್ರಯನಾಗಿಯೂ, ವಿದ್ವಾಂಸ ರಿಗೆ ಪಾಲಕನಾಗಿಯೂ, ದೊಡ್ಡ ದಂಡು ಕಾಯ್ದುಕೊಂಡು ಶತ್ರುಗಳಿಗೆ ಕಾಲ-ದಂಡನಾಗಿಯೂ ಧರ್ಮದ ಅವತಾರನೋ, ಪುರುಷೋತ್ತಮನ ಪ್ರತಿನಿಧಿಯೋ ಅನ್ನುವಂತೆ ಈ ತಾರಾಪೀಡನು ರಾಜ್ಯವಾಳುತ್ತಿದ್ದನು. ಈತನಿಗೆ ನಾಲ್ಕೂ ದಿಕ್ಕಿನ ಅರಸರು ಕಪ್ಪಕಾಣಿಕೆ ಕೊಡುತ್ತಿದ್ದರು. ಬಹಳ ಹೇಳುವ ದೇನು! ಈತನ ಐಶ್ವರ್ಯವನ್ನು ನೋಡಿ ಇಂದ್ರನಿಗೆ ಸಹ ಹೊಟ್ಟೆಕಿಚ್ಚು ಹುಟ್ಟುತ್ತಿತ್ತು.

ಈ ತಾರಾಪೀಡನು ಆಳುವಾಗ ಈತನ ರಾಜ್ಯದೊಳಗೆ ಅನ್ಯಾಯವೂ ಅಧರ್ಮವೂ ಹೇಳಹೆಸರಿಲ್ಲದ ಹಾಗಾಗಿದ್ದವು; ಅದುದರಿಂದ ಎಲ್ಲ ಪ್ರಜೆಗಳು ಪ್ರೀತಿಯಿಂದ ವರ್ತಿಸುತ್ತ ಸುಖದಿಂದ ಇರುತ್ತಿದ್ದರು. ಈ ಅರಸನಿಗೆ ಶುಕನಾಸನೆಂಬ ಮುಖ್ಯಮಂತ್ರಿ ಇದ್ದನು. ಆ ಶುಕನಾಸ ಮಂತ್ರಿಯು

ಯಾವಾಗಲೂ ಗುಪ್ತಚರರನ್ನು ಕಳುಹಿ, ಪೃಥ್ವಿಯ ಮೇಲಿನ ಸುದ್ದಿಗಳನ್ನು ತಿಳುಕೊಳ್ಳುವನು; ಅದರಿಂದ ಆವನಿಗೆ ತಿಳಿಯದೆ ಎಲ್ಲಿಯೂ ಏನೂ ಆಗು-ತ್ತಿದ್ದಿಲ್ಲ. ಪರಚಕ್ರಗಳೆಂಬವು ಯಾವವೂ ಉಳಿಯದ್ದರಿಂದ ತಾರಾಪೀಡ ರಾಜನು ಎಲ್ಲ ರಾಜ್ಯಕಾರಭಾರವನ್ನು ಶುಕನಾಸ ಮಂತ್ರಿಗೆ ಒಪ್ಪಿಸಿ, ತಾನು ವಿಷಯಸುಖಗಳನ್ನು ಅನುಭೋಗಿಸುತ್ತಿದ್ದನು. ಒಮ್ಮೊಮ್ಮೆ ಹೂದೋಟ ದೊಳಗೆ ಹೋಗಿ ವಿಹರಿಸುವನು; ಒಮ್ಮೊಮ್ಮೆ ತಿಳಿಗೊಳದೊಳಗೆ ಜಲಕ್ರೀಡೆ ಯಾಡುವನು; ಒಮ್ಮೊಮ್ಮೆ ಕಟ್ಟಡವಿಗೆ ಹೋಗಿ ಕೆಟ್ಟ ಮೃಗಗಳ ಬೇಟೆ ಯಾಡುವನು; ಒಮ್ಮೊಮ್ಮೆ ಗೆಳೆಯರನ್ನು ಕೂಡಿಕೊಂಡು ವೀಣೆ, ಜಲತರಂಗ, ಮುಂತಾದ ವಾದ್ಯಗಳನ್ನು ಬಾರಿಸಿ ಕಾಲಕ್ರಮಣ ಮಾಡುವನು. ಈ ಮೇರೆಗೆ ಅತಿರಮಣೀಯವಾದಂಥ, ಸುಖಕಾರಕವಾದಂಥ, ತನಗೂ ತನ್ನ ದೊಡ್ಡ-ಸ್ತಿಕೆಗೂ ಆ ಆ ಋತುಗಳಿಗೂ ವಿರುದ್ಧವಲ್ಲದ ಸುಖೋಪಭೋಗಗಳನ್ನು ಅವುಗಳಿಗೆ ಸ್ವಾಧೀನನಾಗದೆ ಮಿತವಾಗಿ ಉಪಭೋಗಿಸುತ್ತಿದ್ದನು. ಆದರೂ ಪ್ರಜೆಗಳ ಆರಿಕೆಗಳನ್ನು ಕೇಳಿಕೊಳ್ಳಲಿಕ್ಕೆ ನಡುನಡುವೆ ಅವಂಗೆ ದರ್ಶನ ಕೊಡುತ್ತಿದ್ದನು; ಹೆಚ್ಚಿನ ಕಾರಣಗಳ ಸಲುವಾಗಿ ಓಲಗದೊಳಗೆ ಬಂದು ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಿದ್ದನು. ನಾಡೊಳಗೆಲ್ಲ ನಾಲ್ಕು ಕಡೆಯಲ್ಲಿ ಸ್ವಸ್ಥತೆ ಇದ್ದು, ಎಲ್ಲ ಪ್ರಜೆಗಳು ಸುಖದಿಂದ ಇದ್ದಾಗ ಈ ಮೇರೆಗೆ ಸುಖೋಪಭೋಗಗಳನ್ನುಪಭೋಗಿಸುತ್ತ ಆನಂದದಿಂದ ಕಾಲಕಳೆಯುವದು ಅರಸರಿಗೆ ಭೂಷಣವೇ ಸರಿ.

ಶುಕನಾಸ ಮಂತ್ರಿಯಾದರೂ ಜಾಣತನದಿಂದ ಎಲ್ಲ ರಾಜ್ಯಕಾರಭಾರ ವನ್ನು ಅರಸನಂತೆ ಸಹಜವೇ ಸಾಗಿಸುತ್ತಿದ್ದನು; ಪ್ರಜೆಗಳ ಬಿನ್ನಹವನ್ನು ಆಲಿಸಿ ತಡಮಾಡದೆ ಆಗಾಗ್ಗೆ ಅವರವರ ಕೆಲಸಗಳನ್ನು ನ್ಯಾಯದಿಂದ ತೀರಿಸಿಕೊಡುವನು; ಅದರಿಂದ ಈತನ ಮೇಲೆ ಎಲ್ಲರೂ ಮೊದಲಿಗಿಂತ ಹೆಚ್ಚು ನಂಬಿಗೆ ಇಟ್ಟರು. ಅರಸನಿಗೆ ಮಾನಮಾಡಿದಂತೆಯೇ ಈತನಿಗೂ ಮಾಂಡಲಿಕ ಭೂಪಾಲರೆಲ್ಲರೂ ಯಾವಾಗಲೂ ಮಾನ ಮಾಡುತ್ತ, ತಲೆಬಾಗಿ ನಡಕೊಳ್ಳುತ್ತಿದ್ದರು.

ಇದೇ ಮೇರೆಗೆ ಬಹಳ ದಿವಸಗಳು ಹೋದವು. ಅರಸನಿಗೆ ಮಕ್ಕಳಿದ್ದಿ-ಲ್ಲೆಂಬದೊಂದೇ ಕೊರತೆಯಲ್ಲದೆ ಬೇರೆ ಯಾವ ಸುಖದ ಕೊರತೆಯೂ ಇದ್ದಿಲ್ಲ. ತನಗೆ ದಿನಹೋದವು. ಹೊಟ್ಟೆಯಲ್ಲಿ ಮಕ್ಕಳಿಲ್ಲೆಂಬ ಮಾತು ಮನಸ್ಸಿಗೆ

ನೆನಪಾದ ಕೂಡಲೆ, ಈ ವಿಷಯಸುಖವನ್ನೂ ಈ ರಾಜ್ಯಪದವನ್ನೂ ತಕೊಂಡು ಏನು ಮಾಡಬೇಕೆಂತಲೂ, ಕಣ್ಣುಗಳಿದ್ದು ತಾನು ಕುರುಡನೆಂತಲೂ, ಎಲ್ಲರಿಗೆ ತಾನು ಆಶ್ರಯನಾಗಿ ತನಗೆ ಯಾರೂ ಆಶ್ರಯವಿಲ್ಲೆಂತಲೂ ಬಗೆದು ಉಸುರು ಹಾಕಿ ಅರಸನು ಬಹಳ ಉಮ್ಮಳಗೊಳ್ಳುವನು. ಆತನಿಗೆ ಹಲವು ಜನ ಹೆಂಡಂದಿರಿದ್ದರು; ಅವರೊಳಗೆ ಸೌಂದರ್ಯದಿಂದ ಸೊಬಗಗೊಳಿಸುವ ವಿಲಾಸವತಿ ಎಂಬವಳೇ ಪಟ್ಟದ ರಾಣಿಯು.

ಒಂದು ದಿನ ಅರಸನು ವಿಲಾಸವತಿಯು ಇರುವ ಮಂದಿರಕ್ಕೆ ಬಂದು ಒಳಹೊಕ್ಕು ನೋಡುತ್ತಾನೆ— ಆಕೆ ತನ್ನ ಎಡಗೈಯನ್ನು ಗಲ್ಲಕ್ಕೆ ಹಚ್ಚಿ-ಕೊಂಡು ದುಃಖದಿಂದ ಕಣ್ಣೀರು ಸುರಿಸುತ್ತ ಮಂಚದ ಮೇಲೆ ಕುಳಿತಿದ್ದಾಳೆ, ಕಣ್ಣೀರಿನಿಂದ ಆಕೆಯ ಸೀರೆಯ ಸೆರಗೆಲ್ಲ ತೊಯ್ದಿದೆ, ರಾಣಿವಾಸದೊಳಗಿನ ದಾಸಿಯರೆಲ್ಲರು ಚಿಂತೆಯಿಂದ ಸುಮ್ಮನೇ ನಿಂತಿದ್ದಾರೆ, ಚೋಪದಾರರು ಮನಬೇಸರಿಯಿಂದ ಒಂದು ತುಟಿ ಎರಡು ಮಾಡಲೊಲ್ಲರು, ಮನೆಯೊಳಗಿನ ಮುದುಕಿಯರು ಸುತ್ತುಮುತ್ತು ನೆರೆದು ಸಮಾಧಾನ ಹೇಳುತ್ತಾರೆ. ಅಷ್ಟರೊಳಗೆ ವಿಲಾಸವತಿಯು ಅರಸನನ್ನು ನೋಡಿ ಚಟ್ಟನೆ ಎದ್ದು ಮುಂದಕ್ಕೆ ಬರಲು, ಅರಸನು ಕೈಹಿಡಿದು ಅವಳನ್ನು ಮಂಚದ ಮೇಲೆ ಕುಳ್ಳಿರಿಸಿ ಅವಳ ಹತ್ತಿರ ತಾನೂ ಕುಳಿತುಕೊಂಡು, ತನ್ನ ಕೈಯಿಂದ ಆಕೆಯ ಗಲ್ಲದ ಮೇಲಿನ ಕಣ್ಣೀರ ಹನಿಗಳನ್ನು ಒರಸಿ,— "ಪ್ರಿಯಳೇ, ಈ ಪರಿ ದುಃಖಿಸುವ ಕಾರಣ-ವೇನು ? ಬೇಡ, ಕಣ್ಣೀರು ಸುರಿಸಬೇಡ; ಮಾತಾಡು; ಸುಮ್ಮನೆ ಅತ್ತರೇನಾಗುವದು ? ದುಃಖದಿಂದ ಉಸುರು ಹಾಕುವಂಥ ನಿನ್ನನ್ನು ಕಂಡು ನನ್ನ ಮನಸ್ಸು ತರಹರಗೊಳ್ಳಲೊಲ್ಲದು ; ನನ್ನಿಂದ ಏನಾದರೂ ತಪ್ಪು ಆಗಿದ್ದರೆ ಹೇಳು. ದಾಸದಾಸೀಜನರಲ್ಲಿ ಯಾರಾದರೂ ಮನಸ್ಸು ನೋಯಿಸಿ ಎದುರುತ್ತರ ಕೊಟ್ಟರೋ ಹೇಗೆ ? ಸುಮ್ಮನೆ ವ್ಯರ್ಥವಾಗಿ ಅಳಬೇಡ." ಎಂದು ಅರಸನು ಕೇಳಿಕೊಂಡರೂ ಆಕೆ ಏನೂ ಉತ್ತರ ಕೊಡದೆ ಸುಮ್ಮನೆ ದುಮ್ಮಾನದಿಂದ ಮೋರೆ ಕೆಳಗೆ ಮಾಡಿಕೊಂಡು ಕುಳಿತಳು. ಇದನ್ನು ಕಂಡು ಅರಸನು ಬಳಿಯಲ್ಲೆ ನಿಂತ ತೊತ್ತುಗಳನ್ನು ಕೇಳಲು, ಅವರಲ್ಲಿ ಅರಸಿಯ ತಾಂಬೂಲದ ಕರಡಿಗೆ ಹಿಡಿಯುವ ಮಕರಿಕೆಯೆಂಬ ದಾಸಿಯು— "ಜೀಯಾ ತಮ್ಮಿಂದ ಅಂಥದು ಏನೂ ಆಗಿಲ್ಲ; ಇಷ್ಟು ತಮ್ಮ ಕೃಪೆ ಇದ್ದ ಬಳಿಕ ಅರಸಿಯವರ ಮನಸ್ಸು ನೋಯುವ ಹಾಗೆ ಎದುರುತ್ತರ ಕೊಡುವ ಎದೆ

ಯಾರಿಗಾದೀತು? ಆದರೆ ಮಕ್ಕಳಿಲ್ಲೆಂಬ ದುಃಖವು ಬಹು ದಿವಸದಿಂದ ಅವರ ಹೃದಯದೊಳಗೆ ಮನೆಮಾಡಿಕೊಂಡಿದೆ. ನಾವು ಕೊರಳುಬೀಳುವದರಿಂದಲೂ, ಸೆರಗೊಡ್ಡಿ ಬೇಡಿಕೊಳ್ಳುವದರಿಂದಲೂ, ಅವರು ಭೋಜನ ಮುಂತಾದ ಕ್ರಿಯೆಗಳನ್ನು ಮಾಡುತ್ತಿದ್ದರಲ್ಲದೆ ಸಂತೋಷದಿಂದ ಮಾಡುತ್ತಿದ್ದಿಲ್ಲ. ದೊರೆಗಳ ಮನಸ್ಸಿಗೆ ಖೇದವಾದೀತೆಂಬ ಅಂಜಿಕೆಯಿಂದಲೇ ಮನದೊಳಗಿನ ದುಃಖವನ್ನು ಹೊರಗೆ ತೋರಗೊಡದೆ ಒಳಗಿಂದೊಳಗೆ ನುಂಗಿಕೊಳ್ಳುತ್ತಿದ್ದರು. ಇಂಥದ-ರೊಳಗೆ ಇಂದು ಶಿವರಾತ್ರಿಯೆಂದು ಮಹಾಕಾಲೇಶ್ವರನ ಗುಡಿಗೆ ಹೋಗಿದ್ದೆವು ; ಅಲ್ಲಿ ಮಹಾಭಾರತ ಪುರಾಣವು ನಡೆದಿತ್ತು ; ಅದರೊಳಗೆ ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲೆಂತಲೂ, ಪುನ್ನಾಮಕ ನರಕದಿಂದ ಬಿಡುಗಡೆ ಮಾಡಿಸುವದರಿಂದ ಪುತ್ರನೆನಿಸುತ್ತಾನೆಂತಲೂ, ಆ ಪುತ್ರನಿಲ್ಲದಿದ್ದರೆ ಗತಿಯಿಲ್ಲೆಂತಲೂ ಹೊರಟಿತು. ಅದನ್ನು ಕೇಳಿಬಂದಾಗಿನಿಂದ ಅಳಹತ್ತಿದ್ದಾರೆ ; ಎಷ್ಟು ಬಗೆಯಿಂದ ಹೇಳಿ-ಕೊಂಡರೂ ಅರಸಿಯರ ದುಃಖವು ನಿಲ್ಲಲೊಲ್ಲದು ; ಸ್ನಾನಕ್ಕೆ ಏಳಲೊಲ್ಲರು ; ಮೈಮೇಲಿನ ಆಭರಣಗಳನ್ನು ತೆಗೆದು ಚೆಲ್ಲಿದರು ; ಹೊಟ್ಟೆಯೊಳಗಿನ ಸುಖ-ದುಃಖಗಳನ್ನು ನಮ್ಮ ಕೂಡ ಮಾತಾಡುವವರು ಈಗ ತಾಸುಹೊತ್ತು ಆಯಿತು, ಎಷ್ಟು ಹಲುಬಿದರೂ ಅವರ ಬಾಯಿಂದ ಮಾತುಗಳೇ ಬರಲೊಲ್ಲವು; ಒಂದೇಸವನೆ ಕಣ್ಣೀರು ಸುರಿಸುತ್ತಾರೆ" ಎಂದು ಹೇಳಿದಳು. ಈ ದಾಸಿಯ ಮಾತುಗಳನ್ನು ಕೇಳಿ ಅರಸನು ಸ್ವಲ್ಪ ಹೊತ್ತು ಸ್ತಬ್ಧನಾಗಿ ನಿಟ್ಟುಸುರು ಬಿಟ್ಟು "ವಿಲಾಸವತೀ, ಇದು ದೈವಾಧೀನದ ಮಾತು, ಮನುಷ್ಯರ ಕೈಯೊಳಗಿನದಲ್ಲ. ವ್ಯರ್ಥವಾಗಿ ಶೋಕ ಮಾಡಬೇಡ ; ದೇವರ ಚಿತ್ತಕ್ಕೆ ಬಾರದ ಬಳಿಕ ನಾವು ಎಷ್ಟು ಹಲುಬಿದರೂ ವ್ಯರ್ಥವೇ ಸರಿ. ಪೂರ್ವ ಜನ್ಮದಲ್ಲಿ ಪುಣ್ಯ ಮಾಡಿ ನಾವು ಮಕ್ಕಳನ್ನೇ ಪಡಕೊಂಡು ಬಂದಿಲ್ಲ, ಈಗ ಬೇಡಿದರೆ ಎಲ್ಲಿಂದ ಬಂದಾವು? ಅತ್ತರೆ ಆಗುವದೇನು? ನೋಡು, ಪೂರ್ವದಲ್ಲಿ ಮಗಧದೇಶದ ಬೃಹದ್ರಥನೆಂಬ ಅರಸನಿಗೆ ಚಂಡಕೌಶಿಕ ಋಷಿಯ ವರದಿಂದ ಜರಾಸಂಧನೆಂಬ ಮಗನು ಹುಟ್ಟಿ ಕೃಷ್ಣನನ್ನು ಜಯಿಸಲಿಲ್ಲವೇ? ದಶರಥ-ರಾಯನಿಗೆ ಮುಪ್ಪಿನ ಕಾಲದಲ್ಲಿ ವಿಭಾಂಡಕ ಋಷಿಯ ಪುತ್ರನಾದ ಋಷ್ಯಶೃಂಗನ ಅನುಗ್ರಹದಿಂದ ರಾಮಚಂದ್ರನು ಮಗನಾಗಿ ಅವತರಿಸಲಿಲ್ಲವೇ? ಇದರಂತೆ ಋಷಿಗಳ ಪ್ರಸಾದದಿಂದ ಎಷ್ಟೋ ಅರಸರು ಪುತ್ರಸಂತತಿಯನ್ನು ಪಡಕೊಂಡದ್ದು ನೀನು ಕೇಳಬಲ್ಲೆಯಷ್ಟೇ; ನೀನಾದರೂ ತಪಸ್ವಿಗಳ

ಸೇವೆಯನ್ನು ಆದರದಿಂದ ಮಾಡುತ್ತಿರು; ಭಕ್ತಿಯಿಂದ ಪರಮೇಶ್ವರನನ್ನು ಆರಾಧಿಸುತ್ತಿರು; ಬಡವರಿಗೆ ದಾನಧರ್ಮಗಳನ್ನು ಕೊಡುತ್ತಿರು; ಯಾವಾಗಲೂ ಎಡೆಬಿಡದೆ ದೇವರನ್ನು ಧ್ಯಾನಿಸುವ ಋಷಿಗಳ ಸೇವೆ ಮಾಡಿದ್ದು ಎಂದಿಗೂ ವ್ಯರ್ಥವಾಗದು. ನಾನೂ ನಿನ್ನಂತೆ ಹಗಲೂ ಇರುಳೂ ಮಕ್ಕಳಿಲ್ಲೆಂದು ಮನದೊಳಗೆ ಮರುಗುತ್ತೇನೆ. ಎಂದಾದರೂ ನಿನ್ನ ತೊಡೆಯ ಮೇಲೆ ಆಡುವ ಕಂದನ ಕಂಡೇನೇ ಎಂಬ ಕಾಂಕ್ಷೆಯು ಸರ್ವದಾ ನನ್ನ ಹೃದಯದೊಳಗೆ ನೆಲೆಗೊಂಡಿದೆ. ಮಕ್ಕಳಿಲ್ಲದರಿಂದ ಈ ಜಗವೆಲ್ಲ ನನ್ನ ಪಾಲಿಗೆ ಹಾಳಾಗಿದೆ; ಮಾಡುವದೇನು! ಮನದನ್ನಳೇ, ಇನ್ನು ಅಳಬೇಡ! ದೇವರನ್ನೇ ಮೊರೆಹೋಗು, ದೇವರೇ ನಮ್ಮ ಮೊರೆ ಕೇಳಬೇಕು" ಎಂದು ಹಲವು ಬಗೆಯಿಂದ ಸಮಾಧಾನ ಹೇಳಿ, ಬಹಳ ಹೊತ್ತು ಅವಳ ಹತ್ತಿರ ಕುಳಿತುಕೊಂಡು, ಅರಸನು ಹೊರಟು ಹೋದನು. ಬಳಿಕ ವಿಲಾಸವತಿಯು ಶೋಕ ಬಿಟ್ಟು, ಸ್ವಲ್ಪ ಸಮಾಧಾನಗೊಂಡು, ಮುಂಚಿನಂತೆ ಮೈ ತೊಳಕೊಂಡು ಉಂಡಳು. ಅಂದಿನಿಂದ ಆಕೆ ವಿಶೇಷವಾಗಿ ಋಷಿಗಳ ಶುಶ್ರೂಷೆಯಲ್ಲಿಯೂ ಪರಮೇಶ್ವರನ ಆರಾಧನೆಯಲ್ಲಿಯೂ, ಅತಿಥಿಗಳ ಸತ್ಕಾರದಲ್ಲಿಯೂ, ಬಡವರಿಗೆ ಬೇಡಿದ್ದನ್ನು ಕೊಡುವದರಲ್ಲಿಯೂ ಹೊತ್ತುಗಳೆಯುತ್ತಿದ್ದಳು.

ಇದೇ ಮೇರೆಗೆ ಹಲವು ದಿನಗಳು ಹೋದ ಬಳಿಕ್ಕೊಂದು ಇರುಳು ಮೇಲುಪ್ಪರಿಗೆಯ ಮೇಲೆ ಮಲಗಿದಾಗ ವಿಲಾಸವತಿಯ ಮುಖದೊಳಗೆ ಪೂರ್ಣಚಂದ್ರನು ಹೋದ ಹಾಗೆ ಬೆಳಗು ಮುಂಜಾವಿನಲ್ಲಿ ಅರಸನಿಗೆ ಸ್ವಪ್ನ ಬಿತ್ತು. ಅರಸನು ಎಚ್ಚತ್ತು ಹರ್ಷದಿಂದ ತತ್‌ಕ್ಷಣವೇ ಶುಕನಾಸ ಮಂತ್ರಿಯನ್ನು ಕರೆಯಿಸಿ ಆತನಿಗೆ ಈ ಕನಸು ಹೇಳಿದನು. ಶುಕನಾಸನು ಅರಸನ ಮುಖದಿಂದ ಈ ಕನಸು ಕೇಳಿದ ಕೂಡಲೇ ಅತ್ಯಾನಂದದಿಂದ— "ಸ್ವಾಮಿ, ಬಹುದಿನದಿಂದ ಹಾರೈಸಿದಂಥ ನಮ್ಮ ಮನೋರಥವು ಪೂರ್ಣವಾಯಿತು. ಇನ್ನು ತಮಗೆ ಮಗನು ಹುಟ್ಟುವನು. ನನಗೂ ಇಂದಿನ ಇರುಳು ಒಬ್ಬ ಬ್ರಾಹ್ಮಣನು ಬಿಳಿಯ ಬಟ್ಟೆಯನ್ನು ಉಟ್ಟುಕೊಂಡು, ಕೈಯೊಳಗೆ ಅರಳಿದ ಬಿಳಿದಾವರೆಯನ್ನು ಹಿಡುಕೊಂಡು, ಆ ತಾವರೆಯ ಹೂವನ್ನು ನನ್ನ ಹಿರಿಯ ಹೆಂಡತಿಯಾದ ಮನೋರಮೆಯ ತೊಡೆಯ ಮೇಲಿಟ್ಟು ಅದೃಶ್ಯನಾದಹಾಗೆ ಸ್ವಪ್ನ ಬಿದ್ದಿತು. ಜೀಯಾ, ಶುಭಚಿಹ್ನೆಗಳು ಮುಂದಾಗುವ ಆನಂದಗಳನ್ನು ಸೂಚಿಸುತ್ತವೆ. ಮಕ್ಕಳ ಹೊರತು ನಮಗೆ ಯಾವ ಆನಂದವೂ ಉಳಿದಿಲ್ಲ.

ಬೆಳಗಿನ ಕನಸುಗಳು ಬಹುತರವಾಗಿ ನಿದರ್ಶನಕ್ಕೆ ಬರುತ್ತವೆ. ಆದುದರಿಂದ, ನಿಶ್ಚಯವಾಗಿ ವಿಲಾಸವತೀ ದೇವಿಯವರಿಗೆ, ಲೋಕಕ್ಕೆ ಆನಂದ ಕೊಡುವ ಮಗನು ಹುಟ್ಟುವನು.'' ಈ ಪ್ರಕಾರ ಆಡಿದ ಶುಕನಾಸನ ಮಾತುಗಳನ್ನು ಕೇಳಿ, ಅರಸನು ಆತನ ಕೈಹಿಡಕೊಂಡು ವಿಲಾಸವತಿಯ ಮಂದಿರದೊಳಗೆ ಹೋಗಿ ಆಕೆಗೆ ಈ ಸ್ವಪ್ನದ ವೃತ್ತಾಂತವನ್ನು ಹೇಳಲು, ಅದನ್ನು ಕೇಳಿ ಆವಳು ಬಹಳ ಆನಂದಭರಿತಳಾದಳು.

ಮುಂದೆ ಕೆಲವು ದಿವಸಗಳ ತರುವಾಯ ದೇವರ ಅನುಗ್ರಹದಿಂದ ವಿಲಾಸವತಿಯು ಬಸುರಾಗಿ, ದಿನದಿನಕ್ಕೆ ಆಕೆಯ ಬಸುರು ಬೆಳೆಯಹತ್ತಿದ ಹಾಗೆ ಮೆಲ್ನಡಿಗೆಯೂ, ಆಗಾಗ್ಗೆ ಆಲಸ್ಯದಿಂದ ಬರುವ ಆಕಳಿಕೆಗಳೂ, ಕೇದಗಿಯ ಹಾಗೆ ಆದ ಮೈಬಣ್ಣವೂ ಶೋಭಿಸಿದವು; ಬಯಕೆ ಹತ್ತಿ ಅವಳಿಗೆ ಅನ್ನವು ಸವಿಹತ್ತದ ಹಾಗಾಯಿತು. ಈ ಲಕ್ಷಣಗಳನ್ನೆಲ್ಲ ಕಂಡು ಹತ್ತಿರಿರುವ ತೊತ್ತುಗಳು ಅರಸಿಯರ ಬಸುರು ನಿಜವೆಂದು ತಿಳಕೊಂಡರು; ಆ ತೊತ್ತುಗಳಲ್ಲಿ ಯಾವಾಗಲೂ ಅರಸನ ಬಳಿಗೆ ಹೋಗಿಬರುವ ಕುಲವರ್ಧನೆ ಎಂಬ ಮುಖ್ಯ ಒಕ್ಕಲಗಿತ್ತಿಯು ಒಂದು ದಿನ ಮೂರುಸಂಜೆಯ ಶುಭ ವೇಳೆಯಲ್ಲಿ ಓಲಗಕ್ಕೆ ಹೋಗಿ, ನಮ್ರಭಾವದಿಂದ ಅರಸನ ಕಿವಿಯೊಳಗೆ ಮೆಲ್ಲಗೆ ವಿಲಾಸವತಿಯು ಬಸುರಿದ್ದ ಸುದ್ದಿಯ ಹೇಳಿದಳು. ಅಮೃತದಂಥ ಈ ಸುದ್ದಿಯ ಸವಿನುಡಿಗಳನ್ನು ಕೇಳಿದ ಕೂಡಲೆ ಅರಸನು ಆನಂದದಿಂದ ತನ್ನ ಮೈಮೇಲಿನ ಅಲಂಕಾರಗಳನ್ನು ತೆಗೆದು ಕುಲವರ್ಧನೆಗೆ ಉಚಿತವ ಕೊಟ್ಟನು. ಮುಂದೆ ಅರಸನು ವಿಲಾಸವತಿಯ ಬಯಕೆಗಳನ್ನು ಪೂರ್ಣ ಮಾಡಿದನು. ಒಂಬತ್ತು ತಿಂಗಳು ತುಂಬಿದ ಬಳಿಕ ಶುಭ ತಿಥಿಯಲ್ಲಿ ವಿಲಾಸವತಿಯು ದೇವರ ದಯೆಯಿಂದ ಗಂಡುಮಗನನ್ನು ಹೆತ್ತಳು. ಶಿಷ್ಯರೇ, ಆ ಸಮಯದ ಆನಂದವನ್ನು ಕೇಳುವದೇನು! ನಾಲ್ಕೂ ಕಡೆಯಲ್ಲಿ ಆಬಾಲವೃದ್ಧರಿಗೂ, ಎಲ್ಲ ಪ್ರಜೆಗಳಿಗೂ ಮಾಂಡಲಿಕ ಭೂಪಾಲರಿಗೂ ಬಹಳ ಹರ್ಷವಾಯಿತು; ಎಲ್ಲ ಕಡೆಯಲ್ಲಿ ಉತ್ಸವಗಳೂ, ಮಂಗಲ ಭೇರಿ, ಮೃದಂಗ, ನೌಬತ್ತು ಮುಂತಾದ ವಾದ್ಯಗಳ ಧ್ವನಿಗಳೂ, ನರ್ತಕಿಯರ ನರ್ತನವೂ, ಗಾಯಕರ ಗಾಯನವೂ ನಡೆದವು; ಅರಮನೆಯ ಮುಂದೆ ನೆರೆದ ಕುರುಡ, ಕುಂಟ, ಕಿವುಡ, ಮೂಕ, ಜೋಗಿ, ಜಂಗಮ ಮುಂತಾದ ಭಿಕ್ಷುಕರಿಗೆ ಬೊಕ್ಕಸದೊಳಗಿನ ಲೆಕ್ಕವಿಲ್ಲದಷ್ಟು ಹಣ ತೆಗೆತೆಗೆದು ದಾನ ಕೊಟ್ಟರು; ಈ ಆನಂದದ

ವರ್ತಮಾನವನ್ನು ಕೇಳಿದ ಕೂಡಲೆ ಅಂತಃಪುರದೊಳಗಿನ ರಾಜಸ್ತ್ರೀಯರು ಸಂತೋಷದಿಂದ ಸುದ್ದಿಯ ಹೇಳಿದ ತೊತ್ತುಗಳಿಗೆ ಮೈಮೇಲಿನ ಪೊಂದೊಡಿಗೆಗಳನ್ನು ತೆಗೆತೆಗೆದು ಉಚಿತವ ಕೊಟ್ಟರು. ಈ ಮೇರೆಗೆ ನೋಡಿದತ್ತೆಲ್ಲ ಸಡಗರವೇ ಸಡಗರವಾಗಿರುವದು. ಚಂದ್ರೋದಯವಾದ ಕೂಡಲೇ ಸಮುದ್ರವು ಉಕ್ಕೇರಿದಂತೆ ಈ ಭಾಗ್ಯಶಾಲಿಯಾದ ರಾಜಪುತ್ರನು ಹುಟ್ಟಿದ ಕೂಡಲೆ, ಎಲ್ಲಿ ನೋಡಿದರೂ ಆನಂದವೇ ಆನಂದವಾಗಿರುವದು. ಯಾವಾಗ ಮಗನನ್ನು ನೋಡೇನೋ ಎಂದು ಉತ್ಕಂಠೆಯುಳ್ಳವನಾಗಿ ಅರಸನು ಶುಕನಾಸನನ್ನು ಸಂಗಡ ಕರೆಕೊಂಡು ಸೂತಿಕಾಗೃಹಕ್ಕೆ ಹೋಗಲು, ಕೆಲ ಸುವಾಸಿನಿಯರು ಆ ಮನೆಯ ಬಾಗಿಲಿಗೆ ಬಿಳಿಯ ಹೂವುಗಳನ್ನೂ ಕೋಮಲವಾದ ಚಿಗಿಕೆಯನ್ನೂ ಸರಗೊಳಿಸಿ ಮಂಗಲಕರವಾದ ಮಾಲೆಯ ಮಾಡಿ ಕಟ್ಟುತ್ತಿದ್ದರು; ಗೋಡೆಗೆ ಸುಣ್ಣವ ಹಚ್ಚಿ ಅದರ ಮೇಲೆ ಸ್ತ್ರೀಯರು ಪಂಚವರ್ಣದ ರೇಶ್ಮೆಯ ಬಟ್ಟೆಗಳನ್ನು ಇಳಿಬಿಡುತ್ತಿರುವರು; ಕೆಲವು ಹೆಣ್ಣುಮಕ್ಕಳು ಅರಿಸಿನದಿಂದಲೂ ಕುಂಕುಮದಿಂದಲೂ ಸ್ವಸ್ತಿಕಗಳನ್ನು ಹಾಕುತ್ತಿರುವರು; ಕೆಲವು ಸುಂದರಿಯರು ಹೊನ್ನಿನ ಚೌಕಿಯ ಮೇಲೆ ಚಂದ್ರಸೂರ್ಯರನ್ನು ಬರೆಯುತ್ತಿರುವರು; ಮಂಗಲ ದೀಪಗಳು ಪ್ರಕಾಶಿಸುತ್ತಿರುವವು; ಓರಶಿಪಾಯಿಗಳು ಬಿಚ್ಚುಗತ್ತಿಯನ್ನು ಹಿಡಕೊಂಡು ಎಚ್ಚರದಿಂದ ತಿರುಗುತ್ತ ಸುತ್ತಲು ಪಹರೆಯ ಮಾಡುತ್ತಿರುವರು.

ಈ ಮೇರೆಗೆ ಶೋಭಿಸುವ ಸೂತಿಕಾಗೃಹದೊಳಗೆ ಹೊಕ್ಕು ಉದಯಕಾಲದ ಬಾಲಸೂರ್ಯನೋ, ಕಲ್ಪವೃಕ್ಷದ ಕೋಮಲವಾದ ಚಿಗುರೆಲೆಯೋ, ಆಗೇ ಅರಳಿದ ಕೆಂದಾವರೆಯೋ, ಮೃತ್ಯುಲೋಕವನ್ನು ನೋಡಬಂದ ಮಂಗಳನೋ, ದೇವಾಂಗನೆಯರ ಕೈಯೊಳಗಿಂದ ಭೂಮಿಗೆ ಬಿದ್ದ ದೇವೇಂದ್ರನ ಕಂದನೋ ಅನ್ನುವ ಹಾಗೆ ಒಪ್ಪುವಂಥ, ಸಕಲ ಸುಲಕ್ಷಣಗಳಿಂದ ಯುಕ್ತವಾದಂಥ, ಆನಂದದಾಯಕವಾದಂಥ ಶಿಶುವನ್ನು ಅರಸನು ಕಂಡನು. ಮಗನ ಮುಖವನ್ನು ನೋಡಿದ್ದರಿಂದ ಆದ ಅರಸನ ಆನಂದವನ್ನು ಬಣ್ಣಿಸಲಾರೆನು; ಇಂದಿಗೆ ಧನ್ಯನಾದೆನೆಂತಲೂ ತನ್ನ ಸಕಲ ಮನೋರಥಗಳು ಇಂದಿಗೆ ಸಫಲವಾದವೆಂತಲೂ ಅರಸನು ಸಡಗರದ ಕಡಲೊಳಗೆ ಈಸಾಡಹತ್ತಿದನು. ಶುಕನಾಸಮಂತ್ರಿಯು ಸೂಕ್ಷ್ಮದೃಷ್ಟಿಯಿಂದ ಆ ಕೂಸಿನ ಅವಯವಗಳನ್ನೆಲ್ಲ ದಿಟ್ಟಿಸಿನೋಡಿ, ಪ್ರೀತಿಯಿಂದ "ಮಹಾಸ್ವಾಮಿ, ಇತ್ತ ನೋಡಬೇಕು,

ಇನ್ನೂ ಈತನ ಅವಯವಗಳು ಪೂರ್ಣ ವ್ಯಕ್ತವಾಗದಿದ್ದರೂ ಈ ಚಕ್ರವರ್ತಿ ಲಕ್ಷಣಗಳು ಹೇಗೆ ಎದ್ದು ಕಾಣಿಸುತ್ತವೆ, ನೋಡಿರಿ; ಹುಬ್ಬುಗಳ ನಡುವಿನ ಊರ್ಣಾ-ರಾಜಚಿಹ್ನವೆಷ್ಟು ಸ್ಪಷ್ಟವಾಗಿ ತೋರುತ್ತದೆ, ನೋಡಿರಿ; ಈತನ ನಿಡಿಯವಾದ ಕಣ್ಣುಗಳು, ಅರಳಿದ ನೀಲೋತ್ಪಲಗಳಂತೆ ಒಪ್ಪುತ್ತವೆ; ಈ ನೆಟ್ಟನ್ನ ಮೂಗು ನೋಡಿದ ಕೂಡಲೆ ಸಂಪಿಗೆಯ ತೆನೆಯೇ ನನ್ನ ದೃಷ್ಟಿಗೆ ಬಿದ್ದ ಹಾಗೆ ಆಯಿತು; ಇವೇನು ತುಟಿಗಳೋ ಹವಳದ ಕುಡಿಗಳೋ ನೋಡಿರಿ; ಇವನ ಕೋಮಲವಾದ ಕೈಯೊಳಗಿನ ಶಂಖಚಕ್ರ ಮುಂತಾದ ಚಿಹ್ನಗಳನ್ನು ನೋಡಿದಿರಾ! ಈಗಲೇ ಎಷ್ಟು ಸ್ಪಷ್ಟವಾಗಿ ತೋರುತ್ತವೆ; ಇವೇನು ಈ ಕಂದನ ಕೋಮಲವಾದ ಪಾದಗಳೋ ಕಲ್ಪವೃಕ್ಷದ ಎಳೆದಳಿರುಗಳೋ ಪರೀಕ್ಷಿಸಿರಿ; ಇವುಗಳ ಮೇಲಿನ ರೇಖಾಂಕಿತವಾದ ಧ್ವಜ, ರಥ, ತುರಗ, ಛತ್ರ, ಕಮಲಗಳು ಹೇಗೆ ಕಂಗೊಳಿಸುತ್ತವೆ ನೋಡಿರಿ; ಈತನ ರೋದನ ಸ್ವರವೆಷ್ಟು ಗಂಭೀರದ್ದಿದೆ ನೋಡಿರಿ. ಈ ಯಾವತ್ತು ಲಕ್ಷಣಗಳಿಂದ ಮುಂದೆ ಈತನು ಸಾವಿರಾರು ಅರಸರಿಂದ ವಂದನೆ ಮಾಡಿಸಿಕೊಳ್ಳುವಂಥ ಮಹಿಮಾ-ನ್ವಿತನಾಗುವನೆಂಬುದಾಗಿ ಈಗಲೇ ಕಂಡುಬರುತ್ತದೆ." ಈ ಮೇರೆಗೆ ಆತನು ಮಾತಾಡುವಷ್ಟರಲ್ಲಿ ಮಂಗಲಕನೆಂಬ ಒಬ್ಬ ಸೇವಕನು ತ್ವರದಿಂದ ಅರಸನ ಬಳಿಗೆ ಬಂದು ಜಯವಾಗಲೆಂದು ಹರಸಿ—"ಜೀಯಾ ತಮ್ಮ ಭಾಗ್ಯಕ್ಕೆ ಎಣೆಯಿಲ್ಲ, ತಮ್ಮ ಮುಖ್ಯ ಮಂತ್ರಿಗಳಾದ ಈ ಶುಕನಾಸಪ್ರಧಾನರ ಹಿರಿಯ ಹೆಂಡಿರು ಮನೋರಮಾತಾಯಿಯವರು ಗಂಡುಮಗುವನ್ನು ಹೆತ್ತರು" ಎಂದು ಹೇಳಿದನು. ಈ ಸುದ್ದಿಯ ಕೇಳಿ ಅರಸನು ಅತ್ಯಾನಂದದಿಂದ "ಜನರು ಅನ್ನು-ವದು ಸುಳ್ಳಲ್ಲ, ದುಃಖಗಳು ಬರಹತ್ತಿದರೆ ಒಂದರಹಿಂದೊಂದು ಬರುತ್ತವೆ; ಸುಖಗಳು ಬರಹತ್ತಿದರೆ ಒಂದರಹಿಂದೊಂದು ಒಂದೇಸವನೆ ಬರುತ್ತವೆ" ಎಂದು ಆಡಿ, ಸ್ನೇಹಭಾವದಿಂದ ಶುಕನಾಸನ ಹೆಗಲಮೇಲಿನ ಮುತ್ತಿನ ಶೆಲ್ಲೆಯನ್ನು ಕಸಿದು ಮಂಗಲಕನಿಗೆ ಕೊಟ್ಟು, ಆತನೊಡಗೊಂಡು ಅಂತಃಪುರ ದೊಳಗಿಂದ ಹೊರಟು ವಂದಿಮಾಗಧಸ್ತುತಿಪಾಠಕರ ಗಡಣದೊಡನೆ, ಮಾಂಡಲಿಕ ಭೂಪಾಲರ ಸಮೂಹಸಹಿತ ಶುಕನಾಸಮಂತ್ರಿಯ ಮಂದಿರಕ್ಕೆ ಬಂದು, ಮುಂಚಿಗಿಂತ ಹೆಚ್ಚು ಉತ್ಸವ ಮಾಡಿಸಿದನು. ಮುಂದೆ ಹತ್ತನೆಯ ದಿವಸ ಅರಸನು ಬೇಡಿಕೊಳ್ಳುವ ಬಡವರಿಗೆ ದಾನಕೊಟ್ಟು ವಿಧಿಪೂರ್ವಕವಾಗಿ ಮಗನಿಗೆ ಚಂದ್ರಾಪೀಡ ಎಂಬ ಹೆಸರು ಇಡಿಸಿದನು; ಶುಕನಾಸನೂ

ಅರಸನನ್ನು ಕೇಳಿ ಮಗನಿಗೆ ವೈಶಂಪಾಯನ ಎಂಬ ಹೆಸರು ಇಡಿಸಿದನು.

ಮುಂದೆ ಕ್ರಮದಿಂದ ಚೂಡಾಕರಣ ಮುಂತಾದ ಸಂಸ್ಕಾರಗಳು ಆಗಿ, ಬಾಲ್ಯಾವಸ್ಥೆ ಹೋಗಿ, ಚಂದ್ರಾಪೀಡನು ಸ್ವಲ್ಪ ದೊಡ್ಡವನಾದ ಬಳಿಕ, ಅರಸನು ಪಟ್ಟಣದ ಹೊರಗೆ ಅರ್ಧ ಹರದಾರಿಯ ಅಂತರದಲ್ಲಿ ಶಿಪ್ರಾನದೀ ತೀರದ ಮೇಲೆ ಒಂದು ದೊಡ್ಡ ವಿದ್ಯಾಮಂದಿರವನ್ನು ಕಟ್ಟಿಸಿದನು. ಅದರ ಸುತ್ತು ಮುತ್ತು ಎತ್ತರವಾದ ಕೋಟೆಯ ಗೋಡೆಯ ಹಾಕಿಸಿ ಹೊರ ಮಗ್ಗಲು ಆಳವಾದ ಅಗಳತವನ್ನು ಕಡಿಸಿ, ಅದಕ್ಕೆ ಬಲವಾದ ಅಗಸೆಯ ಬಾಗಿಲುಗಳನ್ನು ಹಚ್ಚಿಸಿದ್ದರು. ಅವುಗಳಲ್ಲಿ ಒಂದೇ ಬಾಗಿಲು ತೆರೆದಿರುವದು. ಆ ಕೋಟೆಯ ಒಳಮಗ್ಗಲು ಒಂದುಕಡೆ ಅಶ್ವಶಾಲೆಯನ್ನೂ, ಒಂದುಕಡೆ ರಥಶಾಲೆಯನ್ನೂ, ಕೆಳಗಡೆ ಗರಡಿಮನೆಯನ್ನೂ ಕಟ್ಟಿದ್ದರು. ಒಂದೊಂದು ವಿದ್ಯೆಯಲ್ಲಿ ಪ್ರಖ್ಯಾತರಾದ ಪಂಡಿತರನ್ನು ದೇಶದೇಶಗಳಿಂದ ತರಿಸಿ, ಆ ಆ ವಿದ್ಯೆಯನ್ನು ಕಲಿಸುವದಕ್ಕೆ ಅವರವರಿಗೆ ತಕ್ಕ ವೃತ್ತಿಯನ್ನು ಕೊಟ್ಟು, ಅವರನ್ನು ಆ ವಿದ್ಯಾಮಂದಿರದಲ್ಲಿಟ್ಟು, ಅರಸನು ಚಂದ್ರಾಪೀಡನನ್ನೂ ವೈಶಂಪಾಯನನನ್ನೂ ಆ ಗುರುಗಳ ಕೈಯೊಳಗೆ ಕೊಟ್ಟನು. ಅಲ್ಲಿ ಅವರಿಗೆ ಗುರುಪುತ್ರರ ಹೊರತು ಬೇರೆ ಯಾರ ಗೆಳೆತನವೂ ಇದ್ದಿಲ್ಲ. ಆಟದ ಒಡನೆ ಗಳಂತೂ ಮೊದಲೇ ಇಲ್ಲ. ಆದದರಿಂದ ಪಂಜರದೊಳಗೆ ಹಾಕಿದ ಸಿಂಹದ ಮರಿಯಂತೆ ಚಂದ್ರಾಪೀಡನು ಕಷ್ಟದೊಳಗೆ ಇದ್ದನು. ಅರಸನೂ ಅರಸಿಯೂ ದಿನಾಲು ಅಲ್ಲಿಗೆ ಹೋಗಿ ಆತನನ್ನು ನೋಡಿ ಬರುವರು. ಚಂದ್ರಾಪೀಡನಾದರೂ ಗುರುಗಳು ಹೇಳಿದಂತೆ ಮನಸ್ಸುಗೊಟ್ಟು ಕಲಿಯು. ತ್ತಿದ್ದನು. ಆತನ ಗ್ರಾಹಕಶಕ್ತಿಯನ್ನೂ ಕುಶಾಗ್ರಬುದ್ಧಿಯನ್ನೂ ನೋಡಿ, ಗುರುಗಳು ಆತನಿಗೆ ಬಹು ಔತ್ಸುಕ್ಯದಿಂದ ಕಲಿಸುತ್ತಿದ್ದರು. ಈ ಮೇರೆಗೆ ಸ್ವಲ್ಪಕಾಲದಲ್ಲಿ ಚಂದ್ರಾಪೀಡನು ಧರ್ಮಶಾಸ್ತ್ರ, ಪ್ರಮಾಣಶಾಸ್ತ್ರ, ರಾಜನೀತಿ, ಶಸ್ತ್ರಾಸ್ತ್ರ ಮುಂತಾದ ವಿದ್ಯೆಗಳನ್ನು ಕಲಿತು, ಆನೆ ಕುದುರೆ ರಥಗಳ ಆಟ ದಲ್ಲಿ ಬಲ್ಲಿದನು, ವೀಣೆ ಮೃದಂಗ ಜಲತರಂಗ ಮುಂತಾದ ವಾದ್ಯಗಳನ್ನು ಬಾರಿಸುವದರಲ್ಲಿ ಬಲ್ಲವನು, ಹಲವು ಭಾಷಾಲಿಪಿಗಳಲ್ಲಿ ಪ್ರವೀಣನು ಆದನು. ಭೀಮನ ಹಾಗೆ ಈತನ ಮೈಯೊಳಗೆ ಬಲವುಂಟಾಯಿತು. ಈತನು ಆನೆಯ ಮರಿಯ ಕಿವಿಯನ್ನು ಹಿಡಿದರೆ ಅವುಗಳಿಗೆ ಅತ್ತಿತ್ತ ಅಲುಕಲಿಕ್ಕೆ ಸಹ ಬರುತ್ತಿದ್ದಿಲ್ಲ; ಖಡ್ಗದಿಂದ ಒಂದೇ ಕಡಿತಕ್ಕೆ ತಾಳೆ ಮರವನ್ನು ಹಾವರೆಯ

ದೇಂಟಿನ ಹಾಗೆ ಕಡಿದು ಕೆಡವುತ್ತಿದ್ದನು. ಈತನ ಬಾಣವು ಪರಶುರಾಮನ ಬಾಣದ ಹಾಗೆ ಬೆಟ್ಟದ ತುದಿಯೊಳಗಿಂದ ತಡಹಾಯ್ದು ಹೋಗುವದು. ಗರಡಿಸಾಧಕ ಮಾಡುವಾಗ ನೆಗವುವ ಈತನ ಲೋಡು ಹತ್ತು ಮಂದಿಗೆ ಆಯಾಸದಿಂದ ಎತ್ತುವದು. ಚಂದ್ರಾಪೀಡನಂತೆ ವೈಶಂಪಾಯನನೂ ಸಕಲ ವಿದ್ಯೆಗಳಲ್ಲಿ ನಿಪುಣನಾಗಿದ್ದನು. ಆದರೆ ಅವನಂತೆ ಕಸುವು ಮಾತ್ರ ಇವನಿಗೆ ಇದ್ದಿಲ್ಲ. ಇಬ್ಬರೂ ಕೂಡೇ ವಿದ್ಯೆ ಕಲಿತದ್ದರಿಂದಲೂ, ಕೂಡೇ ಇದ್ದುದರಿಂದಲೂ, ಸಮವಯಸ್ಕರಾದುದರಿಂದಲೂ ಒಬ್ಬರಿಗೊಬ್ಬರು ಜೀವದ ಗೆಳೆಯರಾಗಿದ್ದರು; ಒಬ್ಬರನ್ನೊಬ್ಬರು ಒಂದು ಕ್ಷಣ ಸಹ ಬಿಟ್ಟು ಅಗಲುತಿದ್ದಿಲ್ಲ. ಇದೇ ಮೇರೆಗೆ ಹಲವು ದಿವಸ ಹೋದ ಬಳಿಕ, ಒಂದು ದಿನ ಅರಸನು ಚಂದ್ರಾಪೀಡನಿಗೆ ವಿದ್ಯೆಯೂ ಯೌವನವೂ ಪ್ರಾಪ್ತವಾದದ್ದನ್ನು ಕಂಡು ಗುರುಗಳ ಒಪ್ಪಿಗೆ ಯಿಂದ ಬಲಾಹಕನೆಂಬ ತನ್ನ ದಳಪತಿಯ ಕೂಡ ರಾಹುತ ರಥಿಕರನ್ನೂ ಕಾಲದಲವನ್ನೂ ಕೊಟ್ಟು ಚಂದ್ರಾಪೀಡನನ್ನು ಅರಮನೆಗೆ ಕರೆತರ ಕಳುಹಿದನು.

ಬಲಾಹಕನು ಆ ವಿದ್ಯಾಮಂದಿರಕ್ಕೆ ಹೋಗಿ, ತಾನು ಬಂದದ್ದನ್ನು ರಾಜಪುತ್ರನಿಗೆ ದ್ವಾರಪಾಲಕನ ಮುಖದಿಂದ ಅರಿಕೆ ಮಾಡಿಸಿ, ಅಪ್ಪಣೆ ಪಡಕೊಂಡು, ಒಳಗೆ ಹೋಗಿ, ತಲೆಬಾಗಿ, ನೆಲಮುಟ್ಟಿ ಮುಜರೆಮಾಡಿ, ಕುಳಿತುಕೊಳ್ಳಲಪ್ಪಣೆಯಾದ ಬಳಿಕ ಕೆಳಗೆ ಕುಳಿತುಕೊಂಡು, ವಿನಯದಿಂದ—"ಜೀಯಾ, ನೀವು ಸಕಲ ವಿದ್ಯೆಗಳಲ್ಲಿ ಪ್ರವೀಣರಾದದ್ದನ್ನು ಕಂಡು, ಅರಸರು ಇಂದಿಗೆ ತಮ್ಮ ಮನೋರಥವು ಪೂರ್ಣವಾಯಿತೆಂದು ಬಗೆದು, ನಿಮ್ಮನ್ನು ರಾಜಮಂದಿರಕ್ಕೆ ಕರಕೊಂಡು ಬರಬೇಕೆಂದು ನನ್ನನ್ನು ಕಳಿಸಿದ್ದಾರೆ. ಗುರುಗಳು ನಿಮಗೆ ಹೋಗಲಪ್ಪಣೆ ಕೊಟ್ಟರು. ಯಾವಾಗ ನಿಮ್ಮ ದರ್ಶನ ತಕ್ಕೊಂಡೇವೋ ಎಂದು ಸಾವಿರಾರು ಮಂದಿ ರಾಜಪುತ್ರರು ಮಾರ್ಗ ನಿರೀಕ್ಷಿಸುತ್ತ ಮಹಾದ್ವಾರದಲ್ಲಿ ಬಂದು ನಿಂತಿದ್ದಾರೆ. ನೀವು ಈ ವಿದ್ಯಾಮಂದಿರಕ್ಕೆ ಬಂದು ಹತ್ತು ವರ್ಷವಾಯಿತು; ಬರುವಾಗ ಆರು ವರ್ಷದವರಿದ್ದಿರಿ, ಈಗ ನಿಮಗೆ ಹದಿನಾರನೆಯ ವರ್ಷ ನಡೆಯುತ್ತದೆ; ಇನ್ನು ಪಟ್ಟಣಕ್ಕೆ ಬಂದು ಪ್ರಜೆಗಳನ್ನು ಪಾಲಿಸಿ ಎಲ್ಲರಿಗೂ ಸುಖಕೊಟ್ಟು ನೀವೂ ರಾಜ್ಯಸುಖೋಪಭೋಗವನ್ನು ತಕ್ಕೊಳ್ಳಬೇಕು; ನಿಮ್ಮ ಸಲುವಾಗಿ ಇಂದ್ರಾಯುಧವೆಂಬ ಕುದುರೆಯು ಸಿದ್ಧವಾಗಿ ಬಂದು ಹೊರಗೆ ನಿಂತಿದೆ; ಈ ಅಶ್ವರತ್ನವನ್ನು

ಪಾರಸೀ ದೇಶದ ಬಾದಶಹನು ನಮ್ಮ ಮಹಾರಾಜರಿಗೆ ಕಾಣಿಕೆ ಕೊಟ್ಟಿದ್ದಾನೆ; ಇದರ ವೇಗವು ವಾಯುವೇಗಕ್ಕಿಂತ ಮಿಗಿಲಾಗಿದೆ; ಇಂದ್ರನ ಉಚ್ಚೈಃಶ್ರವದ ಲಕ್ಷಣಗಳು ಇದಕ್ಕೆ ಉಂಟೆಂದು ಅಶ್ವಪರೀಕ್ಷಕರು ಹೇಳುತ್ತಾರೆ" ಎಂದು ಹೇಳಿ ಬಲಾಹಕನು ಸುಮ್ಮನಾದನು. ಚಂದ್ರಾಪೀಡನು ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಹೊರಡಲುದ್ಯುಕ್ತನಾಗಿ ಇಂದ್ರಾಯುಧನನ್ನು ಒಳಗೆ ತರಹೇಳಿದನು. ಒಳಗೆ ಬಂದಕೂಡಲೆ ಸಕಲಲಕ್ಷಣಸಂಪನ್ನವಾದ ಆ ಕುದುರೆಯನ್ನು ನೋಡಿ ಚಂದ್ರಾಪೀಡನು ವಿಸ್ಮಿತನಾಗಿ ಮನದೊಳಗೆ—'ಸ್ವರ್ಗಾಧಿಪತಿಯಾದ ಇಂದ್ರನ ಐಶ್ವರ್ಯಕ್ಕಿಂತ ನಮ್ಮ ತಂದೆಯ ಐಶ್ವರ್ಯವು ಮಿಗಿಲಾಯಿತು. ಸ್ವರ್ಗಲೋಕದಲ್ಲಿ ಸಹ ದುರ್ಲಭವಾದ ರತ್ನಗಳು ಈತನ ಅರಮನೆಯಲ್ಲುಂಟು. ನೋಡಿರಿ! ಈ ಕುದುರೆಯ ತೇಜಸ್ಸನ್ನೂ ಶಕ್ತಿಯನ್ನೂ ನೋಡಿ ಇದರ ಮೇಲೆ ಹತ್ತುವದಕ್ಕೆ ನನಗೆ ಸಂಶಯ ಬರುತ್ತದೆ. ಯಾವನಾದರೂ ಗಂಧರ್ವಪುರುಷನು ಋಷಿಗಳ ಶಾಪದಿಂದ ಕುದುರೆಯಾಗಿ ಹುಟ್ಟಿದ್ದಾನೋ ಏನೋ? ಸಾಧಾರಣ ಕುದುರೆಗಳಿಗೆ ಇಂಥ ಅಲೌಕಿಕ ಲಕ್ಷಣಗಳು ಇರುವದಿಲ್ಲ. ಮುನಿಗಳ ಶಾಪದಿಂದ ದೇವತೆಗಳು ತಮ್ಮ ದಿವ್ಯ ಕಾಯವನ್ನು ಬಿಟ್ಟು, ಪಶ್ವಾದಿಗಳ ಕಾಯವನ್ನು ಕೈಕೊಳ್ಳುತ್ತಾರೆ. ಪೂರ್ವದಲ್ಲಿ ಸ್ಥೂಲಶಿರ ಎಂಬ ಮಹಾ ತಪಸ್ವಿಯ ಶಾಪದಿಂದ ರಂಭೆ ಎಂಬ ಅಪ್ಸರಾಂಗನೆಯು ಸ್ವರ್ಗಬಿಟ್ಟು ಇಹಲೋಕದಲ್ಲಿ ಅಶ್ವಿನೀ ರೂಪವನ್ನು ತಾಳಿ ಮೃತ್ತಿಕಾವತೀ ನಗರದೊಳಗೆ ಹುಟ್ಟಿ, ಶತಧನ್ವ ರಾಜನ ಸೇವೆಯಲ್ಲಿ ಬಹುಕಾಲ ಇದ್ದಳು. ಮತ್ತು ಹಲಕೆಲವು ದೇವತೆಗಳು ಶಾಪಮೂಲಕವಾಗಿ ಬೇರೆ ಬೇರೆ ರೂಪಗಳನ್ನು ತಾಳಿ ಭೂಮಿಯ ಮೇಲೆ ವಾಸಮಾಡುತ್ತಿದ್ದರೆಂಬುದಾಗಿ ಪುರಾಣಾಂತರ ಕಥೆಗಳುಂಟು. ಇದಾದರೂ ಶಾಪದ ಫಲವನ್ನು ಭೋಗಿಸುವಂತೆ ನನಗೆ ತಿಳಿಯಬರುತ್ತದೆ." ಎಂದು ಎದ್ದು ಮೇಲೆ ಹತ್ತಬೇಕೆಂಬ ಇಚ್ಛೆಯಿಂದ ಹತ್ತಿರ ಹೋಗಿ "ಮಹಾತ್ಮನೇ, ನೀನು ಯಾವಾತನಿದ್ದೀಯೋ ಇರು, ನಿನ್ನ ಮೇಲೆ ಆರೋಹಣ ಮಾಡುತ್ತೇನೆ. ನನ್ನ ತಪ್ಪು ಕ್ಷಮಿಸು" ಎಂದು ಪುನಃ ಮನದೊಳಗೆ ಅಂದನು. ಆತನ ಅಭಿಪ್ರಾಯ ತಿಳಿದು ಆರೋಹಣ ಮಾಡುವದಕ್ಕೆ ಆತನನ್ನು ಕರೆಯುತ್ತದೋ ಏನೋ ಅನ್ನುವಂತೆ ಇಂದ್ರಾಯುಧವು ತನ್ನ ಗೋಣು ಅಲ್ಲಾಡಿಸಿ, ಓರೆಗಣ್ಣಿನ ಸೂಕ್ಷ್ಮ ದೃಷ್ಟಿಯಿಂದ ನೋಡಿ, ಬಲಗಾಲಿನಿಂದ ನೆಲ ಕೆದರಿ ಹೇಕರಿಸಿತು.

ಅದನ್ನು ಆರೋಹಿಸಿ ಚಂದ್ರಾಪೀಡನು ಹೊರಟು ಹೊರಗೆ ಬಂದ ಕೂಡಲೆ ದರ್ಶನಕ್ಕೆ ಬಂದ ರಾಜಪುತ್ರರು ನಾ ಮುಂಚೆ ನೀ ಮುಂಚೆ ಎಂದು ಮುಂದುವರಿದು ಬರಲು ಬಲಾಹಕನು ಅವರೆಲ್ಲರ ಹೆಸರುಗಳನ್ನು ಕ್ರಮದಿಂದ ಬೇರೆ ಬೇರೆ ವಿವರಿಸಿದ ಬಳಿಕ, ಚಂದ್ರಾಪೀಡನು ಆದರದಿಂದ ಅವರವರ ಭೆಟ್ಟಿಯು ತಕ್ಕೊಂಡು ತಕ್ಕ ಸನ್ಮಾನಮಾಡಿ ಆ ರಾಜಪುತ್ರರನ್ನೊಡಗೊಂಡು, ವೈಶಂಪಾಯನನನ್ನು ಕರಕೊಂಡು ಆ ಚತುರಂಗ ಸೇನೆಯೊಡನೆ ವಂದಿಮಾಗಧರ ಸ್ತುತಿಪಾಠಗಳ ಉಗ್ಘಡಣೆಯಿಂದ ಊರಿಗೆ ಬಂದನು. ಇತ್ತ ಊರೊಳಗಿನ ಜನರೆಲ್ಲರು ತಮ್ಮ ತಮ್ಮ ಕೆಲಸಗಳನ್ನು ಬಿಟ್ಟು ಚಂದ್ರಾಪೀಡನನ್ನು ನೋಡಬೇಕೆಂಬ ಕಾಂಕ್ಷೆಯಿಂದ ಹಲವರು ಮಾಳಿಗೆ ಏರಿ, ಹಲವರು ಮೇಲುಪ್ಪರಿಗೆ ಹತ್ತಿ, ಕೆಲವರು ಕಿಡಿಕಿಗಳೊಳಗೆ, ಹಲವರು ಬಾಗಿಲುಗಳೊಳಗೆ, ಹಲವರು ಬಾಗಿಲ ಮುಂದಿನ ಕಟ್ಟೆಗಳ ಮೇಲೆ ಉತ್ಸಾಹದಿಂದ ನಿಂತು ನೋಡುತ್ತಿದ್ದರು. ಪಟ್ಟಣದೊಳಗಿದ್ದ ರಾಜಬೀದಿಗಳು ಬಹು ಅಗಲವಾಗಿದ್ದರೂ ಅಲ್ಲಿ ಕಾಲು ಇಡಲಿಕ್ಕೆ ಅನುವಿಲ್ಲದಷ್ಟು ದಟ್ಟಣೆಯಾಯಿತು.

ಚಂದ್ರಾಪೀಡನನ್ನು ನೋಡಿ ಆ ಪಟ್ಟಣದ ಜನರೆಲ್ಲರು "ಇಂದಿಗೆ ನಮ್ಮ ಪುಣ್ಯವು ಫಲಿಸಿತು! ಈ ಹೊತ್ತಿಗೆ ನಮ್ಮ ಕಣ್ಣುಗಳು ತೃಪ್ತವಾದವು. ಈ ದೊರೆಯನ್ನು ನೋಡಿ ನಾವು ಧನ್ಯರಾದೆವು!" ಎಂದು ಸಂತೋಷದಿಂದ ನಿಂತನಿಂತಲ್ಲಿಯೇ ಆತನಿಗೆ ಕೈಮುಗಿದರು. ನಗರದೊಳಗಿನ ಸ್ತ್ರೀಯರಂತೂ ಚಂದ್ರಾಪೀಡನು ವಿದ್ಯಾಮಂದಿರದಿಂದ ಬಂದನೆಂಬ ಸುದ್ದಿಯು ಕೇಳಿದ ಕೂಡಲೆ ಕೈಯೊಳಗಿನ ಕೆಲಸವರ್ಧ ಕೈಯೊಳಗೇ ಬಿಟ್ಟು ಕುಂಕುಮ ಹಚ್ಚಕೊಳ್ಳುವದಕ್ಕೆ ಎಡಗೈಯೊಳಗೆ ಹಿಡಿದ ಕನ್ನಡಿಯನ್ನೂ ಬಲಗೈಯೊಳಗಿನ ಕುಂಕುಮದ ಕರಡಿಗೆಯನ್ನೂ ಹಾಗೇ ಹಿಡಕೊಂಡು ಹಲವು ಸ್ತ್ರೀಯರು ನೋಡುವ ಅವಸರದಿಂದ ಹೊರಬಿದ್ದರು; ಕಾಲಿಗೆ ಹಚ್ಚಿದ ಅಲತಿಗೆಯ ರಸವು ಇನ್ನೂ ಆರಿದ್ದಿಲ್ಲ; ಅಷ್ಟರೊಳಗೆ ನೋಡುವ ಲವಲವಿಕೆಯಿಂದ ಹಲವು ತರುಣಿಯರು ಒಳಗಿಂದ ಓಡುತ್ತ ಹೊರಗೆ ಬಂದರು; ಕೊರಳೊಳಗೆ ಹಾಕಿಕೊಳ್ಳಬೇಕೆಂದು ಹಿಡಿದ ಮುತ್ತಿನ ಏಕಾವಳೀ ಸರಗಳು ಹಾಗೇ ಅವರ ಕೈಯೊಳಗೆ ಜೋತಾಡುತ್ತಿರುವವು; ಬಾಲೆಯರು ಹಾಲು ಕುಡಿಯುವದಕ್ಕೆ ಬಾಯಿಗೆ ಹಚ್ಚಿದ ಚಿನ್ನದ ಬಟ್ಟಲಗಳನ್ನು ಅಲ್ಲಿಂದಲ್ಲಿಯೇ ಬಿಟ್ಟು ನೋಡುವ ತವಕದಿಂದ ಓಡಿಬಂದರು; ಅವಸರದಿಂದ ಮೇಲುಪ್ಪರಿಗೆ ಏರುವಾಗ ಹಲವು

ನಿತಂಬಿನಿಯರ ನಡುವಿನ ಪಟ್ಟೆಗಳು ಸಡಿಲಿ ಬಿದ್ದವು; ಹಲವರ ಕೊರಳೊಳಗಿನ ಹಾರಗಳು ಹರಿದು ಮುತ್ತುಗಳುದುರಿದವು; ಎಲ್ಲಿ ನೋಡಿದರೂ ಸ್ತ್ರೀಯರ ಕೈಕಾಲುಗಳೊಳಗಿನ ಕಂಕಣ ಪೈಜಣಗಳ ಝಣತ್ಕಾರದ ಧ್ವನಿಯೇ ಕಿವಿಗೆ ಬೀಳುತ್ತಿರುವದು. ಈ ಮೇರೆಗೆ ಆ ನಗರದೊಳಗಿನ ಸ್ತ್ರೀಯರು ಸೌಧಾಗ್ರಗಳ ಮೇಲೆ ಹತ್ತಿ ಚಂದ್ರಾಪೀಡನನ್ನು ನೋಡುವಾಗ ಉಂಟಾದ ಅಪ್ರತಿಮ ಶೋಭೆಯನ್ನು ಎಷ್ಟು ಬಣ್ಣಿಸಿದರೂ ತೀರದು; ಆ ಸ್ತ್ರೀಯರಲ್ಲಿ ಒಬ್ಬರಿಗೊಬ್ಬರು—' ಚಂದ್ರಾಪೀಡನ ಮೇಲೆ ಚೆಲ್ಲವರಿವ ಚೆಲುವ ಬಿಳಿಯ ಚಾಮರಗಳೊಳಗೆ ಮೋರೆ ಎಷ್ಟು ಚಂದ ಕಾಣಿಸುತ್ತದೆ ನೋಡಿರೇ ! ಅದು ನೋಡು ! ಆತನ ಮುಂಡಾಸದ ಮೇಲಿನ ಮುತ್ತಿನ ತುರಾಯಿ ಎಷ್ಟು ಮನೋಹರವಾಗಿ ತೋರುತ್ತದೆ ! ನೋಡು ನೋಡು ವೈಶಂಪಾಯನನ ಕೂಡ ಮಾತಾಡುವಾಗ ಆತನ ಮುದ್ದು ಮುಖದ ಮುಗುಳ್ನಗೆಯು ನೋಡುವವರ ಮನಸ್ಸನ್ನು ಎಷ್ಟು ಸೊಗಸುಗೊಳಿಸುತ್ತದೆ: ಇಂಥ ಸೌಂದರ್ಯವೂ ಐಶ್ವರ್ಯವೂ ಜಗದೀಶ್ವರನ ಕೃಪೆಯಿಂದ ಈತನಿಗೆ ಪ್ರಾಪ್ತವಾದವಲ್ಲದೆ ಕಂಡವರಿಗೆ ಬರುವವೇ ? ಈ ಪುರುಷನನ್ನು ಪತಿಯಾಗಿ ವರಿಸುವ ಪುಣ್ಯವಂತಳು ಯಾವಾಕೆ ಇದ್ದಾಳೋ ತಿಳಿಯದು, ಆಕೆಯೇ ಲೋಕದೊಳಗೆ ಧನ್ಯಳು ! ಅವಳ ಸುಕೃತಕ್ಕೆ ಸರಿ ಇಲ್ಲ; ಇಂಥ ಪುತ್ರರತ್ನವನ್ನು ಹೆತ್ತ ನಮ್ಮ ವಿಲಾಸವತೀರಾಣಿಯವರ ಪುಣ್ಯಕ್ಕೆ ಎಣೆಯೇ ?' ಎಂದು ಮಾತಾಡುತ್ತಿರುವರು. ಅಷ್ಟರೊಳಗೆ ಸರ್ವರಿಗೂ ದರ್ಶನದಿಂದ ಆನಂದ ಕೊಡುತ್ತ ಚಂದ್ರಾಪೀಡನು ರಾಜಮಂದಿರದ ಮಹಾದ್ವಾರದ ಮುಂದೆ ಬಂದು ಕುದುರೆಯಿಳಿದು, ವೈಶಂಪಾಯನನ ಕೈಹಿಡಿದು, ಮುಂದೆ ಬಲಾಹಕನು ಮಾರ್ಗ ತೋರಿಸುತ್ತಾನೆ, ಚೋಪದಾರರು ' ಪರಾಕು ' ಎಂದು ಎಚ್ಚರಗೊಳಿಸುತ್ತಾರೆ, ವಂದಿಗಳೂ ಭಟ್ಟಂಗಿಗಳೂ ಹೊಗಳುತ್ತಾರೆ, ರೈತರೂ ರಾಹುತರೂ ಮುಜುರೆ ಕೊಡುತ್ತಾರೆ, ಹೆಜ್ಜೆ ಹೆಜ್ಜೆಗೆ ವೃದ್ಧನಾರಿಯರು ಅಂತಃಪುರದೊಳಗಿಂದ ಬಂದು ಆರತಿಮಾಡಿ ನಿವಾಳಿಯ ಚೆಲ್ಲುತ್ತಾರೆ, ಸಂಗಡ ಶೂರರಾದ ಪ್ರತಿಷ್ಠಿತ ಮುಕುಟವರ್ಧನರು ವಿನಯದಿಂದ ಬರುತ್ತಾರೆ. ಈ ಮೇರೆಗೆ ಚಂದ್ರಾಪೀಡನು ಬಂದು ಸರದಾರರ ಸಮೂಹದೊಡನೆ ಕುಳಿತುಕೊಂಡ ತಂದೆಯನ್ನು ನೋಡಿ ದೂರದಿಂದಲೇ ತಲೆವಾಗಿ ನೆಲಮುಟ್ಟಿ ವಂದನೆ ಮಾಡಿದನು.

ಆತನನ್ನು ನೋಡಿ ಅರಸನು ಅತ್ಯಾನಂದದಿಂದ " ಬಾ, ಮಗನೆ " ಎಂದು

ಪ್ರೀತಿಯಿಂದ ಅಪ್ಪಿಕೊಂಡು, ಅದರಂತೆ ವೈಶಂಪಾಯನನನ್ನೂ ಅಪ್ಪಿಕೊಂಡು ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಸ್ವಲ್ಪ ಹೊತ್ತು ಕುಳಿತ ಬಳಿಕ "ಮಗನೇ ನಿನ್ನ ಹಡೆದಾಕೆಯೂ ಅಂತಃಪುರದೊಳಗಿನ ಸ್ತ್ರೀಯರೂ ಯಾವಾಗ ನಿನ್ನನ್ನು ನೋಡೇವೆಂದು ಹಾರೈಸಿಕೊಂಡು ಕುಳಿತಿದ್ದಾರೆ. ಹೋಗು, ಅವರಿಗೆ ಭೆಟ್ಟಿಯಾಗು" ಎಂದು ಅರಸನು ಹೇಳಿದ ಕೂಡಲೆ, ಚಂದ್ರಾಪೀಡನು ವೈಶಂಪಾಯನನನ್ನು ಕರಕೊಂಡು ಅಂತಃಪುರದೊಳಗೆ ಹೋಗಿ ಅರಸು ಮನೆತನದೊಳಗಿನ ಕುಲೀನ ಸ್ತ್ರೀಯರೊಡನೆ ಪುರಾಣ ಕೇಳುತ್ತ ಕುಳಿತ ತಾಯಿಯ ಬಳಿಗೆ ಹೋಗಿ ಕಾಲಿಗೆರಗಿದನು. ಮಗನನ್ನು ನೋಡಿ ವಿಲಾಸವತಿಯು ನೂರಾರು ಮಂದಿ ದಾಸಿಯರು ಬಳಿಯಲ್ಲಿ ಸೇವೆಗೆ ಕೈಜೋಡಿಸಿಕೊಂಡು ನಿಂತಿದ್ದರೂ ತಾನೇ ಆನಂದದಿಂದ ಆರತಿಯಮಾಡಿ, ಸಿವಾಳಿಯು ತೆಗೆದು ಮಗನನ್ನು ಅಪ್ಪಿಕೊಂಡು ಮುಂತಾದಿ ವೈಶಂಪಾಯನನನ್ನೂ ಅಪ್ಪಿಕೊಂಡು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಚಂದ್ರಾಪೀಡನ ಮೈಮೇಲೆ ಕೈಯಾಡಿಸಿ, "ಮಗನೇ ನೀನು ಬಾಲ್ಯದಲ್ಲಿ ಆಡುವ ಆಟಗಳನ್ನು ಬಿಟ್ಟು ಇಷ್ಟು ದಿವಸ ವಿದ್ಯಾಮಂದಿರದೊಳಗೆ ಗುರುಗಳ ಶಿಕ್ಷೆಯನ್ನು ಅನುಭೋಗಿಸಿ, ಅವರ ಪ್ರಸಾದದಿಂದ ಸರ್ವವಿದ್ಯಾಸಂಪನ್ನನಾಗಿ ಬಂದು ನನ್ನ ಕಣ್ಣುಗಳ ಪುಣ್ಯವನ್ನು ದಿಟಗೊಳಿಸಿದಿ; ನಿನ್ನ ಧೈರ್ಯಕ್ಕೂ ಪಿತೃಭಕ್ತಿಗೂ ತಕ್ಕ ಫಲವಾಯಿತು; ನಿನ್ನಿಂದ ಇಂದಿಗೆ ನಾನು ಧನ್ಯಳಾದೆನು! ಇನ್ನು ಸದ್ಗುಣ-ಸೌಂದರ್ಯ-ಸಂಪನ್ನಳಾದ ಕುಲೀನ ಹೆಂಡತಿಯು ನಿನಗೆ ಪ್ರಾಪ್ತವಾದದ್ದನ್ನು ಎಂದಿಗೆ ನೋಡೇನು!" ಎಂದು ಮಾತಾಡಿ ಮಗನಿಗೆ ಮುದ್ದು ಕೊಟ್ಟಳು. ಬಳಿಕ ಚಂದ್ರಾಪೀಡನು ಅಲ್ಲಿಂದ ಎದ್ದು ಉಳಿದ ರಾಜಸ್ತ್ರೀಯರ ದರ್ಶನ ತೆಕ್ಕೊಂಡು, ಇಂದ್ರಾಯುಧವನ್ನು ಏರಿ ವೈಶಂಪಾಯನ ಸಹಿತ ಅರಸುಮಕ್ಕಳೊಡಗೊಂಡು ಶುಕನಾಸ ಮಂತ್ರಿಯ ಮನೆಗೆ ಹೋದನು. ಆತನ ಮನೆಯ ಮಹಾದ್ವಾರದ ಮುಂದೆ ಆನೆಗಳು ಝೂಲಾಯಿಸುತ್ತಿದ್ದವು; ಚೌಘಡೆಯ ವಾದ್ಯವಾಗುತ್ತಿತ್ತು; ಕುದುರೆಗಳೂ ರಥಗಳೂ ಒಂದರಹಿಂದೊಂದು ಸಂದಣಿಗೊಂಡು ನಿಂತಿದ್ದವು; ರಾಜಸೇವಕರು ಕೆಲಸಗಳಲ್ಲಿ ತತ್ಪರರಾಗಿ ಇತ್ತಲಿಂದತ್ತ, ಅತ್ತಲಿಂದಿತ್ತ ಓಡಾಡುತ್ತಿದ್ದರು; ಭೆಟ್ಟಿಗೆ ಬಂದ ಕಾಪಾಲಿಕ, ಶೈವ, ಬೌದ್ಧ ಮುಂತಾದ ಮತಸ್ಥರು ಮಾರ್ಗ ನಿರೀಕ್ಷಿಸುತ್ತ ನಿಂತಿದ್ದರು. ಆ ಸಂದಣಿಯೊಳಗಿಂದ ಹೋಗಿ ಬಾಗಿಲ ಬಳಿಯಲ್ಲಿ ಕುದುರೆಯಿಳಿದು ಚಂದ್ರಾಪೀಡನು

ವೈಶಂಪಾಯನನ ಕೈಹಿಡಕೊಂಡು, ಮುಂದೆ ಮುಂದೆ ಛಾಲದಾರರು ಮಾರ್ಗ ತೋರಿಸಲು, ಮಾಂಡಲಿಕ ಭೂಪಾಲರ ಸಮೂಹದೊಡನೆ ಶುಕನಾಸನು ಕುಳಿತುಕೊಂಡ ಮಂದಿರಕ್ಕೆ ಹೋಗಿ ದೂರದಿಂದಲೇ ಅರಸನಿಗೆ ಮಾಡಿದಂತೆ ನಮ್ರಭಾವದಿಂದ ಆತನಿಗೂ ವಂದನೆ ಮಾಡಿದನು. ಶುಕನಾಸನು ಎದ್ದು ಮುಂದಕ್ಕೆಬಂದು ಚಂದ್ರಾಪೀಡನನ್ನೂ ವೈಶಂಪಾಯನನನ್ನೂ ಪ್ರೀತಿಯಿಂದ ಆಲಿಂಗಿಸಿದನು. ಅಷ್ಟರೊಳಗೆ ಸೇವಕರು ರತ್ನಖಚಿತವಾದ ಆಸನವನ್ನು ತವಕದಿಂದ ತರಲು, ಅದನ್ನು ಒತ್ತಟ್ಟಿಗೆ ಸರಿಸಿ ಚಂದ್ರಾಪೀಡನು ಕೆಳಗೇ ಕುಳಿತುಕೊಂಡನು. ಬಳಿಕ ಶುಕನಾಸ ಮಂತ್ರಿಯು ಸಂತೋಷದಿಂದ— "ಜನ್ಮಜನ್ಮಾಂತರದಲ್ಲಿ ಮಾಡಿದ ನಮ್ಮ ಮಹಾರಾಜರ ಪುಣ್ಯವು ಇಂದಿಗೆ ಫಲಿಸಿತು; ಯಾವತ್ತೂ ಗುರುಹಿರಿಯರ ಆಶೀರ್ವಾದಗಳು ಈ ಹೊತ್ತಿಗೆ ನಿಜವಾದವು; ನಮ್ಮ ಹರಕೆಗಳೆಲ್ಲ ಇಂದಿಗೆ ಕೈಗೂಡಿದವು. ಭರತ ಭಗೀರಥರನ್ನು ಹೋಲುವ ನಿಮ್ಮಂಥ ಪಾಲಕರು ಪ್ರಾಪ್ತರಾದುದರಿಂದ ಈ ಪೃಥ್ವಿಯೂ ಪ್ರಜೆಗಳೂ ಧನ್ಯರೇ ಸರಿ. ತಾವು ಈ ಪೃಥ್ವಿಯನ್ನು ಚಿರಕಾಲವಾಳಬೇಕೆಂಬುದಾಗಿ ದೇವರನ್ನು ಬೇಡಿಕೊಳ್ಳುತ್ತೇನೆ" ಎಂದು ಮಾತಾಡಿದನು. ಬಳಿಕ ಚಂದ್ರಾಪೀಡನು ಆತನ ಅಪ್ಪಣೆತಕ್ಕೊಂಡು ಅಂತಃಪುರದೊಳಗೆ ಹೋಗಿ ವೈಶಂಪಾಯನನ ಮಾತೆಯಾದ ಮನೋರಮಾತಾಯಿಯ ದರ್ಶನತಕ್ಕೊಂಡು, ತನಗಾಗಿ ಸಿದ್ಧಮಾಡಿಸಿದ ಕುಮಾರಭವನವೆಂಬ ಮಂದಿರಕ್ಕೆ ಹೋಗಿ ಅಲ್ಲಿ ವಿಧಿಪೂರ್ವಕವಾಗಿ ನಿತ್ಯಕರ್ಮಗಳನ್ನು ತೀರಿಸಿಕೊಂಡು, ತನ್ನ ಶಯನಸ್ಥಾನದ ಹತ್ತರವೇ ಇಂದ್ರಾಯುಧವನ್ನು ಕಟ್ಟಿಸಿ, ಮಣಿಮಂಚದ ಮೇಲೆ ಮಲಗಿದನು. ಮರುದಿವಸ ಮುಂಜಾವಿನಲ್ಲಿ ಚಂದ್ರಾಪೀಡನು ಅರಸನ ಅಪ್ಪಣೆ ತಕ್ಕೊಂಡು ಅರಣ್ಯಕ್ಕೆ ಬೇಟೆಯಾಡಹೋಗಿ ಮಧ್ಯಾಹ್ನಕ್ಕೆ ತಿರುಗಿ ಬಂದ ಕೂಡಲೆ ಸ್ನಾನಗೃಹದೊಳಗೆ ಎಲ್ಲ ಸಿದ್ಧಮಾಡಿ ಮಾರ್ಗ ನಿರೀಕ್ಷಿಸುತ್ತ ಕುಳಿತ ಕುಲವರ್ಧಿನೆ ಮೊದಲಾದ ದಾಸಿಯರು ಮಲ್ಲಿಗೆ ಎಣ್ಣೆ ಮುಂತಾದ ಅಂಗರಾಗಗಳನ್ನು ಚಂದವಾಗಿ ಚಂದ್ರಾಪೀಡನ ಮೈಗೆ ತೊಡೆದು, ಅಭ್ಯಂಗಸ್ನಾನ ಮಾಡಿಸಿದರು. ಬಳಿಕ ಕೆಲವು ಮಿತ್ರರಾದ ರಾಜಪುತ್ರರನ್ನು ಕರಕೊಂಡು ಚಂದ್ರಾಪೀಡನು ಷಡ್ರಸಯುಕ್ತವಾದ ಸುಗ್ರಾಸವನ್ನು ಭುಂಜಿಸಿದನು. ಈ ಮೇರೆಗೆ ಕೆಲವು ದಿವಸಗಳು ಹೋದ ತರುವಾಯ ಒಂದು ದಿನ ಮುಂಜಾವಿನಲ್ಲಿ ವಿಲಾಸವತೀದೇವಿಯವರ ಅಪ್ಪಣೆಯಿಂದ ಕೈಲಾಸಕನೆಂಬ ಕಾರಕೂನನು

ಪತ್ರಲೇಖೆಯೆಂಬ ಕನ್ಯೆಯನ್ನು ಕರಕೊಂಡು ಚಂದ್ರಾಪೀಡನ ಹತ್ತಿರ ಬಂದು ವಂದನೆಮಾಡಿ–"ಸ್ವಾಮೀ, ವಿಲಾಸವತೀ ಅಮ್ಮನವರ ಅಪ್ಪಣೆಯ ಮೇರೆಗೆ ತಮಗೆ ಅರಿಕೆ ಮಾಡಿಕೊಳ್ಳುತ್ತೇನೆ, ಚಿತ್ತವಿಡಬೇಕು. ಒಂದಕ್ಕೆ ನಮ್ಮ ದೊರೆಗಳು ಕುಲೂತೇಶ್ವರ ರಾಜನ ಮೇಲೆ ದಂಡು ತಕ್ಕೊಂಡು ಹೋಗಿ ದಾಳಿಯಮಾಡಿ ಆತನನ್ನು ಜಯಿಸಿ, ರಾಜ್ಯಪದದಿಂದ ತಳ್ಳಿ, ಆತನ ಮಗಳಾದ ಈ ಪತ್ರಲೇಖೆಯೆಂಬ ಕನ್ಯೆಯನ್ನು ತಕ್ಕೊಂಡು ಬಂದು ರಾಣಿಯವರ ವಶಕ್ಕೆ ಕೊಟ್ಟರು; ಇವಳು ತೀರ ಸಣ್ಣಾಕೆ ಇದ್ದುದರಿಂದಲೂ ಅರಸನ ಮಗಳಾದುದರಿಂದಲೂ ದೇವಿಯವರು ಪ್ರೀತಿಯಿಂದ ಹೊಟ್ಟೆಯ ಮಗಳಂತೆ ಈಕೆಯನ್ನು ಜೋಕೆಮಾಡಿ, ಈಗ ತಮ್ಮ ತಾಂಬೂಲದ ಕರಡಿಗೆ ಹಿಡಿಯುವದಕ್ಕೆ ತಕ್ಕವಳೆಂದು ಕಳಿಸಿದ್ದಾರೆ, ಅಂಗೀಕರಿಸಬೇಕು; ಉಳಿದ ದಾಸಿಯರೊಳಗೆ ಈಕೆಯನ್ನು ಎಣಿಸಬಾರದೆಂತಲೂ, ಬಹು ದಿವಸ ಜೋಪಾನಮಾಡಿದ ಕಾರಣ ಈಕೆಯ ಮೇಲೆ ತಮ್ಮ ಪ್ರೀತಿ ಪೂರ್ಣ ಉಂಟೆಂತಲೂ, ನೀವಾದರೂ ಈಕೆಯ ಕೂಡ ಸ್ನೇಹದಿಂದ ವರ್ತಿಸಬೇಕೆಂತಲೂ ನಿಮಗೆ ಹೇಳಿದ್ದಾರೆ. ಈಕೆ ದೊಡ್ಡ ಕುಲದಲ್ಲಿ ಹುಟ್ಟಿದಾಕೆ; ಮರ್ಯಾದಾಶೀಲಳು; ಈಕೆಯ ರೀತಿಗಳು ತಮಗೆ ಗೊತ್ತಿಲ್ಲದ ಮೂಲಕವಾಗಿ ಅರಿಕೆ ಮಾಡಿಕೊಳ್ಳುತ್ತೇನೆ" ಎಂದು ಕೈಲಾಸಕನು ಕೈಮುಗಿದು ಬಿನ್ನವಿಸಿದ ಬಳಿಕ ಪತ್ರಲೇಖೆಯು ರಾಜಪುತ್ರನಿಗೆ ತಲೆಬಾಗಿ ಮರ್ಯಾದೆಯಿಂದ ವಂದನೆಮಾಡಿದಳು. ಚಂದ್ರಾಪೀಡನು ಆಶ್ಚರ್ಯದಿಂದ ಅವಳನ್ನು ನೋಡಿ—"ಒಳ್ಳೆಯದು, ತಾಯಿಯ ಅಪ್ಪಣೆಯ ಮೇರೆಗೆ ನಡಕೊಳ್ಳುವೆನು" ಎಂದು ಹೇಳಿ ಕೈಲಾಸಕನಿಗೆ ಹೋಗಲಪ್ಪಣೆ ಕೊಟ್ಟನು. ಆ ಹೊತ್ತಿನಿಂದ ಪತ್ರಲೇಖೆಯು ಯಾವಾಗಲೂ ಎಡಬಿಡದೆ ಚಂದ್ರಾಪೀಡನ ಕೂಡ ಇರುತ್ತಿದ್ದಳು. ಆತನು ಕಾನನಕ್ಕೆ ಬೇಟೆಯಾಡ ಹೋಗಲಿ, ಅರಮನೆಗೆ ಅರಸನ ದರ್ಶನಕ್ಕೆ ಹೋಗಲಿ, ತನ್ನ ಸೌಧಾಗ್ರದಲ್ಲಿರಲಿ, ಚಂದ್ರಾಪೀಡನ ಮೈನೆಳಲಿನಂತೆ ಅವಳು ಒಂದು ಕ್ಷಣ ಹೊತ್ತು ಸಹ ಆತನನ್ನು ಬಿಟ್ಟು ಅಗಲುತ್ತಿದ್ದಿಲ್ಲ. ಚಂದ್ರಾಪೀಡನಾದರೂ ಆಕೆಯ ಮೇಲೆ ದಿನದಿನಕ್ಕೆ ಹೆಚ್ಚೆಚ್ಚು ಲೋಭ ಮಾಡುತ್ತ, ನಂಬಿಗೆಯಿಂದ ತನ್ನ ಹಿತದ ಮಾತುಗಳನ್ನು ಅವಳಿಗೆ ಹೇಳುತ್ತಿದ್ದನು.

ಕೆಲವು ದಿವಸಗಳ ತರುವಾಯ ಅರಸನು ಚಂದ್ರಾಪೀಡನಿಗೆ ಯುವರಾಜ ಪಟ್ಟಗಟ್ಟಬೇಕೆಂದು ಮನದೊಳಗೆ ಆಲೋಚಿಸಿ, ಶುಕನಾಸ ಮುಂತಾದ

ಮಂತ್ರಿಗಳಿಗೆ ತಿಳಿಸಿ, ಪಟ್ಟಾಭಿಷೇಕದ ಸಾಮಗ್ರಿಯನ್ನು ಸಿದ್ಧಮಾಡಲಪ್ಪಣೆ
ಕೊಟ್ಟನು. ಯೌವರಾಜ್ಯಾಭಿಷೇಕವಾಗುವದು ಮುಂದೆ ಒಂದೆರಡು ದಿನವಿ
ರುವಾಗ ಚಂದ್ರಾಪೀಡನು ಶುಕನಾಸನ ದರ್ಶನಕ್ಕೆ ಹೋದನು. ಆಗ ಶುಕ-
ನಾಸನು— "ಯುವರಾಜರೇ, ನೀವು ಸಕಲಶಾಸ್ತ್ರಗಳನ್ನು ಓದಿದವರು.
ಸರ್ವವಿಷಯಗಳನ್ನು ಬಲ್ಲವರು. ಇನ್ನು ಹೆಚ್ಚಿಗೆ ನಿಮಗೆ ಉಪದೇಶ
ಮಾಡಬೇಕೆಂಬ ಹಾಗೇನೂ ಇಲ್ಲ; ಆದರೂ ಎರಡು ಮಾತುಗಳನ್ನು ಹೇಳು
ತ್ತೇನೆ, ಚಿತ್ತಗೊಟ್ಟು ಆಲಿಸಬೇಕು. ತಾರುಣ್ಯದ ಯೋಗದಿಂದ ಪ್ರಾಪ್ತ
ವಾಗುವ ತಮವು (ಅಜ್ಞಾನವು) ಉಳಿದ ಅಂಧಕಾರದಂತೆ ಸೂರ್ಯನ
ಕಿರಣಗಳಿಂದೇನೂ ನಷ್ಟವಾಗುವದಲ್ಲ, ಅಂಥ ಗಹನವಾದದ್ದು. ಐಶ್ವರ್ಯ
ದಿಂದ ಪ್ರಾಪ್ತವಾದ ಮದವು ಐಶ್ವರ್ಯ ಹೋದರೂ ಹೋಗುವದಿಲ್ಲ. ಅಷ್ಟು
ಕಷ್ಟಕರವಾದದ್ದು. ಗರ್ವದಿಂದ ಹುಟ್ಟಿದ ತಾಪವು ಶೀತೋಪಚಾರಗ
ಳಿಂದೇನೂ ಶಾಂತವಾಗುವದಲ್ಲ, ಅಂಥ ಉಗ್ರವಾದದ್ದು. ವಿಷಯವೆಂಬ
ನಂಜಿನಿಂದ ಸಾಯುವದು ನಿಶ್ಚಯವೆಂದು ತಿಳಿದರೂ ಮನುಷ್ಯರು ಅದರ ಸವಿ
ತಕ್ಕೊಳ್ಳದೆ ಬಿಡುವದಿಲ್ಲ, ಅದು ಅಂಥ ಮೋಹಕವಾದದ್ದು. ಕಾಮಲಂಪಟ-
ವೆಂಬ ಮಲಕ್ಕೆ ಒಳಗಾಗದವರು ಈ ಭೂಮಿಯ ಮೇಲೆ ಬಹಳ ವಿರಳ;
ದಿನಾಲು ಮಾಡುವ ಸ್ನಾನದಿಂದ ಈ ಮಲವು ಹೋಗುವದಲ್ಲ. ರಾಜ್ಯಸುಖ
ವೆಂಬ ನಿದ್ರೆಹತ್ತಿದ ಬಳಿಕ ಬೆಳಗಾದರೂ ಎಚ್ಚರವಾಗುವದಿಲ್ಲ; ಒಳ್ಳೆಯ
ಪ್ರಬುದ್ಧರಾದ ಅರಸರು ಸಹ ಇನ್ನೂ ಈ ನಿದ್ರೆಯೊಳಗೇ ಆಕಳಿಸುತ್ತಾರೆ,
ಇಂಥ ಘೋರನಿದ್ರೆ ಇದು. ಸ್ವಾಮೀ, ಚಿತ್ತಗೊಟ್ಟು ಆಲಿಸಬೇಕು. ಗರ್ಭ-
ಶ್ರೀಮಂತತನ, ನೂತನ ತಾರುಣ್ಯ, ಅನುಪಮ ಸೌಂದರ್ಯ, ಅಲೌಕಿಕ
ಸಾಮರ್ಥ್ಯ ಇವುಗಳಲ್ಲಿ ಮನುಷ್ಯನಿಗೆ ಒಂದು ಇದ್ದರೆ ಅವನನ್ನು ನಾಶಗೊಳಿ
ಸುವದಕ್ಕಾಗಲಿ, ಅವಿಚಾರಕ್ಕೊಳಮಾಡುವದಕ್ಕಾಗಲಿ ಸಾಕು; ಇವೆಲ್ಲ
ಒಂದೇ ಸ್ಥಳದಲ್ಲಿ ಒಟ್ಟುಗೂಡಿದರಂತೂ ಕೇಳುವದೇನು? ಎಂಥ ಸುಶಿಕ್ಷಿತ
ಮನುಷ್ಯನಾದರೂ ತಾರುಣ್ಯವೊದಗಿದ ಮೇಲೆ ಅವನಿಂದೇನಾದೀತು ಏನಾಗ
ದೆಂಬ ನಿಯಮವಿಲ್ಲ. ವಿಷಯಾರಣ್ಯದೊಳಗೆ ಮನುಷ್ಯನ ಇಂದ್ರಿಯಗಳೆಂಬ
ಎರಳೆಗಳು ಸುಖೋಪಭೋಗವೆಂಬ ಮೃಗಜಲಕ್ಕೆಳಸಿ ಹರಿದಾಡುತ್ತವೆ.
ಮೊದಲು ತುಚ್ಛವಾಗಿಯೂ ನೀರಸವಾಗಿಯೂ ತೋರುವ ವಿಷಯಗಳೇ
ಮುಂದೆ ಯೌವನ ಮದದ ಮಬ್ಬು ತಲೆಗೇರಿದಾಗ ಇಂಪಾಗಿಯೂ ಪ್ರಿಯಕರ

ವಾಗಿಯೂ ತೋರುವವು. ಇಂಥ ಸದುಪದೇಶವು ನಿಮ್ಮಂಥ ವಿಚಕ್ಷಣರ ಮನಸ್ಸಿಗೆ ಹತ್ತಿದ ಹಾಗೆ ಅಶಿಕ್ಷಿತರ ಮನಸ್ಸಿಗೂ, ದುಷ್ಟರ ಮನಸ್ಸಿಗೂ ಹತ್ತುವದಿಲ್ಲ. ಇದಲ್ಲದೆ ನಿಮಗೆ ಉಪದೇಶ ಮಾಡತಕ್ಕ ಕಾಲವು ಇದೇ ಸರಿ; ಯಾಕಂದರೆ ಇನ್ನೂ ನಿಮಗೆ ವಿಷಯರಸದ ಸವಿ ಹತ್ತಿಲ್ಲ. ಇಂಥ ಸದುಪದೇಶವು ಕಾಮನ ಕೂರಂಬುಗಳು ನಟ್ಟವರ ಮನಸ್ಸಿಗೆ ನಡುವದಿಲ್ಲ. ದೊಡ್ಡ ಮನೆತನದಲ್ಲಿ ಹುಟ್ಟಿದವರು ದುರ್ಮಾರ್ಗದಿಂದ ನಡೆಯುವದಿಲ್ಲೆಂದು ಅನ್ನಕೂಡದು; ಚಂದನವೃಕ್ಷದಿಂದ ಹುಟ್ಟಿದ ಬೆಂಕಿ ಸುಡವದಿಲ್ಲೆನ್ನ ಬಹುದೋ ? ಮತ್ತು ಸುಶಿಕ್ಷಿತ ಮನುಷ್ಯನು ಸನ್ಮಾರ್ಗದಿಂದಲೇ ನಡೆಯುವ ನೆಂಬ ನಿಶ್ಚಯವಿಲ್ಲ; ನೋಡಿರಿ ನೀರಿನಿಂದ ಬೆಂಕಿಯು ಆರುವದು; ಆ ನೀರಿನಿಂದಲೇ ವಡವಾಗ್ನಿಯು ಪ್ರಜ್ವಲಿಸುವದು. ಆದುದರಿಂದ ಮಾನವ ಪ್ರಾಣಿಗಳು ಗುರುಗಳ ಹಿರಿಯರ ಹಿತೋಪದೇಶಗಳಿಗೆ ಯಾವಾಗಲೂ ಕಿವಿಗೊಡುತ್ತ ನಾನು ನನ್ನದೆಂಬ ಅಹಂಕಾರ ಮಮಕಾರಗಳಿಗೆ ಒಳಗಾಗದೆ, ಬಹಳ ಎಚ್ಚರದಿಂದ ವರ್ತಿಸಬೇಕು. ಗುರೂಪದೇಶಗಳನ್ನು ಕೇಳುವದೇ ಕಿವಿಗೆ ಭೂಷಣವು. ಅರಸನ ಮಾತಿಗೆ ತಲೆದೂಗುವವರೇ ಬಹಳ ಮಂದಿ. ನಿಸ್ಪೃಹತೆಯಿಂದ ಅರಸನಿಗೆ ಅಂಜದೆ ಬುದ್ಧಿಯ ಹೇಳುವವರು ಬಹಳ ಅಪರೂಪ. ಅಂಥದರೊಳಗೂ ದೈವಯೋಗದಿಂದ ಯಾವನಾದರೊಬ್ಬನು ಗಂಟುಬಿದ್ದರೂ ಪ್ರಯೋಜನವೇನು ? ಗರ್ವರೂಪಮಲದಿಂದ ಅರಸರ ಕಿವಿಗಳು ಗಡದು ಹಾಕಿರುತ್ತವೆ; ಅದರಿಂದ ಆತನು ಹೇಳಿದ ಬುದ್ಧಿಯ ಮಾತುಗಳು ವ್ಯರ್ಥವಾಗುವವು. ಮುಖಸ್ತುತಿ ಮಾಡುವವರ ಮರುಳು ಮಾತುಗಳಿಗೆ ಮೋಹಿತರಾದ ಅರಸರ ಮನಸ್ಸು ಗುರುಹಿರಿಯರ ಸದುಪದೇಶಕ್ಕೆ ಎಳಸುವದಿಲ್ಲ. ಅಂಥವರಿಗೆ ಹೇಳುವ ಉಪದೇಶವು ಬುಡಮೇಲು ಮಾಡಿದ ಕೊಡದಮೇಲೆ ಹಣಿಸಿದ ನೀರಿನಂತೆ ವ್ಯರ್ಥವೇ ಸರಿ; ಆದುದರಿಂದ ಉಪದೇಶಕನಿಗೆ ಮಾತ್ರ ಖೇದವಾಗುವದೇ ಹೊರತು ಬೇರೆ ಏನೂ ಫಲವಿಲ್ಲ. ಜೀಯಾ, ಲಕ್ಷ್ಮಿಯು ಪ್ರಾಪ್ತವಾದಾಗ ಜನರು ಬಹಳ ಹೆಮ್ಮೆ ಮಾಡುತ್ತಾರೆ. ಲಕ್ಷ್ಮಿಯ ದುರ್ಗುಣಗಳನ್ನು ಹೇಳುತ್ತೇನೆ ಕೇಳಿರಿ! ಇಂಗಡಲೊಳಗಿಂದ ಹುಟ್ಟುವಾಗಲೇ ಈಕೆಗೆ ಒಡಹುಟ್ಟಿದವರ ನೆರಳು ಬಿತ್ತೋ ಏನೋ ಅನ್ನುವ ಹಾಗೆ ಚಂದ್ರನ ಕಲೆಯಿಂದ ವಕ್ರತ್ವವು, ಪಾರಿಜಾತ ವೃಕ್ಷದ ಪಲ್ಲವದಿಂದ ರಾಗವು, ಉಚ್ಚೈಃಶ್ರವದಿಂದ ಚಪಲತೆಯು, ಕಾಲಕೂಟ ವಿಷದಿಂದ

ಮೋಹನಶಕ್ತಿಯು, ಮದ್ಯದಿಂದ ಮದವು, ಕೌಸ್ತುಭಮಣಿಯಿಂದ ಕಾಠಿಣ್ಯವು ಪ್ರಾಪ್ತವಾದವು. ಈಕೆ ಒಬ್ಬರನ್ನೂ ಲಕ್ಷಿಸುವದಿಲ್ಲ. ನೋಡ ನೋಡಲು ಮಿಂಚಿನಹಾಗೆ ತೋರಿಯಡಗುವಳು. ಜಾಣರು ಸಿರಿಯನ್ನು ನೆಚ್ಚಬಾರದು. ಈ ಲಕ್ಷ್ಮಿಯ ಕುಟಿಲತನವನ್ನು ಎಷ್ಟು ಹೇಳಿದರೂ ತೀರದು. ಸ್ವಾಮಿ, ಇಂದು ಐಶ್ವರ್ಯದ ಶಿಖರಕ್ಕೆ ಏರಿಸಿದ ಮನುಷ್ಯನನ್ನೇ ನಾಳಿಗೆ ತೊಲಗಿ ಆತನನ್ನು ಮಣ್ಣುಪಾಲು ಮಾಡುತ್ತಾಳೆ. ಇಂಥ ದುಷ್ಟ ಲಕ್ಷ್ಮಿಯ ಗಾಳಿ ಒಮ್ಮೆ ಮೈಸೋಂಕಿದರೆ ಸಾಕು; ಆ ಪುರುಷನು ವಿದ್ವಾಂಸ ನಿರಲಿ, ಜಾಣನಿರಲಿ, ಪರಾಕ್ರಮಿ ಇರಲಿ, ಕುಲೀನನಿರಲಿ, ಸುಶೀಲನಿರಲಿ, ಎಂಥವನಿದ್ದರೂ ಅವನ ಗುಣಗಳನ್ನು ಲೋಪಮಾಡಿ ಅವನಿಗೆ ವಿಪರೀತ ಬುದ್ಧಿಯ ಹುಟ್ಟಿಸಿ, ಅವನನ್ನು ನಿಜವಾದ ಸುಖಕ್ಕೆ ಎರವು ಮಾಡುತ್ತಾಳೆ. ರಾಜ್ಯಲಕ್ಷ್ಮಿಯ ಅಭಿಷೇಕದಿಂದಲೇ ಅರಸರ ಸೌಜನ್ಯವು ತೊಳೆದು ಹೋಗು ವದು. ಆಗಿನ ಹೋಮಾಗ್ನಿಯ ಹೊಗೆಯಿಂದ ಅವರ ನಿರ್ಮಲವಾದ ಹೃದಯವು ಮಲಿನವಾಗುವದು; ಪುರೋಹಿತನು ದರ್ಭೆಯಿಂದ ಸಂಪ್ರೋಕ್ಷಣ ಮಾಡಿದ ಕೂಡಲೆ ಅರಸರ ಕ್ಷಮಾಗುಣವು ಲಯವಾಗುವದು. ತಲೆಯ ಮೇಲೆ ಕಿರೀಟ ಬಂದ ಕೂಡಲೆ ಮುಪ್ಪಿನಿಂದ ತಲೆ ಬೆಳ್ಳಗಾಗುವದನ್ನು ಮರೆ ಯುತ್ತಾರೆ. ಛತ್ರ ಹಿಡಿಸಿಕೊಂಡಾಗಲೇ ಅವರಿಗೆ ಪರಲೋಕವು ಮರೆ-ಯಾಗುವದು. ಚಾಮರದ ಗಾಳಿಗೆ ಅವರ ಸತ್ಯಶೀಲತ್ವವು ಹಾರಿಹೋಗು ವದು. ಚೋಪದಾರರ ಕೈಯೊಳಗಿನ ವೇತ್ರದಂಡದಿಂದ ಅರಸರ ಔದಾ-ರ್ಯಾದಿ ಗುಣಗಳು ಅಡಗುವವು. ಭಟ್ಟಂಗಿಗಳ ಜಯಜಯಕಾರ ಶಬ್ದ ಗಳೊಳಗೆ ಅವರು ಸಾಧು ಜನರ ಕಥೆಗಳಿಗೆ ಕಿವಿಗೊಡುವದಿಲ್ಲ. ಇಷ್ಟೇ ಅಲ್ಲ, ಅವರು ಎಲ್ಲ ದುರ್ಗುಣಗಳಿಗೆ ತವರಮನೆಯಾಗುವರು. ಜೂಜಾಡುವದೇ ವಿನೋದವೆಂದೂ, ವ್ಯಭಿಚಾರ ಮಾಡುವದೇ ಚತುರತನವೆಂದೂ, ಬೇಟೆಯಾಡು ವದೇ ಶರೀರಕ್ಕೆ ಪರಿಶ್ರಮವೆಂದೂ, ಮದ್ಯಪಾನವೇ ತಕ್ಕ ವಿಲಾಸವೆಂದೂ, ಗುರುಹಿರಿಯರ ಉಪದೇಶವನ್ನು ಅಲ್ಲಗಳೆಯುವದೇ ಸ್ವಾತಂತ್ರ್ಯವೆಂದೂ, ವೇಶ್ಯಾಂಗನೆಯರ ಗಾನನೃತ್ಯಗಳಿಗೆ ಲುಬ್ಧರಾಗುವದೇ ರಸಿಕತನವೆಂದೂ, ದೊಡ್ಡ ದೊಡ್ಡ ತಪ್ಪುಗಳನ್ನು ಉಪೇಕ್ಷಿಸುವದೇ ಮನಸ್ಸಿನ ದೊಡ್ಡಸ್ತನ ವೆಂದೂ, ಜನರು ಹೇಳಿದ್ದಾಗ್ಯೂ ತಾವು ಸುಮ್ಮನೇ ಕಣ್ಣು ಮುಚ್ಚಿಕೊಂಡಿರು ವದೇ ತಾಳ್ಮೆಯೆಂದೂ, ಮನಸ್ಸಿಗೆಬಂದಂತೆ ಮಾಡುವದೇ ಘನತೆಯೆಂದೂ,

ದೇವರ ಭಯವನ್ನು ತೊರೆದು ನಿಲ್ಲುವದೇ ಪರಾಕ್ರಮವೆಂದೂ, ಸ್ತ್ರೀಸ್ವಾತಕರ ಕೊಂಡಾಟವೇ ಕೀರ್ತಿಯೆಂದೂ, ಚಂಚಲತನವೇ ಉತ್ಸಾಹವೆಂದೂ, ತಾರತಮ್ಯವರಿಯದಿರುವದೇ ನಿಷ್ಪಕ್ಷಪಾತವೆಂದೂ ಅರಸರು ತಿಳಕೊಳ್ಳುತ್ತಾರೆ.

ರಾಜಕುಮಾರರೇ, ಇಂಥ ವಿಪರೀತಸ್ಥಿತಿಗೊಳಗಾದ ಅರಸರು ನಿಶ್ಚಯವಾಗಿ ಇಹಪರಸುಖಕ್ಕೆ ಎರವಾಗುವರು. ಸುಖೋಪಭೋಗಗಳನ್ನು ಭೋಗಿಸುತ್ತಿದ್ದರೂ ಈ ಲಕ್ಷ್ಮಿಯ ಸಂಗತಿಯಿಂದ ಒಂದು ಕ್ಷಣಮಾತ್ರವಾದರೂ ಆ ಅರಸರಿಗೆ ಸೊಗಸು ಇಲ್ಲ ಕಂಡಿರಾ! ಹಲವರು ಹಣದ ಕೆಟ್ಟಾಸೆಯಿಂದ, ಹಲವರು ದಿನಾಲು ಹೊಸ ಹೊಸ ಬಗೆಯ ಭೋಗಗಳನು ಭೋಗಿಸಬೇಕೆಂಬ ಮನಸ್ಸಿನ ಲವಲವಿಕೆಯಿಂದ, ಹಲವರು ಪರನಾಡುಗಳನು ಜಯಿಸಿ ಸಾರ್ವಭೌಮರಾಗಬೇಕೆಂಬ ಕಾಂಕ್ಷೆಯಿಂದ, ಕೆಲವರು ಸ್ವರಾಜ್ಯದೊಳಗಿನ ಒಳಸಂಚುಗಳನ್ನು ಮುರಿಯಬೇಕೆಂಬ ಆಲೋಚನೆಯಿಂದ, ಈ ಮೇರೆಗೆ ಒಂದಿಲ್ಲೊಂದು ಚಿಂತೆಯೊಳಗೆ ಕುದಿಯುತ್ತಲೂ, ಕುಕರ್ಮಗಳನ್ನು ಮಾಡುತ್ತಲೂ, ಅನ್ಯಾಯಗಳನ್ನು ಉಪೇಕ್ಷಿಸುತ್ತಲೂ, ಅವುಗಳ ಫಲಗಳನ್ನು ಅನುಭೋಗಿಸುತ್ತಲೂ ಕ್ಲೇಶಕ್ಕೊಳಗಾಗಿ ಕಡೆಗೆ ಪಶ್ಚಾತ್ತಾಪಪಡುತ್ತಾರೆ. ಬಹುತರವಾಗಿ ಅರಸರ ಸುತ್ತುಮುತ್ತು ದುಷ್ಟರೂ ದುರಾಚಾರಿಗಳೂ ನೆರೆದು, ಒಳಗೆ ಅವರ ಮೂರ್ಖತನಕ್ಕೆ ನಗುತ್ತಿದ್ದರೂ ಹೊರಗೆ ಮುಖಸ್ತುತಿಯನ್ನು ಮಾಡಿ ಅವರ ಚಿತ್ತವೃತ್ತಿಯನ್ನು ಸಂಪಾದಿಸುತ್ತಾರೆ. ಸ್ವಾರ್ಥಸಾಧಿಸುವ ಆ ದುಷ್ಟರ ಪದಿರನುಡಿಗಳಿಗೆ ಆ ಅರಸರು ಮರುಳಾಗಿ ಅವರು ಆಡುವ ಮಾತುಗಳೆಲ್ಲ ನಿಜವೆಂದು ನಂಬಿ, ವ್ಯರ್ಥವಾದ ಅಭಿಮಾನದಿಂದ ತಾವು ಮರಣಧರ್ಮಿಗಳೆಂಬದನ್ನು ಮರೆತು, ಕೇವಲ ದೇವರ ಅವತಾರವೆಂದು ತಿಳುಕೊಂಡು ಮಂದಿಗೆ ತಾವು ದರ್ಶನ ಕೊಡುವದೇ ಅವರ ಮೇಲಿನ ಅನುಗ್ರಹವೆಂತಲು, ಕಣ್ಣೆತ್ತಿ ಜನರನ್ನು ನೋಡುವದೇ ಅವರ ಮೇಲಿನ ಉಪಕಾರವೆಂತಲು, ಅವರಿಗೆ ಆಜ್ಞೆ ಮಾಡುವದೇ ವರ ಕೊಟ್ಟಹಾಗೆಂತಲು, ಅವರನ್ನು ಸೋಂಕುವದೇ ಅವರ ಪಾಪಪರಿಹಾರ ಮಾಡಿದಹಾಗೆಂತಲು, ತಿಳುಕೊಂಡು, ಮದದಿಂದ ಮುಂದುಗಾಣದವರಾಗಿ ದೇವರ ಭೀತಿಯನ್ನು ಬಿಟ್ಟುಬಿಡುತ್ತಾರೆ; ವಿದ್ವಾಂಸರ ಉಪಹಾಸ ಮಾಡುತ್ತಾರೆ; ಸದುಪದೇಶ ಮಾಡುವ ಹಿರಿಯರಿಗೆ ಮುದಿಹುಚ್ಚು ಹತ್ತಿ ಸುಮ್ಮನೇ ವಟವಟ ಹಚ್ಚುತ್ತಾರೆಂದು ಹಳಿಯುತ್ತಾರೆ; ಒಳಿತು ಹೇಳುವವರ ಮೇಲೆ ಕಣ್ಣುತೆಗೆಯುತ್ತಾರೆ;

ದೇವರನ್ನು ಸ್ತುತಿಸುವ ಹಾಗೆ ಯಾವಾಗಲೂ ಕೈಜೋಡಿಸಿಕೊಂಡು ತನ್ನ ಗುಣಗಳನ್ನು ಕೊಂಡಾಡಿ, ತಾವು ಅಂದದ್ದೇ ಪ್ರಮಾಣವೆಂದು ಅನ್ನುವವರಿಗೆ ಮಾತ್ರ ಮೆಚ್ಚುತ್ತಾರೆ. ಇಂಥವರೊಡನೆಯೇ ಅರಸರು ಪ್ರೀತಿಯಿಂದ ಮಾತಾಡುವರು; ಇಂಥವರಿಗೇ ಆಶ್ರಯಕೊಡುವರು; ಇಂಥ ಕೀಳರ ಗೆಳೆತನಮಾಡಿ, ಅವರು ಹೇಳಿದಹಾಗೆ ಕೇಳುವರು; ಬಹಳ ಹೇಳುವದೇನು, ರಾಜ್ಯವೆಂಬುವದು ಮುಳ್ಳಿನ ಹಾಸಿಗೆ; ತಾರುಣ್ಯವು ಮದ್ಯಕ್ಕಿಂತ ಮದ-ಗೊಳಿಸುವಂಥದು. ಆ ಕಾರಣ ಮಂದಿ ನಗದಂತೆ, ಸಾಧುಜನರು ಹಳಿಯದಂತೆ, ಗುರುಹಿರಿಯರು ಧಿಕ್ಕರಿಸದಂತೆ, ಇಷ್ಟಮಿತ್ರರಿಗೂ ವಿದ್ವಜ್ಜನರಿಗೂ ಖೇದವಾಗದಂತೆ ನೀವು ವರ್ತಿಸಬೇಕು, ಕಂಡಿರಾ! ಧೂರ್ತರನ್ನೂ, ದುಷ್ಟರನ್ನೂ ಜಾರರನ್ನೂ ಚೋರರನ್ನೂ ಹತ್ತಿರ ಬರಗೊಡಬಾರದು; ಇಲ್ಲದ ದುರಾಲೋಚನೆಗಳನ್ನು ಕಲಿಸಿ ಮೋಸಗೊಳಿಸುವ ಠಕ್ಕರು ಸಾವಿರಾರು ಮಂದಿಯುಂಟು. ಇವರಂತೇ ಹೆಂಗಸರ ಮೊಗದಾವರೆಗೂ ಏಕಾಂತದಲ್ಲಿ ಮಾತಾಡುವ ಅವರ ಸವಿನುಡಿಗಳಿಗೂ ಮರುಳಾಗಬಾರದು. ವೈರಿಗಳ ಉಕ್ಕಿನ ಬಾಣವನ್ನು ಎದೆಗೊಟ್ಟು ತಾಳಬಹುದು. ಕಾಮನ ಕೋಮಲವಾದ ಹೂಬಾಣದ ಹೊಡೆತವ ತಾಳುವದು ದುಸ್ತರವು. ನೀವು ಧೈರ್ಯಶಾಲಿಗಳು, ಮಹಾರಾಜರಂತೂ ಒಳ್ಳೇ ಪ್ರಯತ್ನದಿಂದ ದೊಡ್ಡ ದೊಡ್ಡ ಪಂಡಿತರನ್ನು ಇಟ್ಟು ನಿಮಗೆ ವಿದ್ಯೆ ಕಲಿಸಿದ್ದಾರೆ; ಐಶ್ವರ್ಯದಿಂದ ಮದಾಂಧರಾಗುವ ಅಶಿಕ್ಷಿತರಿಗೇ ಈ ಉಪದೇಶವು ಅವಶ್ಯವಾದದ್ದೆಂದು ನನ್ನ ಮನವರಿಕೆ ಇದ್ದರೂ ನಿಮ್ಮ ಗುಣಗಳನ್ನೂ ಸರಳತನವನ್ನೂ ಕಂಡು ಅತ್ಯಾನಂದಪಟ್ಟು ನಿಮ್ಮ ಕೂಡ ಇವೆರಡು ಮಾತುಗಳನ್ನಾಡದೆ ಇರುವದಾಗಲಿಲ್ಲ. ಇನ್ನು ಮಹಾರಾಜರು ನಿಮ್ಮನ್ನು ಯುವರಾಜಪಟ್ಟಕ್ಕೆ ಕೂಡಿಸುತ್ತಾರೆ; ಪಟ್ಟಾಭಿಷೇಕದ ಸಮಾರಂಭವಾದ ಬಳಿಕ ಪರಂಪರೆಯಿಂದ ನಡೆಯುತ್ತ ಬಂದ ಈ ರಾಜ್ಯಭಾರವನ್ನು ಸಾಗಿಸಿ, ಹಗೆಗಳನ್ನು ಗೆದ್ದು, ಆಪ್ತರನ್ನು ಉತ್ಕರ್ಷಗೊಳಿಸಿ, ಮಹಾರಾಜರು ಮೊದಲೇ ಜಯಿಸಿದ ಈ ಯಾವತ್ತು ಪೃಥ್ವಿಯನ್ನು ದಂಡು ತಕ್ಕೊಂಡುಹೋಗಿ ತಿರುಗಿ, ಸಪ್ತದ್ವೀಪಗಳನ್ನು ಕೈವಶಮಾಡಿಕೊಂಡು ಕೀರ್ತಿ ಪಡೆಯಬೇಕು" ಎಂದು ಉಪದೇಶಿಸಿ ಶುಕನಾಸನು ಸುಮ್ಮನಾದನು.

ಶುಕನಾಸನ ಮುಖದಿಂದ ಈ ಉಪದೇಶವನ್ನು ಕೇಳಿ ಚಂದ್ರಾಪೀಡನು

ಪ್ರಸನ್ನಹೃದಯನಾಗಿ ತನ್ನ ಅರಮನೆಗೆ ಬಂದನು. ಮುಂದೆ ಒಂದು ಶುಭ ದಿವಸ ಅರಸನು ಯಾವತ್ತು ಮಾಂಡಲಿಕ ಭೂಪಾಲರನ್ನೂ ವಜೀರ ಉಮರಾವರನ್ನೂ ಕೂಡಿಸಿ, ಶುಕನಾಸ ಮುಂತಾದ ಮಂತ್ರಿಗಳಿಂದ ಸರ್ವ ಸಮಾರಂಭವನ್ನು ನೆರವೇರಿಸಿ ತಾನು ಸ್ವತಃ ಅಭಿಷೇಕಕಲಶವನ್ನು ತಕ್ಕೊಂಡು ವೇದಶಾಸ್ತ್ರೋಕ್ತ ಪ್ರಕಾರ ಚಂದ್ರಾಪೀಡನಿಗೆ ಯೌವರಾಜ್ಯಾ-ಭಿಷೇಕ ಮಾಡಿದನು. ಆಗ ಮೇರುಪರ್ವತದ ಶಿಖರದ ಮೇಲೆ ಪೌರ್ಣಿಮಾ ಚಂದ್ರನು ಶೋಭಿಸುವಂತೆ ಕಾಂಚನಮಯವಾದ ಸಿಂಹಾಸನದ ಮೇಲೆ ಪೃಥ್ವೀಪತಿಯಾದ ಚಂದ್ರಾಪೀಡನು ಸರ್ವರಿಗೂ ಕಂಗೊಳಿಸಿದನು. ಊರತುಂಬ ಜಯ ಜಯ ಧ್ವನಿಯಾಯಿತು. ಪುರಜನರು ಪೂರ್ವದಲ್ಲಿಯೇ ಮನೆಮನೆಗೆ ಗುಡಿ ತೋರಣಗಳನ್ನು ನಿಲ್ಲಿಸಿ ಬೀದಿಬೀದಿಗೆ ಕುಂಕುಮೋದಕದ ತಳಿಗೊಟ್ಟಿದ್ದರು. ಈ ಮೇರೆಗೆ ಹಲವು ದಿನ ಆನಂದೋತ್ಸಾಹಗಳಾದ ಬಳಿಕ ಚಂದ್ರಾಪೀಡನು ರಾಜಾಜ್ಞೆಯಿಂದ ಚತುರಂಗ ಸೇನೆಸಹಿತ ವೈಶಂಪಾಯನ-ನನ್ನು ಸಂಗಡ ಕರಕೊಂಡು, ಯಾವತ್ತು ಅರಸರಿಂದ ಕಪ್ಪಗಾಣಿಕೆ ತಕ್ಕೊಂಡು ಬರಬೇಕೆಂದು ಉಜ್ಜಯಿನೀ ಪಟ್ಟಣದಿಂದ ಹೊರಟನು. ಮುಂದೆ ಆತನು ಕ್ರಮದಿಂದ ಮೂಡ, ತೆಂಕ, ಪಡುವ, ಬಡಗ ದಿಕ್ಕುಗಳಲ್ಲಿ ಮಲೆತು ನಿಂತ ಅರಸರನ್ನು ಜಯಿಸಿ, ಅವರಿಂದ ಕಪ್ಪಗಾಣಿಕೆಯನ್ನು ತಕ್ಕೊಳ್ಳುತ್ತ ಮೂರು ವರ್ಷದೊಳಗೆ ಪೃಥ್ವೀಪ್ರದಕ್ಷಣೆ ಮಾಡಿ, ಕೈಲಾಸಪರ್ವತದ ಹತ್ತರ ಹೇಮಜಟನೆಂಬ ಕಿರಾತನಾಳುವ ಸುವರ್ಣಪುರಕ್ಕೆ ಬಂದು, ಅದನ್ನು ಕೈವಶ ಮಾಡಿಕೊಂಡು, ತನ್ನ ದಣಿದ ದಂಡಿಗೆ ವಿಶ್ರಾಂತಿಯಾಗಲೆಂದು ಅಲ್ಲಿಯೇ ಬಿಡಾರಗೊಟ್ಟು, ಕೆಲವು ದಿನ ನಿಂತುಕೊಂಡನು.

ಅಲ್ಲಿ ದಂಡು ಇಳಿದಾಗ ಒಂದು ದಿವಸ ಚಂದ್ರಾಪೀಡನು ಬೇಟೆಯಾಡ ಹೊರಟು, ಹೋಗಹೋಗುತ್ತ ಕಾನನದೊಳಗೆ ಕಿನ್ನರ ದಂಪತಿಗಳನ್ನು ಕಂಡು ಸೋಜಿಗಗೊಂಡು, ಅವುಗಳನ್ನು ಹಿಡಿಯಬೇಕೆಂಬ ಲವಲವಿಕೆಯಿಂದ ಅವುಗಳ ಹತ್ತರ ಹೋದನು. ಚಂದ್ರಾಪೀಡನನ್ನು ನೋಡಿದ ಕೂಡಲೆ ಆ ಕಿನ್ನರ ಮಿಥುನಗಳು ಓಡಹತ್ತಿದವು. ಚಂದ್ರಾಪೀಡನು ತನ್ನ ಇಂದ್ರಾಯುಧವನ್ನು ಅತಿ ತ್ವರೆಯಿಂದ ಓಡಿಸಿ, "ಇಕೋ ಈಗ ಸಿಗುತ್ತವೆ, ಇಕೋ ಹಿಡಿದೆ," ಎಂಬ ಆಶೆಯಿಂದ ಅವುಗಳ ಬೆನ್ನುಹತ್ತಿ ತನ್ನ ದಂಡು ಬಿಟ್ಟು ಒಂದೆರಡು ಗಳಿಗೆಯೊಳಗೇ ಐವತ್ತು ಗಾವುದ ದೂರ ಹೋದನು. ಅಷ್ಟರೊಳಗೆ

ಆ ಕಿನ್ನರ ದಂಪತಿಗಳು ಕೈಯೊಳಗಿಂದ ಪಾರಾಗಿ ಎದುರಿಗಿದ್ದ ಒಂದು ಬಹು ಎತ್ತರವಾದ ಶಿಖರದ ಮೇಲೆ ಏರಿ ಹೋದವು. ಅದನ್ನು ಕಂಡು ಚಂದ್ರಾ-ಪೀಡನು ಕುದುರೆಯನ್ನು ನಿಲ್ಲಿಸಿ ಮನದೊಳಗೆ— ಇನ್ನು ಮೇಲೆ ಇವು ತನ್ನ ಕೈವಶವಾಗುವ ಯತ್ನ ಮೀರಿತು; ವಿಚಾರಗೆಟ್ಟು ವ್ಯರ್ಥವಾಗಿ ಇವುಗಳ ಬೆನ್ನುಹತ್ತಿ ಬಂದೆನು! ನನ್ನಿಂದ ಮೂರ್ಖತನವಾಯಿತು! ಈ ಕಿನ್ನರ ದಂಪತಿಗಳು ನನಗೆ ಯಾತಕ್ಕೆ ಬೇಕಾಗಿದ್ದವು? ಇವು ಸಿಕ್ಕಿದ್ದರೂ ಅಷ್ಟೇ ಸಿಗದೆ ಹೋಗಿದ್ದರೂ ಅಷ್ಟೇ! ಇಂಥ ನಿಷ್ಫಲವಾದ ಕೆಲಸಕ್ಕೆ ಮನಸ್ಸು ಹಾಕಿ ದಂಡು ಬಿಟ್ಟು ಈ ದಟ್ಟವಾದ ಘೋರಾರಣ್ಯದೊಳಗೆ ಮೋಸಗೊಂಡು ಇಷ್ಟು ದೂರ ಬಂದೆನು; ಸುವರ್ಣಪುರವೆತ್ತ ಉಳಿಯಿತೋ ನಾನೆತ್ತ ಬಂದೆನೋ ನನ್ನದು ನನಗೇ ತಿಳಿಯದ ಹಾಗಾಯಿತು! ಇನ್ನು ಈ ಕಟ್ಟಡವಿಯೊಳಗೆ ದಾರಿಯ ತೋರಿಸುವವರು ಯಾರು? ಶಿವಶಿವಾ ಎಂಥ ಪಡ್ಡತನವಾಯಿತು! ಈ ಪೃಥ್ವಿಯ ಬಡಗಣ ಮೇರೆಯಲ್ಲಿ ಸುವರ್ಣಪುರವುಂಟೆಂತಲೂ, ಅಲ್ಲಿಂದ ಮುಂದೆ ಒಂದು ನಿರ್ಮಾನುಷವಾದ ಅರಣ್ಯವು ಹತ್ತುತ್ತದೆಂತಲೂ ಅದರ ಆಚೆಗೆ ಕೈಲಾಸಪರ್ವತವುಂಟೆಂತಲೂ ಹೇಳುತ್ತಾರೆ; ಇದೇ ಕೈಲಾಸ ಪರ್ವತವೋ ಏನೋ! ಇನ್ನು ನಾನು ದಕ್ಷಿಣಕ್ಕೆ ತಿರುಗಿ ನೆಟ್ಟಗೇ ಹೋಗ ತಕ್ಕದ್ದು. "ತನ್ನ ಮೂರ್ಖತನದ ಫಲವನ್ನು ತಾನೇ ಅನುಭೋಗಿಸಬೇಕು" ಎಂದು ಚಿಂತಿಸಿ ಎಡಗೈಯಿಂದ ಕಡಿವಾಣ ಜಗ್ಗಿ ಕುದುರೆಯನ್ನು ತಿರುಗಿಸಿ, ಮರಳಿ ಮನದೊಳಗೆ-- "ಮಧ್ಯಾಹ್ನವಾಯಿತು, ಬಿಸಿಲೇರಿ ನೆಲ ಕಾಯಿತು, ಕುದುರೆಯು ದಣಿಯಿತು; ಇದಕ್ಕೆ ಮೇವು ತಿನಿಸಿ ನೀರು ಕುಡಿಸಿ, ತಾನೂ ದಣುವಾರಿಸಿ ಕೊಳ್ಳಬೇಕು" ಎಂದು ಆಲೋಚಿಸಿ, ಸುತ್ತುಮುತ್ತು ನೋಡು ವಷ್ಟರಲ್ಲಿ ಕೆರೆಯೊಳಗೆ ಕ್ರೀಡಿಸಿ ಆದೇ ಹೋದ ಕಾಡಾನೆಗಳ ಹೆಜ್ಜೆಗಳನ್ನೂ, ಆ ಆನೆಗಳು ಸೊಂಡಿಯಿಂದ ಬೇರು ಸಹಿತ ಕಿತ್ತುಕಿಮ್ಮ ಚೆಲ್ಲಿ ತುಳಿದಾಡಿದ ತಾವರೆಗಳನ್ನೂ, ಆ ರಸದಿಂದ ತೊಯ್ದು ನೆನೆದ ನೆಲವನ್ನೂ, ಎಡಬಲ ಪ್ರದೇಶಗಳಲ್ಲಿ ಹುಟ್ಟಿದ ಎಳೆಯ ಹುಲ್ಲನ್ನೂ, ಸುವಾಸನೆಗೆ ಸೊಕ್ಕಿದ ತುಂಬಿ ಗಳು ಮೊರೆದೆರಗುವ ಹೂಗೊಂಚಲುಗಳನ್ನೂ, ದಾರಿಗುಂಟ ಬಿದ್ದ ಮೆಲ್ಲಿಲೆ ಗಳನ್ನೂ, ಕಾಡಾನೆಗಳ ಕಿವಿಯೊಳಗಿಂದ ಸೋರಿದ ಸುಗಂಧದಿಂದ ನೆನೆದು ಸುಗಂಧಮಯವಾದ ಮಾರ್ಗವನ್ನೂ ನೋಡಿ, ಸಮೀಪದಲ್ಲಿಯೇ ಸರೋವರ ವಿದ್ದೀತೆಂದು ಮನದೊಳಗೆಣಿಸಿ ಚಂದ್ರಾಪೀಡನು ಆದೇ ಮಾರ್ಗ ಹಿಡಿದು

ಹೋಗಲು— ಅಲ್ಲಲ್ಲಿಗೆ ಹಲವು ತರದ ಕಲ್ಲುಗಳು ಬಿದ್ದಿದ್ದವು, ಅವುಗಳ ಮೇಲೆಲ್ಲ ಪಾಷಾಣಭೇದಿ ಎಂಬ ಬಳ್ಳಿಗಳು ಚಲ್ಲವರಿದು ಹಬ್ಬಿದ್ದವು; ಶಿಲಾಜಿತು ವೃಕ್ಷಗಳ ರಸದಿಂದಲೂ ಗುಗ್ಗುಳ ಗಿಡಗಳ ರಸದಿಂದಲೂ ತೊಯ್ದು ಅಲ್ಲಿಯ ಕಲ್ಲುಗಳು ಎಣ್ಣೆಮಜ್ಜನ ಮಾಡಿದಂತೆ ಕಂಗೊಳಿಸುತ್ತಿರುವವು. ಮಳಲಮಾರ್ಗದಲ್ಲೆಲ್ಲ ಕಸ್ತೂರೀಮೃಗಗಳ ಹೆಜ್ಜೆಗಳೂ ಕಾಡಾಕಳ ಹೆಜ್ಜೆಗಳೂ ಮೂಡಿರುವವು; ಕಾಡಮಿಕಗಳು ಕೆದರಿದ ಅರವಾಳದ ಪುಡಿಯು ಬಿದ್ದ ಮಾರ್ಗವು ಹೊಂಬಣ್ಣದಿಂದ ಒಪ್ಪುತ್ತಿರುವದು; ಕೆಲಕಡೆಯಲ್ಲಿ ಗಂಧಕದ ಉಗ್ರವಾಸನೆಯು ಬರುತ್ತಿರುವದು; ಕೆಲವು ಗವಿಗಳೊಳಗೆ ವನಮನುಷ್ಯರು ಕುಳಿತಿರುವರು; ಬಿಕ್ಕಟ್ಟಿನ ಸ್ಥಳಗಳಲ್ಲಿ ಜೀವಂಜೀವಕ ಪಕ್ಷಿಗಳು ಧ್ವನಿ ಮಾಡುತ್ತಿದ್ದವು; ಕೆಲವೆಡೆಗಳಲ್ಲಿ ಬೆತ್ತದ ಮೆಳೆಗಳೂ ಬಿದಿರ ಮೆಳೆಗಳೂ ಗಿಡದ ಗುಂಪುಗಳೂ 'ಜಿರ್' ಅನ್ನುತ್ತಿರುವವು. ಇಂಥ ಅಧಿಸುಂದರನೀಯವಾದ ಕೈಲಾಸ ಪರ್ವತದ ಈಶಾನ್ಯ ದಿಕ್ಕಿನ ಕಾಲದಾರಿಯು ಹಿಡಿದು ಆ ಗಿಡದ ಗುಂಪಿನೊಳಗೆ ಹೋಗಲು, ಹೂಗೊಳದ ನೀರಮೇಲಿಂದ ಹಾಯ್ದು ಮಂದವಾದ ತಂಗಾಳಿಯು ಹೂವುಗಳೊಳಗಿನ ತನಿಗಂಪು ತಂದು, ಮೆಲ್ಲಗೆ ಮೈಗೆ ಸೋಂಕಿ, ಮೂಗಿಗೆ ಸುಗಂಧವನ್ನು ಬೀರಿ, ಮನಸ್ಸಿಗೆ ಆಹ್ಲಾದಗೊಳಿಸಿ ಸುಳಿಯಿತು; ಅರಳಿದ ತಾವರೆಗಳೊಳಗಿನ ಮಕರಂದ ರಸವನ್ನು ಕುಡಿದು ಮತ್ತವಾದ ಮರಾಳ ಪಕ್ಷಿಗಳ ಕಿಲಕಿಲಾಟವು ಕಿವಿಗೆ ಬಿತ್ತು. ಈ ಪರಿಗೆ ಮನೋಹರವಾದ ಬನದೊಳಗಿಂದ ಮುಂದಕ್ಕೆ ಹೋಗಲು, ತ್ರೈಲೋಕ್ಯ ಲಕ್ಷ್ಮಿಯು ತನ್ನ ಸೌಂದರ್ಯವನ್ನು ನೋಡಿಕೊಳ್ಳುವದಕ್ಕೆ ಮಾಡಿಟ್ಟ ಕನ್ನಡಿಯೋ; ಭೂದೇವಿಯು ಕ್ರೀಡಿಸುವದಕ್ಕೆ ನಿರ್ಮಾಣ ಮಾಡಿದ ಸ್ಫಟಿಕದ ನೆಲಮನೆಯೋ; ಮಹಾಸಾಗರಗಳ ಉಗಮಸ್ಥಾನವೋ; ಉದಕದ ಅವತಾರವನ್ನು ತಾಳಿ ನೆಲಕ್ಕಿಳಿದ ಆಕಾಶವೋ; ಕರಗಿ ಮಡುಗಟ್ಟಿದ ಚಳಿ ಬೆಟ್ಟವೋ ; ಒಬ್ಬುಳಿಗೂಡಿ ಸರೋವರದ ರೂಪ ತಾಳಿದ ತ್ರಿಭುವನದ ಪುಣ್ಯ ರಾಶಿಯೋ ಏನೋ ಅನ್ನುವ ಹಾಗೆ ತುಂಬಿ ತುಳುಕುವಂಥ ವಿಸ್ತೀರ್ಣವಾದದ್ದೊಂದು ನೆಲೆಯಿಲ್ಲದ ತಂಗೊಳವು ಅತಿ ರಮಣೀಯವಾಗಿ ಕಂಗೊಳಿಸಿತು. ಆ ಸರೋವರದ ನೀರು ಅತಿ ಸ್ವಚ್ಛವಿದ್ದುದರಿಂದ ತಳದೊಳಗಿನ ವಸ್ತುಗಳೆಲ್ಲ ಸ್ಪಷ್ಟವಾಗಿ ಕಾಣಿಸುತ್ತಿರುವವು. ಇದೇ ಕಾರಣದಿಂದ ಅದಕ್ಕೆ ಅಚ್ಛೋದ ಸರೋವರವೆಂಬ ಹೆಸರು ಪ್ರಾಪ್ತವಾಗಿತ್ತು. ಗಾಳಿಯ ಹೊಡತಕ್ಕೇಳುವ

ತೆರೆಗಳಿಂದ ಸಿಡಿವ ನೀರ್ವನಿಗಳೊಳಗೆ ಸೂರ್ಯನ ಕಿರಣಗಳು ಪ್ರತಿಬಿಂಬಿಸಿ, ಇಂದ್ರಧನುಷ್ಯದ ಶೋಭೆಯನ್ನುಂಟು ಮಾಡುತ್ತಿರುವವು. ಇದರ ದಡದಲ್ಲಿ ಕಡುದಟ್ಟವಾಗಿ ಬೆಳೆದ ತಮಾಲವೃಕ್ಷಗಳ ನೀಲಚ್ಛವಿಯನ್ನು ನಿರೀಕ್ಷಿಸಿ, ಇರುಳೆಂದು ಮರಳುಗೊಂಡು ಚಕ್ರವಾಕ ಪಕ್ಷಿಗಳು ಹಗಲೇ ವಿಯೋಗದುಃಖ ವನ್ನು ಅನುಭೋಗಿಸುವವು. ಎಷ್ಟು ಬಣ್ಣಿಸಿದರೂ ಈ ಸರೋವರದ ಮಹಿಮೆ ತೀರದು! ಇದರಲ್ಲಿ ವಾಲಖಿಲ್ಯ ಋಷಿಗಳು ಅನೇಕ ಸಾರೆ ಸಂಧ್ಯೋ-ಪಾಸನೆ ಮಾಡಿದ್ದಾರೆ; ಸಾವಿತ್ರಿಯು ಎಷ್ಟೋ ಸಾರೆ ಇದರೊಳಗಿನ ಕಮಲ ಗಳನ್ನು ದೇವತಾರ್ಚನೆಗೆ ಎತ್ತಿಕೊಂಡು ಒಯ್ದಿದ್ದಾಳೆ; ಪಾರ್ವತೀ ಪರಮೇ-ಶ್ವರರ ಸ್ನಾನದಿಂದಲೂ ಸಪ್ತಋಷಿಗಳ ಅಘಮರ್ಷಣದಿಂದಲೂ ಇದರೊಳಗಿನ ಉದಕವು ಪವಿತ್ರವಾಗಿದೆ. ಇಂದ್ರನ ಐರಾವತವೂ ಯಮನ ಕೋಣವೂ ಇದರ ದಂಡೆಯ ಮೇಲೆ ಯಾವಾಗಲೂ ವಿನೋದಿಸುತ್ತವೆ. ಎಷ್ಟೆಂದು ಇದರ ಸೌಂದರ್ಯವನ್ನು ವರ್ಣಿಸಲಿ! ನೋಡಿದತ್ತೆಲ್ಲ ಕೆಂದಾವರೆ ಹೊಂದಾ ವರೆ ಬೆಳ್ದಾವರೆಗಳು ವಿಕಸಿತವಾಗಿ ಶೋಭಿಸುತ್ತವೆ; ಅವುಗಳ ಮಕರಂದಕ್ಕೆ ಭ್ರಮರಗಳೆರಗಿ ಝೇಂಕಾರ ಸ್ವರ ಮಾಡುತ್ತವೆ; ನಡುನೀರೊಳಗೆ ದೊಡ್ಡ ದೊಡ್ಡ ಮೊಸಳೆಗಳೂ, ಆನೆಗಳೂ, ಮೀನುಗಳೂ ಆನಂದದಿಂದ ಆಡುತ್ತವೆ; ದಂಡೆಯ ಮೇಲೆ ಹಲವು ತರದ ಹೂವಿನ ಗೊಂಚಲುಗಳು ಒಪ್ಪುತ್ತವೆ; ಕ್ರೌಂಚಪಕ್ಷಿಗಳು ಕಿಲಿಕಿಲಿಸುತ್ತವೆ; ನವಿಲುಗಳು ನರ್ತಿಸುತ್ತವೆ; ಮರಗಳ ಟೊಂಗೆಗಳ ಮೇಲಿಂದ ಮಂಗಗಳು ನೀರಮಡುಗಳೊಳಗೆ ಧಡಧಡನೆ ಹಾರು-ತ್ತವೆ. ನೀರು ಕುಡಿಯ ಬಂದ ವನ್ಯಮೃಗಗಳು ಭೋರ್ಗರೆಯುತ್ತವೆ; ಇದನ್ನೆಲ್ಲ ಕಣ್ಣಾರೆ ನೋಡಿದರೆ, ಕಿವಿಮುಟ್ಟಿ ಕೇಳಿದರೆ ಮನಸ್ಸಿಗೆ ಆಹ್ಲಾದವೂ ಅಂಜಿಕೆಯೂ ಒಮ್ಮೆಲೆ ಉಂಟಾಗುವವು. ಇಂಥ ಅಚ್ಛೋದ ಸರೋವರ ವನ್ನು ನೋಡಿದ ಕೂಡಲೆ ದಣಿದ ಶ್ರಮವು ಪರಿಹಾರವಾಗಿ ಚಂದ್ರಾಪೀಡನು ಆನಂದಭರಿತನಾಗಿ ಮನದೊಳಗೆ—"ಆ ಕಿನ್ನರ ಮಿಥುನಗಳ ಬೆನ್ನು ಹತ್ತಿದ್ದು ನಿರರ್ಥಕವಾದರೂ ಈ ಸರೋವರಕ್ಕೆ ನಾನು ಬಂದದ್ದೊಂದು ಸಾರ್ಥಕ ವಾಯಿತು. ಈ ತಂಗೊಳವನ್ನು ನೋಡಿದ್ದರಿಂದ ನನ್ನ ಕಣ್ಣುಗಳ ಪುಣ್ಯವು ಇಂದಿಗೆ ಸಫಲವಾಯಿತು. ಅಹಹಾ ಎಂಥ ಮನೋಹಾರಕವಿದು!" ಎಂದು ಚಂದ್ರಾಪೀಡನು ಆ ಸರೋವರದ ಸಮೀಪಕ್ಕೆ ಹೋಗಿ, ಅದರ ದಕ್ಷಿಣ ತಟಾಕದ ಮೇಲೆ ಕುದುರೆಯಿಳಿದು, ಅದರ ಬೆನ್ನ ಮೇಲಿನ ಹಲ್ಲಣ ತೆಗೆದು

ಆ ಇಂದ್ರಾಯುಧವನ್ನು ಸರೋವರದೊಳಗೆ ಒಯ್ದು ಸ್ವಚ್ಛವಾಗಿ ಮೈ ದೊಳೆದು, ನೀರು ಕುಡಿಸಿ, ಮೇಲೆ ತಂದು ಒಂದು ಗಿಡಕ್ಕೆ ಕಟ್ಟಿ, ಸುತ್ತು ಮುತ್ತು ಹುಟ್ಟಿದ ಎಳೆಯೆಳೆ ಕರಿಕೆಯನ್ನು ಕಿತ್ತು ಅದರ ಮುಂದೆ ಹಾಕಿ ತಾನೂ ಆ ಸರೋವರದೊಳಗಿಳಿದು ಸ್ನಾನ ಮಾಡಿ, ನೀರು ಕುಡಿದು ಒಳಗಿನ ಕೆಲವು ಕಮಲ ಪುಷ್ಪಗಳನ್ನು ಕೈಯೊಳಗೆ ಹಿಡಿದುಕೊಂಡು ಮೇಲೆ ಬಂದು, ಒಂದು ಗಿಡದ ನೆಳಲಿಗೆ ಕುಳಿತುಕೊಂಡು ಆ ಸರೋವರವನ್ನು ನೋಡುತ್ತ ಮನದೊಳಗೆ— " ಅಹಹಾ ಎಂಥ ರಮಣೀಯ ಸರೋವರವಿದು! ಎಷ್ಟು ತೋಷದಾಯಕವಿದು! ಈ ತಂಗೊಳದ ನೈರ್ಮಲ್ಯಕ್ಕೆ ನನ್ನ ಕಣ್ಣುಗಳು ಇಲ್ಲಿಯೇ ಕೀಲಿಸುತ್ತವೆ; ಕಾವೇರಿದ ನನ್ನ ಮೈಯೆಲ್ಲ ಇದರ ಸಂಪರ್ಕಸುಖ ದಿಂದ ತಂಪಾಯಿತು; ಈ ಹೂಗಳ ಸುವಾಸನೆಯಿಂದ ಘ್ರಾಣೇಂದ್ರಿಯವು ತೃಪ್ತವಾಯಿತು. ಹಂಸಪಕ್ಷಿಗಳ ಕೂಜಿತ ಧ್ವನಿಯು ಕಿವಿಗೆ ಇಂಪಾಯಿತು; ಈ ಉದಕದ ಸ್ವಾದವೆಷ್ಟೆಂದು ಹೇಳಲಿ! ಎಷ್ಟು ಕುಡಿದರೂ ಸಾಕಾಗದು " ಎಂದು ಒಂದೆರಡು ಗಳಿಗೆ ವಿಶ್ರಮಿಸುವಷ್ಟರಲ್ಲಿ ಆ ಸರೋವರದ ಉತ್ತರ ದಿಕ್ಕಿನಲ್ಲಿ ಸ್ವಲ್ಪ ದೂರದಿಂದ ಗಾಯನದ ಸುಸ್ವರವು ಕೇಳಬಂತು. ನೋಡು-ತ್ತಾನೆ, ಇಂದ್ರಾಯುಧವು ಹುಲ್ಲು ತಿನ್ನುವದನ್ನು ಬಿಟ್ಟು, ಕಿವಿ ನಿಗರಿಸಿಕೊಂಡು ಆ ಗಾಯನದ ಮಧುರ ಸ್ವರವು ಬರುವತ್ತ ಮೋರೆಮಾಡಿ ಮನಸುಗೊಟ್ಟು ಧ್ವನಿಯನ್ನು ಆಲಿಸುತ್ತ ನಿಂತಿದೆ. ಮನುಷ್ಯರ ಸಂಚಾರವಿಲ್ಲದಂಥ ಈ ಪ್ರದೇಶದಲ್ಲಿ ಯಾರು ಹಾಡುತ್ತಾರೊ ಎಂದು ಕೌತುಕದಿಂದ ಚಂದ್ರಾಪೀಡನು ಎದ್ದು ಆ ಗಾಯನದ ಸ್ವರವು ಬರುವತ್ತ ಹುಬ್ಬುಗೈಹಚ್ಚಿ ನೋಡಿದನು. ಆದರೆ ಆ ಧ್ವನಿಯ ಉತ್ಪತ್ತಿಸ್ಥಾನವು ಆತನಿಗೆ ಕಾಣಿಸಲಿಲ್ಲ. ಅದನ್ನು ಗೊತ್ತುಹಚ್ಚಬೇಕೆಂದು ಚಂದ್ರಾಪೀಡನು ಇಂದ್ರಾಯುಧದ ಮೇಲೆ ಕುಳಿತು ಕೊಂಡು ಆ ಸರೋವರದ ಪಡುವಣ ಪ್ರದೇಶದ ಸಪ್ತಪರ್ಣ, ಕದಳಿ, ಬಕುಳ, ಲವಂಗ, ತಾಳ, ಹಿಂತಾಳ, ನಾರಿಕೇಳ, ತಮಾಲತರುಗಳ ಬನಗಳೊಳಗಿಂದ ಹಾಯ್ದು ಆ ಗಾಯನದ ಸ್ವರವು ಬರುವತ್ತ ನಡೆದನು. ಮುಂದೆ ಹೋಗ ಹೋಗುತ್ತ ಚಂದ್ರಪ್ರಭೆ ಎಂಬ ಪ್ರದೇಶದ ಮುಂಭಾಗದಲ್ಲಿ ಒಂದು ಭವ್ಯ-ವಾದ ಸ್ಫಟಿಕದ ಶಿವಾಲಯವನ್ನು ಕಂಡನು. ಅದರೊಳಗೆ ನಾಲ್ಕು ದಿಕ್ಕಿಗೂ ನಾಲ್ಕು ಶಿವಮೂರ್ತಿಗಳಿದ್ದು, ಅವುಗಳೊಳಗಿನ ದಕ್ಷಿಣದಿಕ್ಕಿನ ಮೂರ್ತಿಯ ಮುಂದೆ ಹದಿನೆಂಟು ವರ್ಷದ ಹರೆಯದ ಸುಂದರ ಕನ್ನಿಕೆಯೊಬ್ಬಳು

ಬ್ರಹ್ಮಾಸನ ಹಾಕಿಕೊಂಡು, ಮೈಗೆಲ್ಲ ಭಸ್ಮವನ್ನು ಲೇಪಿಸಿಕೊಂಡು ಕೊರಳೊಳಗೆ ರುದ್ರಾಕ್ಷಮಾಲೆಯನ್ನು ಧರಿಸಿಕೊಂಡು, ಮಂದಾಕಿನಿಯೊಳಗಿನ ಇಂದೀವರಗಳಿಂದ ಪರಮೇಶ್ವರನನ್ನು ಪೂಜಿಸಿ, ತೊಡೆಯ ಮೇಲೆ ವೀಣೆಯನ್ನಿಟ್ಟುಕೊಂಡು ಶ್ರುತಿಗೊಳಿಸಿ, ಕೊರಳು ಬೆರಳು ಸಂಚುಗೂಡಿ ಪಂಚಮ-ದಿಂಚರದೊಡನೆ ಪ್ರಭುವಿನ ಮಹಿಮೆಗಳನ್ನು ಹಾಡುತ್ತ ಆ ಜಗನ್ನಿಯಂತನ ಧ್ಯಾನದಲ್ಲಿ ತತ್ಪರಳಾಗಿದ್ದಳು. ಚಂದ್ರಾಪೀಡನು ಇದನ್ನು ನೋಡಿ ಕುದುರೆಯಿಂದಿಳಿದು ಭಕ್ತಿಭಾವದಿಂದ ಶಿವಮೂರ್ತಿಗೆ ಶಿರಬಾಗಿ ದಂಡಪ್ರಣಾಮಂಗೈದು, ಆ ಕನ್ನಿಕೆಯನ್ನು ಕಣ್ಣೆವೆ ಹಳಚದೆ ದಿಟ್ಟಿಸಿ ನೋಡುತ್ತ ನಿಂತು-ಕೊಂಡು, ಅವಳ ಸೌಂದರ್ಯಕ್ಕೂ ತಪಃಪ್ರಭೆಗೂ ವಿಸ್ಮಿತನಾಗಿ ಮನದೊಳಗೆ—"ಈ ಜಗತ್ತಿನಲ್ಲಿ ಪ್ರಾಣಿಮಾತ್ರಕ್ಕೆ ಯಾವಾಗ ಏನು ಬಂದೀತೆಂಬುವದು ನಿಯಮುದ್ದಲ್ಲ. ಬೇಟೆಯಾಡಲಿಕ್ಕೆಂದು ನಾನು ಹೊರಟು ಕಿನ್ನರ ದಂಪತಿಗಳನ್ನು ಕಂಡೆನು. ಅವುಗಳ ಬೆನ್ನು ಹತ್ತಿ ಈ ನಿರ್ಮಾನುಷ ಪ್ರದೇಶಕ್ಕೆ ಬಂದೆನು. ಇಲ್ಲಿ ತೃಷ್ಣೆಯಿಂದ ಬಳಲಿ ಬಾಯಾರಿ ನೀರು ಹುಡುಕುವದರೊಳಗೆ ಸಿದ್ಧಪುರುಷರಿಂದ ಸೇವ್ಯವಾದ ಅಚ್ಛೋದ ಸರೋವರವನ್ನು ಕಂಡೆನು. ಅದರ ದಂಡೆಯ ಮೇಲೆ ದಣುವಾರಿಸಿಕೊಳ್ಳಬೇಕೆಂದು ಕುಳಿತಾಗ ಈ ಮಧುರ ಗಾಯನ ಧ್ವನಿಯು ಕಿವಿಗೆ ಬಿತ್ತು. ಈ ಸ್ವರವು ಎಲ್ಲಿಂದ ಬರುತ್ತದೋ ಎಂದು ಶೋಧಿಸುತ್ತಿರಲಾಗಿ, ಮಾನವರು ದರ್ಶನ ತಕ್ಕೊಂಡೇವೆಂದರೆ ದುರ್ಲಭಳಾದ ಈ ಕನ್ನಿಕೆಯು ಕಂಗೊಳಿಸಿದಳು. ಕಾಯಕಾಂತಿಯನ್ನು ನೋಡುತ್ತಿರಲಾಗಿ, ಇವಳು ದೇವಕನ್ನಿಕೆ ಇರಬಹುದಾಗಿ ತೋರುತ್ತಾಳೆ. ಮರ್ತ್ಯಲೋಕದವರಿಗೆ ಇಂಥ ಗಾಯನವೆಲ್ಲಿಯದು !" ಎಂದು ಆಲೋಚಿಸುತ್ತ ಚಂದ್ರಾಪೀಡನು ಅದೇ ಶಿವಾಲಯದೊಳಗೆ ಹೊಕ್ಕು, ಒಂದು ಕಂಬದ ಹತ್ತಿರ ಆಕೆಯ ಗಾಯನ ಮುಗಿಯುವ ಮಾರ್ಗ ನಿರೀಕ್ಷಿಸುತ್ತ ಕುಳಿತು-ಕೊಂಡನು. ಗಾಯನ ಮುಗಿದ ಬಳಿಕ ಆಕೆ ಎದ್ದು ದೇವರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಚಂದ್ರಾಪೀಡನನ್ನು ನೋಡಿ—"ಸ್ವಾಮಿ, ಇಂಥ ಅಮಾನುಷ ಸ್ಥಳಕ್ಕೆ ತಾವು ಏನು ಕಾರಣ ಬಂದಿರಿ ? ನನ್ನ ಸಂಗಡ ಬರಬೇಕು. ನಾನು ಮಾಡುವ ಅತಿಥ್ಯಸತ್ಕಾರವನ್ನು ದಯಮಾಡಿ ಅಂಗೀ-ಕರಿಸಬೇಕು" ಎಂದಳು. ಈ ವಿನಯೋಕ್ತಿಗಳನ್ನು ಕೇಳಿ ಚಂದ್ರಾಪೀಡನು ಪರಮ ಹರ್ಷಿತನಾಗಿ ಎದ್ದು ಭಕ್ತಿಯಿಂದ ಆಕೆಗೆ ನಮಿಸಿ—"ಒಳ್ಳೇದು

ತಾಯಿ, ಮಹಾಪ್ರಸಾದ" ಎಂದು ಆಕೆಯ ಹಿಂದಿನಿಂದ ಒಂದು ಗವಿಗೆ ಹೋದನು. ಆ ಗವಿಯಲ್ಲಿ ಆಕೆ ತನ್ನ ಪಲ್ಕಲದ ಹಾಸಿಗೆಯ ಹತ್ತಿರ ಕೈಯೊಳಗಿನ ವೀಣೆಯನ್ನಿಟ್ಟು, ನೆರೆಯಲ್ಲಿ ಹರಿಯುವ ಝರಿಯೊಳಗಿನ ನೀರನ್ನು ತಾವರೆಯೆಲೆಯ ದೊನ್ನೆಯೊಳಗೆ ತುಂಬಿಕೊಂಡು ಬಂದು ಚಂದ್ರಾ-ಪೀಡನು ಕುಳಿತ ಹಾಸುಗಲ್ಲಿನ ಮೇಲೆ ಆತನ ಮುಂದೆ ಇಟ್ಟು, ಆ ಗುಡಿಯ ಪೌಳಿಯೊಳಗಿನ ಗಿಡಗಳ ಬುಡಕ್ಕೆ ಹೋಗಿ ಭಿಕ್ಷಾಪಾತ್ರೆಯನ್ನು ಒಡ್ಡಿದ ಕೂಡಲೆ, ಗಿಡಗಳ ತುದಿಯಿಂದ ಹಣ್ಣುಗಳು ತಮ್ಮಿಂದ ತಾವೇ ಬೇಕಾದಷ್ಟು ಆ ಪಾತ್ರೆಯೊಳಗೆ ಬಿದ್ದವು. ಅವುಗಳನ್ನು ತಂದು ಚಂದ್ರಾಪೀಡನ ಮುಂದೆ ಆದರದಿಂದಿಟ್ಟು—"ಸ್ವಾಮಿ, ಕ್ಷುಧೆಯಿಂದ ತಾವು ಬಹಳ ಬಳಲಿದ್ದೀರಿ, ಇವುಗಳನ್ನು ಸೇವಿಸಬೇಕು" ಎಂದು ಆಗ್ರಹಮಾಡಲು, ಆತನು—"ತಾಯಿ, ತಮ್ಮ ದರ್ಶನಮಾತ್ರದಿಂದಲೇ ನನ್ನ ಪಾಪಗಳೆಲ್ಲ ಪರಿಹಾರವಾದವು; ತಾವು ಕಷ್ಟಪಟ್ಟು ನನ್ನ ಮೇಲೆ ಇಷ್ಟು ಅನುಗ್ರಹ ಮಾಡಿದ್ದರಿಂದಂತೂ ನಾನು ಪುನೀತನೇ ಸರಿ" ಎಂದು ವಿನಯದಿಂದ ಹೇಳಿ ಆ ಫಲಗಳನ್ನು ಬಹು ಕೃತಜ್ಞತೆಯಿಂದ ಕೈಕೊಂಡು ಸೇವಿಸಿ ನೀರು ಕುಡಿದು ಶಾಂತನಾದನು. ಬಳಿಕ ಆ ಕನ್ನಿಕೆಯು ಒಂದು ಹಾಸುಗಲ್ಲಿನ ಮೇಲೆ ಕುಳಿತುಕೊಂಡು—"ಸ್ವಾಮಿ, ತಾವು ಯಾರು? ಇಲ್ಲಿಗೆ ಬಂದ ಕಾರಣವೇನು?" ಎಂದು ಕೇಳಲು ಚಂದ್ರಾಪೀಡನು ದಿಗ್ವಿಜಯಾರ್ಥವಾಗಿ ತಾನು ಹೊರಟಂದಿನಿಂದ ಸಂಭವಿಸಿದ ಸರ್ವ ವೃತ್ತಾಂತವನ್ನು ವಿವರಿಸಿದನು. ಅದನ್ನು ಕೇಳಿ ಆ ಕನ್ನಿಕೆಯು ಝರಿಗೆ ಹೋಗಿ, ಅಲ್ಲಿ ಫಲಮೂಲಗಳನ್ನು ಸೇವಿಸಿ, ತಿರುಗಿ ಬಂದು ಅದೇ ಹಾಸುಗಲ್ಲಿನಮೇಲೆ ಕುಳಿತಳು. ಆಗ ಚಂದ್ರಾಪೀಡನು, "ತಾಯಿ, ತಾವು ನನ್ನ ಮೇಲೆ ಇಂದು ಅನುಗ್ರಹ ಮಾಡಿದ್ದರಿಂದಲೂ, ಮಾನವರಾದ ನಮಗೆ ಅಷ್ಟು ವಿವೇಕವಿಲ್ಲದ್ದರಿಂದಲೂ ನಾನು ತಮ್ಮನ್ನು ಒಂದು ಮಾತು ಕೇಳಿ-ಕೊಳ್ಳುತ್ತೇನೆ. ಕ್ಷಮಿಸಬೇಕು. ಒಡೆಯರು ಲೇಶಮಾತ್ರ ಕೃಪೆಮಾಡಿದರೆ ಸಾಕು, ಅಧೀರಸ್ವಭಾವದ ಭೃತ್ಯರು ದಿಟ್ಟರಾಗುವರು. ಒಂದೇ ಸ್ಥಳದಲ್ಲಿ ಕ್ಷಣಮಾತ್ರವಾದರೂ ಕೂಡಿಯಿದ್ದರೆ ಸಾಕು, ಗುರುತು ಆಗುತ್ತದೆ. ಸ್ವಲ್ಪ ಸತ್ಕಾರವಾದರೂ, ಅದರಿಂದ ಪ್ರೀತಿ ಹುಟ್ಟುತ್ತದೆ. ನಾನು ಕೇಳುವದರಿಂದ ತಮಗೆ ಖೇದವಾಗದಹಾಗಿದ್ದರೆ ದಯಮಾಡಿ ನನ್ನ ಕೌತುಕವನ್ನು ನೆರವೇರಿಸಬೇಕು. ತಾವೇನು ದೇವಕನ್ನಿಕೆಯರೋ ಋಷಿಕನ್ನಿಕೆಯರೋ? ಇಂಥ

ಸುಕುಮಾರ ಸ್ಥಿತಿಯೊಳಗೆ ಈ ಉಗ್ರತಪಸ್ಸನ್ನು ಕೈಕೊಂಡ ಕಾರಣವೇನು ? ತಾವು ಸ್ವರ್ಗಲೋಕ ಬಿಟ್ಟು, ಈ ನಿರ್ಮಾನುಷಾರಣ್ಯದೊಳಗೆ ಒಬ್ಬರೇ ಇರುವ ಕಾರಣವೇನು ? ನಿಮ್ಮ ಮೈಬಣ್ಣವು ಪಂಚಭೂತಾತ್ಮಕ ಪ್ರಾಣಿಗಳ ಕಾಯಕಾಂತಿಯಂತಿರದೆ ಇಷ್ಟು ಬೆಳ್ಳಗೆ ಇರುವ ಬಗೆ ಏನು ? ತಮ್ಮ ಸೌಂದರ್ಯ ಸುಕುಮಾರತನಗಳೆತ್ತ ! ಈ ಇಂದ್ರಿಯನಿಗ್ರಹಶಾಂತಿಗಳೆತ್ತ ! ನಿಮ್ಮನ್ನು ನೋಡಿ ಕುತೂಹಲಚಿತ್ತನಾಗಿ ಬಹು ಲವಲವಿಕೆಯಿಂದ ಕೇಳಿಕೊಳ್ಳುತ್ತೇನೆ, ದಯವಿಟ್ಟು ಹೇಳಬೇಕು ” ಎಂದು ಕೇಳಲು, ಆ ಕನ್ನಿಕೆಯು ಒಂದು ಕ್ಷಣ ಹೊತ್ತು ಸುಮ್ಮನೇ ಕುಳಿತುಕೊಂಡು ಬಿಸು-ಸುಯ್ದು ಅಳಹತ್ತಿದಳು ! ಅದನ್ನು ನೋಡಿ ಚಂದ್ರಾಪೀಡನು ಮನದೊಳಗೆ- “ ಶಿವಶಿವಾ ! ದುಃಖವು ಎಂಥವರನ್ನಾದರೂ ಬಿಟ್ಟಿಲ್ಲ. ಈಕೆ ಅತ್ತ ಅತ್ತ ಹಾಗೆ ಏನು ಇದ್ದೀತು ಕೇಳಬೇಕೆಂಬ ಇಚ್ಛೆಯು ಹೆಚ್ಚಾಗುತ್ತದೆ. ಇಂಥವಳು ಇಷ್ಟು ಅಳಬೇಕಾದರೆ ಏನಾದರೂ ದೊಡ್ಡ ಕಾರಣವಿರಬೇಕು ” ಎಂದು ಬಗೆದು ತಾನೇ ಈಕೆಗೆ ದುಃಖದ ನೆನಪು ಮಾಡಿಕೊಟ್ಟ ಹಾಗಾಯಿತೆಂದು ಮರಮರನೆ ಮರುಗಿ — “ ತಾಯೀ, ತಮ್ಮಂಥವರು ಕಣ್ಣೀರು ಸುರಿಸಬಾರದು ! ಮುಖಪ್ರಕ್ಷಾಲನ ಮಾಡಿಕೊಳ್ಳಬೇಕು ” ಎಂದು ವಿನಯದಿಂದ ಹೇಳಿಕೊಂಡು, ಝರಿಯೊಳಗಿನ ನೀರು ತಂದು ಕೊಟ್ಟನು. ಅದರಿಂದ ಆಕೆ ದುಃಖಿಸುವದನ್ನು ಬಿಟ್ಟು, ವಲ್ಕಲದ ಸೆರಗಿನಿಂದ ಕಣ್ಣೀರು ಒರಸಿಕೊಂಡು, ಆತನು ಕೊಟ್ಟ ಉದಕದಿಂದ ಮುಖ ತೊಳಕೊಂಡು, ನಿಟ್ಟುಸುರು ಬಿಟ್ಟು, ಮೆಲ್ಲಗೆ ಆತನಿಗೆ ಹೇಳಲನುವಾದಳು—“ ರಾಜಪುತ್ರನೇ, ನಾನು ಹತಭಾಗ್ಯಳು, ಮಹಾ-ಪಾಪಾತ್ಮಳು, ನನ್ನಂಥ ಚಂಡಾಲಿಯ ಕಥೆಯನ್ನು ಕೇಳುವ ಪ್ರಯೋಜನ-ವೇನು ? ಆದರೂ ಇಚ್ಛೆಯಿದ್ದರೆ ಹೇಳುತ್ತೇನೆ ಕೇಳಬೇಕು. ಸ್ವರ್ಗದೊಳಗೆ ಅಪ್ಸರಕನ್ನಿಕೆಯರಿರುತ್ತಾರೆಂಬುದು ತಮಗೆ ಅರಿಕೆ ಇದ್ದೀತು, ಅವರೊಳಗೆ ಹದಿನಾಲ್ಕು ಕುಲಗಳುಂಟು. ಮೊದಲನೆಯ ಕುಲವು ಬ್ರಹ್ಮನಿಂದ ಹುಟ್ಟಿತು. ಎರಡನೆಯದು ವೇದಗಳಿಂದ, ಮೂರನೆಯದು ಅಗ್ನಿಯಿಂದ, ನಾಲ್ಕನೆಯದು ವಾಯುವಿನಿಂದ, ಐದನೆಯದು ಅಮೃತದಿಂದ, ಆರನೆಯದು ನೀರಿನಿಂದ ಏಳನೆಯದು ಸೂರ್ಯನ ಕಿರಣಗಳಿಂದ, ಎಂಟನೆಯದು ಚಂದ್ರನ ಕಿರಣಗಳಿಂದ, ಒಂಬತ್ತನೆಯದು ಭೂಮಿಯಿಂದ, ಹತ್ತನೆಯದು ವಿದ್ಯುಲ್ಲತೆಯಿಂದ, ಹನ್ನೊಂದನೆಯದು ಮೃತ್ಯುವಿನಿಂದ, ಹನ್ನೆರಡನೆಯದು ಮದನನಿಂದ,

ಹದಿಮೂರನೆಯ ಹದಿನಾಲ್ಕನೆಯ ಕುಲಗಳು ದಕ್ಷಬ್ರಹ್ಮನ ಹೆಣ್ಣುಮಕ್ಕಳಾದ ಮುನಿ ಹಾಗೂ ಅರಿಷ್ಟೆ ಎಂಬ ಗಂಧರ್ವಪತ್ನಿಯರಿಂದ ಹುಟ್ಟಿದವು. ಅವರಲ್ಲಿ ಮುನಿ ಎಂಬವಳಿಗೆ ಹದಿನಾರು ಮಂದಿ ಮಕ್ಕಳು ಹುಟ್ಟಿದರು. ಹದಿನಾರನೆಯ ಮಗನು ಸಕಲ ಸದ್ಗುಣಸಂಪನ್ನನಾದ ಚಿತ್ರರಥನೆಂಬವನು. ಇವನ ಪರಾಕ್ರಮವನ್ನು ಕಂಡು ಇಂದ್ರನು ಇವನನ್ನು ತನ್ನ ಗೆಳೆಯನನ್ನು ಮಾಡಿಕೊಂಡು ಇವನಿಗೆ ಸನ್ಮಾನಮಾಡುತ್ತಾನೆ. ಇವನು ಚಿಕ್ಕಂದಿನಲ್ಲಿಯೇ ಎಲ್ಲ ಗಂಧರ್ವರಿಗೆ ಅರಸನಾದನು. ಇಲ್ಲಿಗೆ ಸಮೀಪದಲ್ಲಿ ಕಿಂಪುರುಷನೆಂಬ ದೇಶವಿದೆ; ಆ ದೇಶದಲ್ಲಿ ಹೇಮಕೂಟವೆಂಬ ಪರ್ವತದಲ್ಲಿ ಆತನು ಸಾವಿರಾರು ಮಂದಿ ಗಂಧರ್ವರನ್ನು ಕೂಡಿಕೊಂಡು ಇರುತ್ತಾನೆ. ಆ ಚಿತ್ರರಥ ಗಂಧರ್ವ ರಾಜನೇ ಈ ಚೈತ್ರರಥವೆಂಬ ಮನೋಹರವಾದ ಅರಣ್ಯವನ್ನು ನಿರ್ಮಿಸಿ, ಈ ಅಗಾಧವಾದ ಅಚ್ಛೋದ ಸರೋವರವನ್ನು ಅಗಿಸಿ, ಈ ಸ್ಫಟಿಕದ ಶಿವಾಲಯವನ್ನು ಕಟ್ಟಿಸಿದನು. ಅರಿಷ್ಟೆಯೆಂಬವಳು ಆರು ಮಕ್ಕಳನ್ನು ಹೆತ್ತಳು. ಅವರಲ್ಲಿ ಜ್ಯೇಷ್ಠ ಪುತ್ರನಾದ ಹಂಸನೆಂಬವನು ಗಂಧರ್ವರೊಳಗೆ ಪ್ರಸಿದ್ಧನಾದನು. ಈ ಹಂಸನಿಗೆ ಆ ಚಿತ್ರರಥ ರಾಜನು ಎರಡನೆಯ ಕುಲದ ಗಂಧರ್ವರ ರಾಜ್ಯವನ್ನು ಕೊಟ್ಟನು. ಈ ಹಂಸನೂ ತನ್ನ ಪರಿವಾರದೊಡನೆ ಅದೇ ಹೇಮಕೂಟ ಪರ್ವತದಲ್ಲಿ ಇರುತ್ತಾನೆ. ಚಂದ್ರನ ಕಿರಣಗಳಿಂದ ಅಪ್ಸರರದೊಂದು ಕುಲವು ಹುಟ್ಟಿತೆಂದು ಮೊದಲು ಹೇಳಿದ್ದೇನಷ್ಟೇ; ಆ ಕುಲದಲ್ಲಿ ಗೌರಿಯೆಂಬವಳು ಹುಟ್ಟಿದಳು. ಆಕೆಯನ್ನು ಹಂಸನು ಮದುವೆ ಮಾಡಿಕೊಂಡನು. ಈ ದಂಪತಿಗಳಿಂದ ನಾನೊಬ್ಬಳೇ ಮಗಳು ಹುಟ್ಟಿದೆನು. ಹನ್ನೆರಡನೆಯ ದಿವಸ ನನ್ನ ತಂದೆ ಹಂಸರಾಜನು ಕಡುಸಡಗರದಿಂದ ಶುಭಸಂಸ್ಕಾರಗಳನ್ನು ಮಾಡಿ ನನಗೆ "ಮಹಾಶ್ವೇತೆ" ಎಂದು ಹೆಸರಿಟ್ಟನು. ತಂದೆಯ ಮನೆಯಲ್ಲಿ ಎಲ್ಲರ ಮುದ್ದಿಗೂ ಈಡಾಗಿ ಬೆಳೆದು, ಶೈಶವಾವಸ್ಥೆಯನ್ನು ಸುಖದಿಂದ ಕಳೆದ ಬಳಿಕ, ನನಗೆ ನೂತನ ತಾರುಣ್ಯವೊದಗಿತು. ಒಂದು ದಿನ ವಸಂತಕಾಲದಲ್ಲಿ ನಾನು ತಾಯಿಯ ಕೂಡ ಅಚ್ಛೋದಸರೋವರಕ್ಕೆ ಹೋದಾಗ, ಸಂಗಡ ಬಂದ ಸಖಿಯರೂ ನಾನೂ ಸರೋವರದ ದಂಡೆಯ ಮೇಲಿನ ಹೂದೋಟದ ಸೌಂದರ್ಯವನ್ನು ನೋಡುತ್ತ ಲತಾಮಂಟಪಗಳೊಳಗೆ ಹೊಕ್ಕು ಮುಂದಕ್ಕೆ ಹೋಗಿ—"ಹೂವಿನ ಭಾರದಿಂದ ಮಾವಿನ ಮರವೆಷ್ಟು ಬಾಗಿದೆ ನೋಡಿರಿ! ಇಲ್ಲಿ ನರ್ತಿಸುವ ನವಿಲುಗಳನ್ನು ನೋಡಿ

ಆ ಸರ್ಪಗಳು ಹೇಗೆ ಓಡಿಹೋಗುತ್ತವೆ! ಅಹಹಾ! ಈ ಚಂದನ ವನದೊಳಗೆ ತಂಪು ಎಷ್ಟು ಸೊಗಸುಗೊಳಿಸುತ್ತದೆ ನೋಡಿರೇ!" ಎಂದು ಗೆಳತಿಯರ ಕೂಡ ಒಬ್ಬರಿಗೊಬ್ಬರು ಮಾತಾಡುತ್ತ ಆ ಹೂಗೊಳದ ದಂಡೆಯ ಹಿಡಿದು ವಿಹರಿಸುತ್ತಿದ್ದೆವು ಅಷ್ಟರಲ್ಲಿ ಒಮ್ಮಿಂದೊಮ್ಮೆ ಒಂದು ಮನೋಮೋಹನ ವಾದ ಪರಿಮಳವು ಗಾಳಿಯ ಕೂಡ ಬಂದು, ನನ್ನ ಘ್ರಾಣೇಂದ್ರಿಯಕ್ಕೆ ಸೋಂಕಿ ನನ್ನನ್ನು ಮೋಹಗೊಳಿಸಿತು. ಅಂಥ ಸುಗಂಧವು ಮನುಷ್ಯಪ್ರಾಣಿಗಳಿಗೆ ದುರ್ಲಭವೇ ಸರಿ. ಹಿಂದಕ್ಕೆ ಎಂದೆಂದೂ ಅಂಥ ಸುವಾಸನೆಯನ್ನು ನಾನು ಕಂಡಿದ್ದಿಲ್ಲ. ಈ ಅನುಪಮವಾದ ಆಮೋದವು ಎಲ್ಲಿಂದ ಬರುತ್ತದೋ ಅದನ್ನು ಗೊತ್ತುಹಚ್ಚಬೇಕೆಂಬ ಲವಲವಿಕೆಯಿಂದ ನಾನು ಸಖಿಯರನ್ನು ಮುಂದೆ ಹೋಗಬಿಟ್ಟು, ಮುಗುಳುಗಳಿಂದೊರಗುವ ಒಂದು ಮಲ್ಲಿಗೆಯ ಬಳ್ಳಿಯ ಮಂಟಪದ ನೆರೆಯಲ್ಲಿ ನಿಂತುಕೊಳ್ಳುವಷ್ಟರಲ್ಲಿ ಸಖನೊಡನೆ ಸ್ನಾನಕ್ಕೆ ಬಂದ ಒಬ್ಬ ಮುನಿಕುಮಾರನನ್ನು ಕಂಡೆನು. ಸ್ವಾಮಿ, ಆತನ ಚೆಲ್ವಿಕೆಯನ್ನು ಎಷ್ಟೆಂದು ಬಣ್ಣಿಸಲಿ! ಕಂಡಕೂಡಲೆ ಆ ಸುಂದರ ಮೂರ್ತಿಯ ಮೇಲೆ ಸಾವಿರಾರು ಮದನರನ್ನು ನಿವಾಳಿಯ ತೆಗೆಯಬೇಕೆಂಬುವ ಹಾಗಾಯಿತು. ಆತನ ಕಾಯಕಾಂತಿಗೆ ನನ್ನ ಕಣ್ಣುಗಳೇ ಕುಕ್ಕಿದವು; ಆತನ ಕೆಂಜೆಡೆಗಳೂ, ಕುಡಿಹುಬ್ಬುಗಳೂ, ಸೋಗೆಗಣ್ಣುಗಳೂ, ನಿಡುಮೂಗೂ, ಕೆಂದುಟಿಗಳೂ, ನಗೆಮೊಗವೂ ನನ್ನ ಕಣ್ಣಮುಂದೇ ಕಟ್ಟಿವೆ. ಇನ್ನೂ ಮೊಕಮೀಸೆ ಒಡೆದಿದ್ದಿಲ್ಲ, ಆದದರಿಂದ ಆತನ ಮುಖವು ಭ್ರಮರವೆರಗದ ಬಾಲಕಮಲ ದಂತೆ ಒಪ್ಪುತ್ತಿರುವದು. ಆ ಮನೋಮೋಹನ ಮೂರ್ತಿಯು ನನ್ನ ಹೃದಯದಲ್ಲಿ ನೆಲೆಗೊಂಡಿದೆ. ಬಲಗೈಯೊಳಗೆ ಜಪಮಾಲೆಯನ್ನು, ಎಡಗೈ-ಯೊಳಗೆ ಕಮಂಡಲವನ್ನು ಹಿಡಕೊಂಡು ಎದುರಿಗೆ ಬರುವಾಗ ಸರಸ್ವತಿಯ ವಿಲಾಸಮಂದಿರವೋ, ಸರ್ವ ಶ್ರುತಿಗಳ ಸಂಕೇತಸ್ಥಾನವೋ ಅನ್ನುವಂತೆ ಶೋಭಿಸಿದನು. ಆತನ ಕಿವಿಯ ಮೇಲೆ ಪುಷ್ಪಮಂಜರಿ ಇತ್ತು. ನನ್ನನ್ನು ಮೋಹಗೊಳಿಸಿದ ಮಕರಂದವು ಇದೇ ಮಂಜರಿಯದೋ ಏನೋ ಎಂದು ನಾನು ಆ ಮುನಿಕುಮಾರನನ್ನು ದಿಟ್ಟಿಸಿ ನೋಡುತ್ತ ನಿಂತಾಗ, ಸೃಷ್ಟಿಕರ್ತ ನಾದ ಬ್ರಹ್ಮದೇವನು ಈ ಮೋಹಕ ಮೂರ್ತಿಯನ್ನು ನಿರ್ಮಾಣ ಮಾಡುವದ ಕ್ಕಿಂತ ಮುಂಚೆ ಅಭ್ಯಾಸದ ಸಲುವಾಗಿ ಜಗದಾನಂದಕರನಾದ ಚಂದ್ರನನ್ನೂ, ಲಕ್ಷ್ಮೀವಿಲಾಸಸ್ಥಾನವಾದ ಕಮಲವನ್ನೂ ಮಾಡಿರಬಹುದು; ಇಲ್ಲದಿದ್ದರೆ

ಲೋಕನ ಮಾತ್ರದಿಂದಲೇ ಆ ಯತೀಶ್ವರನ ಸಮಾಗಮ ಸುಖಪಡೆದು ಆ ಕ್ಷಣವೇ ಒಬ್ಬ ಕುಮಾರನನ್ನು ಹೆತ್ತು, ಆ ಶಿಶುವನ್ನು ತೊಡೆಯ ಮೇಲಿಟ್ಟುಕೊಂಡು ಶ್ವೇತಕೇತು ಮುನೀಶ್ವರನನ್ನು ಹತ್ತಿರ ಕರೆದು, ಸ್ವಾಮಿ, ಈತನು ತಮ್ಮ ಮಗನು, ತಕ್ಕೊಳ್ಳಬೇಕೆಂದು ಹೇಳಿ ಆ ಶಿಶುವನ್ನು ಆತನ ಕೈಯೊಳಗೆ ಕೊಟ್ಟಳು. ಆ ಋಷೀಶ್ವರನು ಆ ಶಿಶುವಿನ ಜಾತಕರ್ಮವನ್ನು ಮಾಡಿ ಪುಂಡರೀಕ (ಬಿಳೀ ಕಮಲ) ದಿಂದ ಹುಟ್ಟಿದ ಕಾರಣ ಪುಂಡರೀಕನೆಂದು ನಾಮಕರಣಗೈದು ಮುಂದೆ ಕೆಲವು ಕಾಲದ ತರುವಾಯ ಆತನ ವ್ರತಬಂಧವನ್ನು ಮಾಡಿ ಸಂಪೂರ್ಣ ವಿದ್ಯೆ ಕಲಿಸಿದನು. ಇವನೇ ಪುಂಡರೀಕನೀತನು. ಆತನ ಕಿವಿಯ ಮೇಲಿನ ಮಂಜರಿಯು ಪಾರಿಜಾತ ಪುಷ್ಪಮಂಜರಿಯು. ಈ ಹೊತ್ತು ಶಿವನ ಪಾದಪೂಜೆಗೆಂದು ನಾನೂ ಈತನೂ ನಂದನವನದೊಳಗಿಂದ ಹಾಯ್ದು ಕೈಲಾಸಕ್ಕೆ ಹೋಗುತ್ತಿದ್ದೆವು; ಆಗ ನಂದನವನದೇವತೆಯು ಈ ಪುಂಡರೀಕನ ದರ್ಶನದ ಸಲುವಾಗಿ ಕೈಯೊಳಗೆ ಈ ಪುಷ್ಪಮಂಜರಿಯನ್ನು ಹಿಡಿದುಕೊಂಡು ಬಂದು, ಈತನ ಚರಣಕ್ಕೆ ವಂದಿಸಿ, 'ಸ್ವಾಮಿ, ತಮ್ಮ ರೂಪಕ್ಕೆ ಈ ಪಾರಿಜಾತ ಪುಷ್ಪಮಂಜರಿಯು ಯೋಗ್ಯವಾದೆ; ಇದನ್ನು ತಾವು ಅಂಗೀಕರಿಸಿ, ದಯಮಾಡಿ ಕರ್ಣಾಭರಣ ಮಾಡಿಕೊಳ್ಳಬೇಕು! ಪಾರಿಜಾತ ವೃಕ್ಷದ ಜನ್ಮವು ಕೃತಾರ್ಥವಾಗಲಿ!' ಎಂದು ವಿನಯಪೂರ್ವಕವಾಗಿ ವಿಜ್ಞಾಪಿಸಿದಳು. ಆ ವನದೇವತೆಯ ಸ್ತುತಿಪರ ವಚನಗಳಿಗೆ ಈ ಪುಂಡರೀಕನು ಕಿವಿಗೊಡದೆ ಪುಷ್ಪಮಂಜರಿಯ ತಕ್ಕೊಳ್ಳದೆ ಮುಂದಕ್ಕೆ ಸಾಗಿದನು. ಆಕೆ ಹಿಂದಿಂದೇ ಬರಹತ್ತಿದಳು. ಅದನ್ನು ಕಂಡು ನಾನು—'ಆಕೆಯ ಪ್ರೀತಿದಾನವನ್ನು ಯಾಕೆ ಗ್ರಹಣ ಮಾಡಬಾರದು' ಎಂದು ಆ ವನದೇವತೆಯ ಕೈಯೊಳಗಿನ ಪುಷ್ಪಮಂಜರಿಯ ತಕ್ಕೊಂಡು ಬೇಡಬೇಡವೆಂದರೂ ಆಗ್ರಹದಿಂದ ಈತನ ಕಿವಿಯ ಮೇಲೆ ಇಟ್ಟೆನು" ಎಂದು ಎರಡನೆಯ ಋಷಿಬಾಲಕನು ಹೇಳುವಾಗ ಆ ಪುಂಡರೀಕನು ಮುಗುಳ್ನಗೆ ನಕ್ಕು ನನ್ನ ಮುಖನೋಡಿ—"ಕೌತುಕವತಿಯೇ; ಇಷ್ಟೆಲ್ಲ ಕೇಳುವ ಆಯಾಸವೇಕೆ? ಇದರ ಸುವಾಸನೆಯು ನಿನಗೆ ಪ್ರಿಯಕರವಾಗಿದ್ದರೆ ಇದನ್ನೇ ಹಿಡಿ," ಎಂದು ಹತ್ತಿರ ಬಂದು, ತನ್ನ ಕಿವಿಯ ಮೇಲಿನ ಪುಷ್ಪಮಂಜರಿಯನ್ನು ತೆಗೆದು ನನ್ನ ಕಿವಿಯ ಮೇಲೆ ತಾನೇ ತನ್ನ ಕೈಮುಟ್ಟಿ ಇಟ್ಟನು. ಆಗ ನನ್ನ ಗಲ್ಲಕ್ಕೆ ಆತನ ಅಂಗೈ ಸೋಂಕಿದುದರಿಂದ ನನಗೆ ಅನುಪಮವಾದ ಆನಂದವಾಯಿತು. ನನ್ನ ಕಪೋಲ-ಸ್ಪರ್ಶಸುಖ

ದಿಂದ ಆತನೂ ಮೋಹಿತನಾದನು. ಆ ಭರದೊಳಗೆ ಕಂಪ ಹುಟ್ಟಿದ್ದರಿಂದ ಆತನ ಕೈಯೊಳಗಿನ ಜಪಮಾಲೆಯು ಸಡಿಲಿ ಅವನಿಗೆ ತಿಳಿಯದೆ ಬೀಳುತ್ತಿತ್ತು. ಅಷ್ಟರೊಳಗೆ ನಾನು ಬಾಗಿ, ಕೈಚಾಚಿ, ಅದನ್ನು ನೆಲಕ್ಕೆ ಬೀಳಗೊಡದೆ ತಕ್ಕೊಂಡು ಕೊರಳೊಳಗೆ ಹಾಕಿಕೊಂಡೆನು.

ಈ ಮೇರೆಗೆ ಒಬ್ಬರ-ಮೇಲೊಬ್ಬರು ಮೋಹಿತರಾದದ್ದನ್ನು ನನ್ನ ಅಪ್ತಾ-ಗಿರಿ ಹಿಡಿಯುವ ದಾಸಿ ಕಂಡು—"ಗಂಧರ್ವ ರಾಜಕನ್ನಿಕೆಯೇ, ಅವ್ವನವರ ಸ್ನಾನವಾಗಿದ್ದೀತು; ಮನೆಗೆ ಹೋಗುವ ಹೊತ್ತು ಆಯಿತು; ಇನ್ನು ನೀವು ಸರೋವರಕ್ಕೆ ನಡೆಯಿರಿ!" ಎಂದು ಅಂದಳು. ಅವಳ ಈ ನುಡಿಯು ನನ್ನ ಕಿವಿಗೆ ಬಿದ್ದಕೂಡಲೆ ಹೊಸದಾಗಿ ಹಿಡಿದು ತಂದ ಆನೆಗೆ ಅಂಕುಶದ ಮೊದಲ-ನೆಯ ಹೊಡತವು ಬಿದ್ದಹಾಗಾಯಿತು. ಆ ಮನೋಮೋಹನ ಮೂರ್ತಿಯ ಲಾವಣ್ಯವನ್ನು ಎಷ್ಟು ನೋಡಿದರೂ ಸಾಕಾಗಲಿಲ್ಲ. ಅಲ್ಲಿಂದ ನನ್ನ ಕಾಲಂ-ಗಳೇ ಏಳಲೊಲ್ಲವು. ಆದರೂ ಆತನ ಮುಖದಲ್ಲಿ ನಟ್ಟ ನನ್ನ ದೃಷ್ಟಿಯನ್ನು ಬಹು ಕಷ್ಟದಿಂದ ಕಿತ್ತುಕೊಂಡು, ಸರೋವರದ ಮಾರ್ಗ ಹಿಡಿದೆನು. ನಾನು ಹೊರಟದ್ದು ತಿಳಿದಮಾತ್ರವೇ ಆ ಋಷಿಕುಮಾರನ ಧೈರ್ಯವೇ ಹೋಯಿತು. ಅವನ ಅವಸ್ಥೆಯನ್ನು ಕಂಡು ಎರಡನೆಯ ಋಷಿಕುಮಾರನು ಪ್ರಣಯಕೋಪ ದಿಂದ 'ಎಲೈ ಪುಂಡರೀಕನೇ ಇದು ನಿನಗೆ ಸಲ್ಲದು; ಕೀಳರು ಹಿಡಿಯುವ ಹೊಲ್ಲದ ಹಾದಿಯ ಹಿಡಿದಿ; ಸಾಧುಗಳಿಗೆ ಧೈರ್ಯವೇ ಧನವು. ನಾಡಾಡಿಗ-ರಂತೆ ನೀನು ಕಾಮವಿಹ್ವಲನಾಗುವದುಚಿತವೇ? ನೀನು ಎಂದೂ ಭ್ರಾಂತ-ನಾದವನಲ್ಲ; ಇಂದು ನಿನ್ನ ಅವಸ್ಥೆ ಹೀಗಾದ ಕಾರಣವೇನು? ನಿನ್ನ ಮುಂಚಿನ ಧೈರ್ಯವೂ, ಇಂದ್ರಿಯನಿಗ್ರಹವೂ, ಶಾಂತಿಯೂ, ಬ್ರಹ್ಮ-ಚರ್ಯವೂ, ವೈರಾಗ್ಯವೂ ಇಂದು ಎಲ್ಲಿ ಹೋದವು? ಗುರುಗಳ ಉಪ-ದೇಶವೂ, ಇಂದಿನವರೆಗೆ ನೀನು ಮಾಡಿದ ಅಧ್ಯಯನವೂ, ಪರಲೋಕ ಸಾಧನವೂ, ಇಂದು ಎಲ್ಲಿ ಅಡಗಿದವು? ಜ್ಞಾನದಿಂದ ನಿನಗೇನೂ ಫಲ ವಾಗಲಿಲ್ಲ; ನೀನು ಧರ್ಮಶಾಸ್ತ್ರವನ್ನು ಕಲಿತದ್ದು ಸಾರ್ಥಕವಾಗಲಿಲ್ಲ; ನಿನ್ನ ಸಂಸ್ಕಾರವೂ ಜಾಣತನವೂ ಇಂದಿಗೆ ನಿರರ್ಥಕವಾದವು; ನಿನ್ನ ವಿವೇಕ ನಿನ್ನ ಮೇಲೆ ಏನೂ ಉಪಕಾರ ಮಾಡಲಿಲ್ಲ. ನೋಡು, ನಿನ್ನಂಥವರು ಸಹ ಇಂಥ ಮೋಹಪಾಶದೊಳಗೆ ಬೀಳುತ್ತಾರೆ. ನಿನ್ನ ಕೈಯೊಳಗಿನ ಜಪ-ಮಾಲೆ ಸಡಿಲಿ ಬಿದ್ದದ್ದೂ, ಅದನ್ನು ಆಕೆ ಒಯ್ದದ್ದೂ ನಿನಗೆ ತಿಳಿದೇ ಇಲ್ಲ.

ಇಷ್ಟು ಅರಿವುಗೆಟ್ಟ! ನಿನಗೇನು ಅನ್ನಬೇಕು? ಎಲೈ ಮೂಢನೇ, ನಿನ್ನ ಜಪಮಾಲೆಯನ್ನು ಆಕೆ ಒಯ್ದರೂ ಒಯ್ಯಲಿ, ಈಗ ನಿನ್ನ ಹೃದಯವನ್ನು ಸಹ ಒಯ್ಯುತ್ತಾಳೆ; ಅದನ್ನಾದರೂ ಬಿಡಿಸಿಕೊಳ್ಳಬಾರದೇ?' ಎಂದ ಮಾತುಗಳಿಗೆ ಪುಂಡರೀಕನು ನಾಚಿ—'ಕಪಿಂಜಲಾ, ಹಾಗೆ ತಿಳಕೊಳ್ಳಬೇಡ, ಆಕೆ ನನ್ನ ಜಪಮಾಲೆ ಒಯ್ದಾಳೇ? ಹಾಗಾದರೆ ಅವಳನ್ನು ಬಿಡುವದಿಲ್ಲ!' ಎಂದು ಬಹಳ ಸಿಟ್ಟಿಗೆದ್ದವನ ಹಾಗೆ ಮಾಡಿ ನನಗೆ—'ಎಲೈ ಕನ್ನಿಕೆಂಪೇ, ಎಲ್ಲಿ ಹೋಗುತ್ತೀ ನಿಲ್ಲು! ನನ್ನ ಜಪಮಾಲೆಯನ್ನು ಕೊಟ್ಟು ಮುಂದಕ್ಕೆ ಹೆಜ್ಜೆಯ ಇಡು!' ಅಂದನು. ಅದನ್ನು ಕೇಳಿ ನಾನು ನನ್ನ ಕೊರಳೊಳಗಿನ ಮುತ್ತಿನ ಏಕಾವಳೀ ಸರವನ್ನು ತೆಗೆದು—'ಸ್ವಾಮಿಾ, ನಿಮ್ಮ ಈ ಜಪ-ಮಾಲೆಯ ಹಿಡಿಯಿರಿ' ಎಂದು ಅತನ ಕೈಯೊಳಗೆ ಕೊಟ್ಟು ಸರೋವರಕ್ಕೆ ಹೋದೆನು. ಸರೋವರದೊಳಗಿಳಿದು ಸ್ನಾನಮಾಡಿ, ಸಖಿಯರ ಆಗ್ರಹದಿಂದಲೇ ತಾಯಿಯ ಸಂಗಡ ನಾನು ಆ ಋಷಿಕುಮಾರನನ್ನು ನೆನಸುತ್ತ ಸೆಳವಿನ ಕೂಡ ಹೋಗುವ ಹರಗೋಲನ್ನು ಎದುರೇರಿಸುವಂತೆ ಮನೆಗೆ ಹೋದೆನು. ಅಯ್ಯಾ ಚಂದ್ರಪೀಡಾ, ಕನ್ಯಾಂತಃಪುರದೊಳಗೆ ಪ್ರವೇಶಿಸಿದ ಬಳಿಕ ಆದ ನನ್ನ ಅವಸ್ಥೆಯನ್ನು ಏನು ಹೇಳಲಿ! ನಾನು ತಿರುಗಿ ಬಂದೆನೋ ಅಲ್ಲೇ ನಿಂತೆನೋ, ಒಬ್ಬಳೇ ಇದ್ದೆನೋ, ಸಖಿಯರ ಸಮೂಹದೊಡನೆ ಇದ್ದೆನೋ, ಇದೇನು ಸುಖವೋ, ದುಃಖವೋ, ಹಗಲೋ ಇರುಳೋ ಎಂಬದು ಸಹ ನನಗೆ ತಿಳಿಯದಹಾಗಾಯಿತು. ಇದೆಲ್ಲ ಮದನನ ಚೇಷ್ಟೆ ಎಂಬುವದು ನನಗೆ ತಿಳಿಯದ್ದರಿಂದ ಇನ್ನು ಎಲ್ಲಿಗೆ ಹೋಗಬೇಕು, ಏನು ಮಾಡಬೇಕು, ಏನು ಹೇಳಬೇಕು, ಏನು ಕೇಳಬೇಕು, ಎಂಬುವದು ನನಗೇನೂ ತಿಳಿಯಲಿಲ್ಲ. ಆದುದರಿಂದ ಎಲ್ಲ ಸಖಿಯರಿಗೆ ಹೋಗಹೇಳಿ, ಹೊರಗಿನ ಸೇವಕರಿಗೆ ಒಳಗೆ ಬಾರದಂತೆ ಬಿಗಿಮಾಡಿ, ಒಬ್ಬಳೇ ಸೌಧಾಗ್ರದ ಮೇಲೆ ಹತ್ತಿ, ಹುಬ್ಬುಗೈ ಹಚ್ಚಿ, ಕಿಡಿಕಿಯೊಳಗಿಂದ ಆ ಋಷಿಕುಮಾರನಿರುವ ಪ್ರದೇಶದ ಕಡೆಗೆ ನೋಡುತ್ತ, ನಿಶ್ಚಲಳಾಗಿ ನಿಂತುಕೊಂಡೆನು. ಅಷ್ಟರೊಳಗೆ ನನ್ನಕೂಡ ಸರೋವರಕ್ಕೆ ಬಂದು ಹಿಂದುಳಿದಿದ್ದ ನನ್ನ ತಾಂಬೂಲದ ಕರಡಿಗೆ ಹಿಡಿಯುವ ತರಲಿಕೆ ಎಂಬ ದಾಸಿಯು ಬೇಗ ಬಂದು ನನ್ನ ಅವಸ್ಥೆ ನೋಡಿ ನನಗೆ—'ರಾಜಕನ್ನಿಕೆಯೇ, ಅಚ್ಛೋದ ಸರೋವರದ ದಂಡೆಯ ಮೇಲಿನ ಹೊದೋಟದೊಳಗೆ ನಿನಗೆ ಭೆಟ್ಟಿಯಾದ ಇಬ್ಬರು ಋಷಿಕುಮಾರರಲ್ಲಿ ನಿನ್ನ ಕಿವಿಯ

ಮೇಲೆ ಪುಷ್ಪಗುಚ್ಛವಿಟ್ಟ ಕುಮಾರನು ಆ ಎರಡನೆಯವನಿಗೆ ತಿಳಿಯಗೊಡದೆ, ಅವನ ಕಣ್ಣು ತಪ್ಪಿಸಿ ಮೆಲ್ಲಗೆ ಮಲ್ಲಿಗೆಯ ಬಳ್ಳಿಯ ಮಂಟಪದೊಳಗಿಂದ ಹಾಯ್ದು ನನ್ನ ಹತ್ತಿರ ಬಂದು—'ಆ ಕನ್ನಿಕೆ ಯಾರು? ಅವಳ ಹೆಸರೇನು? ಎಲ್ಲಿಗೆ ಹೋಗುತ್ತಾಳೆ?' ಎಂದು ನನ್ನನ್ನು ವಿಚಾರಿಸಲು, 'ಆಕೆಯ ಹೆಸರು ಮಹಾಶ್ವೇತೆ, ತಾಯಿ ಗೌರಿ, ತಂದೆ ಹಂಸರಾಜನು, ಈಗ ತಮ್ಮ ಹೇಮಕೂಟಸ್ಥಳಕ್ಕೆ ಹೋಗುತ್ತಾಳೆ,' ಎಂದು ಹೇಳಿದೆನು. ಅದನ್ನು ಕೇಳಿ ಸ್ವಲ್ಪ ಹೊತ್ತು ಸುಮ್ಮನೆ ನಿಂತು ಆಲೋಚಿಸಿ, ನನ್ನ ಮುಖನೋಡಿ—'ತರಳೆ! ನೀನು ಸಣ್ಣವಳಾದರೂ ಬಹು ಜಾಣಳಿದ್ದೀ; ನನ್ನದೊಂದು ಮಾತು ಕೇಳೀಯಾ?' ಅಂದನು. ಆಗ ನಾನು ಆತನಿಗೆ ನಮ್ರಭಾವದಿಂದ ಕೈಮುಗಿದು—'ಸ್ವಾಮಿ, ತಮ್ಮಂಥ ಮಹಾತ್ಮರ ದರ್ಶನವಾಗುವದೇ ಪರಮ ಪುಣ್ಯವು. ಅದರೊಳಗೆ ತಮ್ಮ ಆಜ್ಞಾರೂಪ ಪ್ರಸಾದ ದೊರೆದ ಬಳಿಕ ನಾನು ಕೃತಾರ್ಥಳೇ ಸರಿ. ಅದೇನು ತಮ್ಮ ಮಾತು, ಸೇವಕಳಿಗೆ ಅರುಹಬೇಕು,' ಅಂದೆನು. ನನ್ನ ಮಾತು ಕೇಳಿ ಆತನು ಆನಂದಪಟ್ಟು, ಬಳಿಯಲ್ಲಿದ್ದ ತಮಾಲವೃಕ್ಷದ ಎಳೆದಳಿರುಗಳನ್ನು ತಕ್ಕೊಂಡು ಹಿಕ್ಕಿ ರಸ ತೆಗೆದು, ತನ್ನ ಉತ್ತರೀಯದ ಸೆರಗು ಹರಿದು, ಆ ತುಣುಕಿನ ಮೇಲೆ ಆ ರಸದಿಂದ ತನ್ನ ಕಿರಿಬೆರಳಿನಿಂದ ಈ ಪತ್ರಿಕೆಯ ಬರೆದು—'ಇದನ್ನು ಆ ಕನ್ನಿಕೆಗೆ ಏಕಾಂತದಲ್ಲಿ ಕೊಡು' ಎಂದು ನನ್ನ ಕೈಯಲ್ಲಿ ಕೊಟ್ಟನು." ಎಂದು ಹೇಳಿ ತನ್ನ ತಾಂಬೂಲದ ಕರಡಿಗೆಯೊಳಗಿಂದ ಆ ಪತ್ರಿಕೆಯನ್ನು ತೆಗೆದಳು; ಅದನ್ನು ಕಂಡು ಯಾವಾಗ ಓದೇನು ಎಂಬ ತವಕದಿಂದ ಹಾಗರಬಿದ್ದು ಆಕೆಯ ಕೈಯೊಳಗಿಂದ ತಕ್ಕೊಂಡು ಓದುತ್ತೇನೆ, ಅದರೊಳಗೆ—'ತಾವರೆಯ ತಂತುಗಳೋಪಾದಿಯಲ್ಲಿ ಶುಭ್ರವಾದ ಮುತ್ತಿನ ಸರವು ಮಾನಸಹಂಸವನ್ನು ಆಶೆಗೊಳಿಸಿ ದೂರ ಒಯ್ಯುವಂತೆ ನೀನು ನನ್ನ ಮಾನಸಹಂಸವನ್ನು ಒಯ್ದಿ.' ಎಂದು ಬರೆದಿದ್ದನು.

ಅದನ್ನು ಓದಿದ್ದರಿಂದಂತೂ ನನ್ನ ಕಾಮವಿಕಾರವು ಅತಿಶಯವಾಯಿತು. ನನ್ನ ದಾಸಿಯು ಎರಡನೆಯ ಸಾರೆ ಆ ಋಷಿಕುಮಾರದರ್ಶನ ತಕ್ಕೊಂಡು ಆತನ ಕೂಡ ಮಾತಾಡಿ ಬಂದುದರಿಂದ, ಅವಳು ಅತಿ ಭಾಗ್ಯವಂತಳೆಂದು ಎಣಿಸಿದೆನು. ದಾಸಿಯಾದರೂ ಆಕೆಯ ಕೂಡ ಆದರದಿಂದಲೂ ಪ್ರೀತಿಯಿಂದಲೂ ಮಾತಾಡಿದೆನು. ಆಕೆಯನ್ನು ಜೀವದ ಗೆಳತಿಯನ್ನು ಮಾಡಿ

ಕೊಂಡು, ಗಲ್ಲವ ಹಿಡಿದು, ಮುಂಗುರುಳು ತೀಡಿ, 'ತರಲಿಕೇ, ಆ ಋಷಿ ಕುಮಾರನು ಮತ್ತೇನೇನು ಅಂದನು? ನೀನು ಎಷ್ಟು ಹೊತ್ತು ಆತನ ಬಳಿಯಲ್ಲಿದ್ದಿ? ಆತನು ಎಲ್ಲಿಯತನಕ ನಮ್ಮ ಹಿಂದಿಂದೆ ಬಂದನು?' ಎಂದು ಮತ್ತೆ ಮತ್ತೆ ಆ ಋಷಿಕುಮಾರನ ಮಾತುಗಳನ್ನೇ ಆಕೆಯ ಕೂಡ ಆಡುತ್ತ ಸೌಧಾಗ್ರದ ಮೇಲೆಯೇ ಸಂಜೆಯತನಕ ಹೊತ್ತುಗಳೆದೆನು.

ಅಷ್ಟರೊಳಗೆ ಅಸ್ತಮಯವಾಯಿತು. ಬಳಿಕ ನನ್ನ ಸತ್ತಿಗೆ ಹಿಡಿಯುವ ತೊತ್ತು ಬಂದು—'ಅಪ್ಪನವರೇ, ಆ ಋಷಿಕುಮಾರರಲ್ಲಿ ಒಬ್ಬನು ಜಪಮಾಲೆಯನ್ನು ಬೇಡಬಂದು ಬಾಗಿಲಲ್ಲಿ ನಿಂತಿದ್ದಾನೆ. ಚಿತ್ತಕ್ಕೆ ಅರಿಕೆಂಬಾಗಬೇಕು' ಎಂದ ಮಾತು ಕೇಳಿದಕೂಡಲೆ ಆ ನನ್ನ ಪ್ರಿಯ ಋಷಿಕುಮಾರನೇ ಬಂದನೇನೋ ಎಂದು ನಾನು ಒಬ್ಬ ಕಂಚುಕಿಗೆ ಅವನನ್ನು ಒಳಗೆ ಕರಕೊಂಡು ಬರುವದಕ್ಕೆ ಅಪ್ಪಣೆ ಮಾಡಿದೆನು. ಆಗ ಆ ಕಂಚುಕಿಯ ಹಿಂದಿಂದೆ ನನ್ನ ಪ್ರಿಯನ ಗೆಳೆಯನಾದ ಕಪಿಂಜಲನು ಏನೋ ಬೇಡುವವನ ಹಾಗೆ ಸಣ್ಣ ಮೋರೆಯ ಮಾಡಿಕೊಂಡು ಬಂದನು. ನಾನು ಎದ್ದು ಆದರಪೂರ್ವಕವಾಗಿ ಆತನಿಗೆ ನಮಸ್ಕಾರ ಮಾಡಿ ಆಸನವನ್ನು ಕೊಟ್ಟೆನು. ಆತನು ಆಸನದ ಮೇಲೆ ಕುಳಿತುಕೊಂಡ ಬಳಿಕ, ಅವನ ಇಚ್ಛೆ ಇಲ್ಲದ್ದಿದ್ದರೂ ಆಗ್ರಹದಿಂದ ನಾನೇ ಆತನ ಪಾದಪ್ರಕ್ಷಾಳನ ಮಾಡಿ ನನ್ನ ಸೀರೆಯ ಸೆರಗಿನಿಂದ ಆತನ ಕಾಲುಗಳನ್ನೊರಸಿ ಬಳಿಯಲ್ಲಿ ನೆಲದ ಮೇಲೆ ಕುಳಿತುಕೊಂಡೆನು.

ಬಳಿಕ ಅವನು ಒಂದು ಕ್ಷಣ ಹೊತ್ತು ಸುಮ್ಮನೆ ಕುಳಿತು ಏನೋ ಮಾತಾಡುವ ಇಚ್ಛೆಯಿಂದ ನನ್ನ ಹತ್ತರ ನಿಂತ ತರಲಿಕೆಯ ಮೋರೆ ನೋಡ ಹತ್ತಿದನು. ನಾನು ಆತನ ಅಭಿಪ್ರಾಯ ತಿಳಿದು 'ಸ್ವಾಮಿ, ಈಕೆ ನನ್ನ ಜೀವದ ಗೆಳತಿಯು, ನಮ್ಮ ಶರೀರಗಳೇ ಬೇರೆಯಲ್ಲದೆ ಪ್ರಾಣವೊಂದೇ; ಆದರೆ ತಾವು ಏನಾದರೂ ಮಾತಾಡುವದಿದ್ದರೆ ನಿಃಶಂಕೆಯಿಂದ ಮಾತಾಡಬೇಕು' — ಎಂದು ಹೇಳಿಕೊಂಡೆನು.

ಆ ಮೇಲೆ ಕಪಿಂಜಲನು— 'ತಾಯಿ ರಾಜಪುತ್ರೀ, ಏನು ಹೇಳಲಿ? ಈ ವಿಷಯವಾಗಿ ಮಾತಾಡೇನೆಂದರೆ ನಾಚಿಕೆಯಿಂದ ನನ್ನ ನಾಲಿಗೆಯೇ ಏಳಲೊಲ್ಲದು. ನೋಡು, ಕಂದಮೂಲಗಳನ್ನು ತಿಂದು ವನದಲ್ಲಿ ವಾಸ ಮಾಡುವ ಶಾಂತಚಿತ್ತರಾದ ತಪೋನಿಷ್ಠರೆತ್ತ? ವಿಷಯಾಸಕ್ತರಾದ ಕಾಮುಕರು ಅಂಗೀಕರಿಸುವ ಮಲಿನವಾದ ವಿಷಯಪ್ರಪಂಚವೆತ್ತ? ಒಂದಕ್ಕೊಂದು

ಸಂಬಂಧವೇ ಇಲ್ಲ. ಹೀಗಿರಲಾಗಿ ನೋಡು, ದೈವವು ನಮ್ಮನ್ನು ಏನು ಮಾಡಹಚ್ಚಿತು! ಎರಡನೆಯ ಉಪಾಯವೇ ಇಲ್ಲ; ಹೇಳದಿದ್ದರೆ ಬಹಳ ಅನರ್ಥವಾಗುವಂತಿದೆ. ಪ್ರಾಣವನ್ನು ಸಹ ಕೊಟ್ಟು ಮಿತ್ರನನ್ನು ಉಳಿಸಿ ಕೊಳ್ಳಬೇಕೆಂದು ನೀತಿಯುಂಟು. ನಾನು ಅವನಿಗೆ ಸಿಟ್ಟಿನಿಂದಲೂ ನಿಷ್ಠುರತೆ ಯಿಂದಲೂ ಬುದ್ಧಿಯ ಹೇಳಿದ್ದು ನೀನು ಕೇಳಿರಬಹುದು. ಅವನ ನಡತೆ ನನಗೆ ಸರಿಬಾರದ್ದರಿಂದ ನಾನು ಅವನನ್ನು ಅಲ್ಲಿಯೇ ಬಿಟ್ಟು, ಹೂವುಗಳನ್ನೆತ್ತುವ ನೆನಮಾಡಿ ಒತ್ತಟ್ಟಿಗೆ ಹೋದೆನು. ಬಳಿಕ ನೀನೂ ಅಲ್ಲಿಂದ ಹೋದದ್ದು ತಿಳಿದು, ಇವನೊಬ್ಬನೇ ಏನು ಮಾಡುತ್ತಾನೋ ನೋಡಬೇಕೆಂದು ಒಂದು ಗಿಡದ ಮರೆಗೆ ನಿಂತು ನೋಡಿದೆನು; ಆದರೆ ಅವನು ಅಲ್ಲಿ ಕಾಣಲಿಲ್ಲ. ಆಗ ನನ್ನ ಮನದೊಳಗೆ ಇವನು ಕಾಮವಶನಾಗಿ ನಿನ್ನ ಬೆನ್ನು ಹತ್ತಿ ಬಂದನೋ ಅಥವಾ ನೀನು ಇತ್ತ ಬಂದ ಬಳಿಕ ಮೈಮೇಲೆ ಎಚ್ಚರಹುಟ್ಟಿ ಲಜ್ಜೆಯಿಂದ ಇನ್ನೇನು ಮೋರೆಯ ತೋರಿಸಲೆಂದು ಎಲ್ಲಿಗಾದರೂ ಎದ್ದು ಹೋದನೋ, ನನ್ನ ನಿಷ್ಠುರ ಮಾತಿಗೆ ಸಿಟ್ಟಿಗೆದ್ದು ಇನ್ನು ಇವನ ಸಂಗತಿಯೇ ಸಾಕೆಂದು ನನ್ನನ್ನು ತೊರೆದು ಹೋದನೋ, ಅಥವಾ ನನ್ನನ್ನೇ ಹುಡುಕುತ್ತ ಎರಡನೆಯ ಪ್ರದೇಶಕ್ಕೆ ಹೋದನೋ ಎಂಬ ಹಲವು ಕಲ್ಪನೆಗಳು ಹುಟ್ಟಿದವು. ಹುಟ್ಟಿದಂದಿನಿಂದ ನಾನೂ ಅವನೂ ಎಂದೂ ಅಗಲಿದ್ದಿಲ್ಲ; ಆದುದರಿಂದ ನಾನು ಮನದೊಳಗೆ 'ಖೇದಗೊಂಡು ಧೈರ್ಯಗೆಟ್ಟದ್ದರಿಂದ ವ್ಯಾಕುಲನಾಗಿ, ಮಾಡಿದ ಕರ್ಮಕ್ಕೆ ಪಶ್ಚಾತ್ತಾಪಪಟ್ಟು ಜೀವಕ್ಕೇನಾದರೂ ಮಾಡಿಕೊಂಡನೋ ಏನೋ' ಎಂದು ಆತನನ್ನು ಹುಡುಕಲಾರಂಭಿಸಿದೆನು. ಎಷ್ಟು ಹುಡುಕಿದರೂ ಆತನು ನನ್ನ ಕಣ್ಣಿಗೇ ಬೀಳದ್ದರಿಂದ ನಾನು ಎದೆಯೊಡೆ ಕೊಂಡು ಚಿಂತಿಸುತ್ತ ಹೂದೋಟದೊಳಗೂ ಗಿಡದ ಗುಂಪಿನೊಳಗೂ ನೋಡಿ ಸರೋವರದ ದಂಡೆಯ ಹಿಡಿದು ನಾಲ್ಕೂ ಕಡೆಗೆ ಹುಡುಕುವಷ್ಟರೊಳಗೆ ಅರಳುಮಲ್ಲಿಗೆಯ ಮಂಟಪದೊಳಗೆ ಒಂದು ಹಾಸುಗಲ್ಲಿನ ಮೇಲೆ ಕುಳಿತಿದ್ದನು. ಹತ್ತರ ಹೋಗಿ ನೋಡುತ್ತೇನೆ— ಸಣ್ಣ ಮೋರೆಯ ಮಾಡಿಕೊಂಡು, ಕೀಲು ಗಣ್ಣು ಹಾಕುತ್ತ, ಕಣ್ಣೀರು ಸುರಿಸುತ್ತ, ಆಗಾಗ ಬಿಸುಸುಯ್ಯುತ್ತ, ಎಡ ಗಲ್ಲಕ್ಕೆ ಎಡಗೈ ಹಚ್ಚಿಕೊಂಡು, ಕೊರಳೊಳಗಿನ ಮುತ್ತಿನ ಸರವನ್ನು ಎದೆಗೆ ಅವಚಿಕೊಂಡು, ಮೋಹಿತನೋ, ಮೂರ್ಛಿತನೋ, ಮರುಳು ಹಿಡಿದಾತನೊ, ನಿದ್ರಿತನೋ, ಸಮಾಧಿಸ್ಥನೋ, ಭೂತಗ್ರಸ್ತನೋ ಅನ್ನುವ ಹಾಗೆ ಅತ್ತಿತ್ತ

ನೋಡದೆ, ಬಾಯಿಂದ ಆಡದೆ, ಎಲ್ಲ ವ್ಯಾಪಾರಗಳನ್ನು ತೊರೆದು ಸ್ತಬ್ಧನಾಗಿ ಗೊಂಬೆಯಂತೆ ಕುಳಿತಿದ್ದನು. ಆತನ ಮುಖವು ಬೆಳ್ಳಗಾಗಿ ಕಂದಿತ್ತು. ಇಂಥ ಅವಸ್ಥೆಗೊಳಗಾದ ನನ್ನ ಗೆಳೆಯನಾದ ಪುಂಡರೀಕನನ್ನು ದಿಟ್ಟಿಸಿನೋಡಿ ನನ್ನ ಮನಸ್ಸು ಬಹಳ ಮರುಗಿತು. ಇಂಥ ವಿರಕ್ತನನ್ನು ಒಂದು ಕ್ಷಣದೊಳಗೇ ಈ ಹಾಡು ಮಾಡಿದ ಮದನನು ಎಂಥ ಸಮರ್ಥನು ! ಇಂಥ ಜ್ಞಾನರಾಶಿಯು ಒಮ್ಮಿಂದೊಮ್ಮೆಲೇ ಹೀಗೆ ಬರಿಯದಾಯಿತಲ್ಲವೇ ! ಇದಕ್ಕೇನೆನ್ನಬೇಕು ? ಎಷ್ಟು ಆಶ್ಚರ್ಯವಿದು !! ಚಿಕ್ಕಂದಿನಿಂದ ಈ ಪುಂಡರೀಕನ ಗುಣಗಳನ್ನು ಬಲ್ಲೆನು. ಈತನ ನಿಶ್ಚಲಚಿತ್ತವೂ, ಸುಸ್ವಭಾವವೂ, ಸದಾಚಾರವೂ ನನಗೂ ಉಳಿದ ಋಷಿಕುಮಾರರಿಗೂ ಬಹು ಪ್ರಿಯಕರವಾಗಿದ್ದವು. ಕಾಮನು ಇಂಥವನ ಜ್ಞಾನವನ್ನು ಲೆಕ್ಕಿಸದೆ, ತಪಃಪ್ರಭಾವವನ್ನು ಅಂದಗೆಡಿಸಿ, ಗಾಂಭೀರ್ಯವನ್ನು ಬೇರುಸಹಿತ ಕಿತ್ತು, ನಾಡಾಡಿಗರನ್ನು ಭಂಗಿಸುವಂತೆ ಇವನನ್ನು ಈ ಹೊತ್ತು ಪೂರಾ ವಿಷಯಲಂಪಟನನ್ನು ಮಾಡಿಬಿಟ್ಟನು. ಯೌವನಾವಸ್ಥೆಯಲ್ಲಿ ಮನಸ್ಸು ನಿಲುಕಡೆಗೊಳ್ಳುವದು ಬಹಳ ವಿರಳ ಎಂದು ಚಿಂತಿಸುತ್ತ ಅದೇ ಹಾಸುಗಲ್ಲಿನ ಮೇಲೆ ಒತ್ತಟ್ಟಿಗೆ ಪ್ಕೆಗೆಪ್ಕೆಹಚ್ಚಿ ಕುಳಿತು, ಅವನ ಹೆಗಲ ಮೇಲೆ ಕೈಹಾಕಿ, ‘ ಗೆಳೆಯಾ ಪುಂಡರೀಕಾ, ಇದೇನು ಮಾಡಿಕೊಂಡು ಕುಳಿತೆ ? ಎಲಾ ಕಣ್ಣು ತೆರೆದು ತುಸು ನನ್ನ ಕಡೆಗೆ ನೋಡು ! ’ ಎಂದು ನಾನು ಆಗ್ರಹಮಾಡಿದ ಬಳಿಕ ಆತನು ಆಯಾಸದಿಂದ ಮೆಲ್ಲನೆ ಕಣ್ಣು ತೆರೆದು ಬಹಳ ಹೊತ್ತು ನನ್ನ ಮುಖವನ್ನು ಮಂದದೃಷ್ಟಿಯಿಂದ ನೋಡಿ, ನಿಟ್ಟುಸುರುಬಿಟ್ಟು, ನಾಚಿಕೆಯಿಂದ ತೊದಲುತ್ತ—‘ ಕಪಿಂಜಲಾ, ನೀನು ಎಲ್ಲ ವೃತ್ತಾಂತವ ಬಲ್ಲವನಾಗಿ ನನ್ನನ್ನು ಏನು ಕೇಳುತ್ತೀ ! ’ ಎಂದು ಸಂಕಟದಿಂದ ಮೆಲ್ಲನೆ ಅಂದನು. ಆ ಮಾತು ಕೇಳಿ, ಇನ್ನು ಮೇಲೆ ಈ ವಿಚಾರವು ಶಾಂತವಾಗುವದು ದುಸ್ತರವೆಂದು ತಿಳಿದು, ಹೇಗಾದರೂ ಕೈಲಾದಮಟ್ಟಿಗೆ ಅಸನ್ಮಾರ್ಗದೊಳಗಿಂದ ಮಿತ್ರನನ್ನು ಎಳಕೊಳ್ಳಬೇಕೆಂದು ನಿಶ್ಚಯಿಸಿ— ‘ ಪುಂಡರೀಕಾ, ನನಗೆಲ್ಲ ಗೊತ್ತುಂಟು; ಆದರೆ ಮೊದಲು ಸವಿದೋರಿ ಕಡೆಗೆ ವಿರಸವಾಗುವಂಥ ವಿಷಯೋಪಭೋಗವು ಸುಖಕರವೆಂದು ತಿಳಿಯುವದು, ಧರ್ಮಬುದ್ಧಿಯಿಂದ ವಿಷವೃಕ್ಷಕ್ಕೆ ನೀರೆರೆದಂತೆ, ಕಮಲದ ಮಾಲೆಯೆಂದು ಖಡ್ಗವನ್ನು ಕೊರಳೊಳಗೆ ಹಾಕಿಕೊಂಡಂತೆ, ರತ್ನವೆಂದು ಸೆರಗಿನೊಳಗೆ ಕೆಂಕಿಯು ಕಟ್ಟಿಕೊಂಡಂತೆ ಆಗುವದು. ನೀನು ವಿಷಯುಗಳ

ತತ್ವವನ್ನು ತಿಳಿದೂ ತಿಳಿದೂ ಯಾಕೆ ಅಜ್ಞಾನದೊಳಗೆ ಬೀಳುತ್ತೀ? ಹರಿಯುವ ಇಂದ್ರಿಯಗಳನ್ನು ಯಾಕೆ ತಡೆಯಲೊಲ್ಲಿ? ಮನ್ಮಥನೆಂದರೆ ಯಾವ ದೊಡ್ಡ ಪದಾರ್ಥ! ಧೈರ್ಯ ಹಿಡಿದು ಆ ದುಷ್ಟನನ್ನು ಧಿಕ್ಕರಿಸು; ಕೀಳನಂತೆ ಅವನ ವಶನಾಗಬೇಡ' ಎಂದು ಹೇಳಲು ಅವನು ಈ ನನ್ನ ಮಾತುಗಳನ್ನು ಹಳಿದು, ಕಣ್ಣೀರು ಒರಿಸಿಕೊಳ್ಳುತ್ತ, 'ಕಪಿಂಜಲಾ, ನಿನಗೆ ಇನ್ನೂ ಕಾಮನ ಕೂರಂಬಿನ ಹೊಡತವು ತಗಲಿಲ್ಲ. ಆದುದರಿಂದ ನೀನು ಸ್ವಸ್ಥಚಿತ್ತನಾಗಿ ಸುಖದಿಂದ ನನಗೆ ಉಪದೇಶ ಮಾಡುತ್ತೀ. ಆದರೆ ಬುದ್ಧಿ, ಮನಸ್ಸು ಸದಸದ್ವಿಚಾರ ಶಕ್ತಿಗಳಿದ್ದವನಿಗೇ ನಿನ್ನ ಈ ಉಪದೇಶವು ಸಲ್ಲುವದು. ನಾನಂತೂ ಇವುಗಳಿಗೆ ಎರವಾಗಿದ್ದೇನೆ. ಧೈರ್ಯ, ಸ್ಥೈರ್ಯ, ಜ್ಞಾನ, ಇಂದ್ರಿಯನಿಗ್ರಹಗಳು ಆಗಲೇ ನನ್ನ ಕೈ ಬಿಟ್ಟವು. ಜೀವ ಮಾತ್ರ ಒಂದು ಉಳಿದಿದೆ; ಇಂಥ ಸಮಯದಲ್ಲಿ ನಿನ್ನ ಹೊರತು ನನಗೆ ಹಿತವಂತರೂ ಒಳಿತು ಹೇಳುವವರೂ ಯಾರು? ನಿನ್ನ ಹೊರತು ಯಾರ ಮಾತು ಕೇಳಲಿ? ಈ ಜಗದಲ್ಲಿ ನಿನ್ನ ವ್ಯತಿರಿಕ್ತ ನನಗೆ ಬಂಧುಗಳು ಯಾರು? ಏನು ಮಾಡಲಿ? ನನ್ನಿಂದ ಮಾತ್ರ ತಡೆಯುವ-ದಾಗದು. ನನ್ನ ಮೈಯೆಲ್ಲ ಸುಡುತ್ತದೆ; ಹೃದಯವು ಕುದಿಯುತ್ತದೆ; ದೃಷ್ಟಿಗಳು ಬೆಂದವು. ನನ್ನ ಯತ್ನವು ಮೀರಿತು. ಇನ್ನು ಇಂಥ ಪ್ರಸಂಗದಲ್ಲಿ ಯೋಗ್ಯ ಉಪಾಯವನ್ನು ನೀನೇ ಮಾಡಿ ನನ್ನನ್ನು ಉಳಿಸಿಕೊಳ್ಳಬೇಕು' ಎಂದು ಹೇಳಿ ಸುಮ್ಮನಾದನು.

ಇನ್ನು ನನ್ನ ಗೆಳೆಯನನ್ನು ಬದುಕಿಸಿಕೊಳ್ಳುವದಕ್ಕೆ ಏನು ಮಾಡಲಿ? ಯಾರಿಗೆ ಮೊರೆ ಹೊಗಲಿ, ಯಾರಿಗೆ ಹೇಳಲಿ, ಯಾವ ಉಪಾಯದಿಂದ ಈತನ ಪ್ರಾಣವು ಉಳಿದೀತು! ಎಂದು ಮನದೊಳಗೆ ಹಲವು ಹಂಚಿಕೆಗಳನ್ನು ಹಾಕುತ್ತ ಕುಳಿತೆನು. ಕಡೆಗೆ ಹೀಗೆ ಚಿಂತೆ ಮಾಡುತ್ತ ಕುಳಿತರೇನಾಗುವದು? ಒಳ್ಳೆಯ ಮಾರ್ಗದಿಂದಾಗಲಿ ಕೀಳು ಮಾರ್ಗದಿಂದಾಗಲಿ ಇವನನ್ನು ಬದುಕಿಸುವ ಯತ್ನವನ್ನು ಮಾಡತಕ್ಕದ್ದು ಎಂದು ನಿಶ್ಚಯಿಸಿ ನಿಮ್ಮ ಬಳಿಗೆ ಬಂದೆನು. ನಿಂದ್ಯ ಕರ್ಮವನ್ನಾದರೂ ಮಾಡಿ ಮಿತ್ರನ ಜೀವವುಳಿಸಬೇಕೆಂದು ದೊಡ್ಡವರು ಹೇಳುತ್ತಾರೆ; ಇದರ ಸಲುವಾಗಿ ಲಜ್ಜಾಸ್ಪದವಾದ ನಿಂದ್ಯ ಕರ್ಮಕ್ಕೆ ಒಳಗಾಗುವ ಪ್ರಸಂಗವು ಬಂತು. ಮತ್ತೊಂದು ಮಾರ್ಗವೇ ಇಲ್ಲ, ಎಂದು ಚಿಂತಿಸಿ ನಾನು ಆಕೆಯ ಬಳಿಗೆ ಹೋಗಿ ನಿನ್ನ ಅವಸ್ಥೆಯನ್ನು ಆಕೆಗೆ ತಿಳಿಸುತ್ತೇನೆ ಎಂದು ಆವನಿಗೆ ಹೇಳಿದರೆ, ನನ್ನ ಮಿತ್ರನು ನನ್ನ ಸಲುವಾಗಿ ಅಯೋಗ್ಯ

ವ್ಯಾಪಾರವನ್ನು ಮಾಡಪ್ರವರ್ತಿಸಿದನೆಂದು ತಿಳುಕೊಂಡು ಲಜ್ಜಿತನಾಗಿ ನನ್ನನ್ನು ತಡೆದಾನೆಂದು ತಿಳಿದು ಅವನಿಗೆ ನಾನು ಹೇಳದೆ ನಿನ್ನ ಬಳಿಗೆ ಬಂದೆನು. ಅವನ ಅವಸ್ಥೆಯನ್ನಂತೂ ನಿನಗೆ ತಿಳಿಸಿದೆನು. ಇನ್ನು ಮೇಲೆ ನನ್ನ ಮಿತ್ರನನ್ನು ಉಳಿಸಿಕೊಳ್ಳುವದು ನಿನ್ನ ಕೈಯೊಳಗುಂಟು; ನಿನ್ನ ದರ್ಶನದ ಹೊರತು ಆತನು ಉಳಿಯುವ ಹಾಗಿಲ್ಲ. ಇನ್ನು ನಾನು ಹೆಚ್ಚಿಗೆ ಹೇಳಲಾರೆನು" ಎಂದು ಅಂದು ನನ್ನ ಬಾಯಿಯಿಂದ ಏನು ಉತ್ತರ ಬರುತ್ತದೋ ಕೇಳ ಬೇಕೆಂದು ನನ್ನ ಮೋರೆಯ ನೋಡುತ್ತ ಸುಮ್ಮನೆ ಕುಳಿತನು.

ಈ ಮಾತು ಕೇಳಿ ನಾನು ಪ್ರೀತಿರಸದ ಸಮುದ್ರದೊಳಗೆ ಈಸಾಡಿ ಸುಖ ವೆಂಬ ಅಮೃತದ ಮಡುವಿನಲ್ಲಿ ಮುಳುಗಿ, ಇನ್ನು ನನ್ನ ಮನೋರಥವು ಕೈ-ಗೂಡಿತೆಂದು ಆನಂದದೊಳಗೆ ಮಗ್ನಳಾದೆನು; ಆ ಸುಖಾತಿಶಯದೊಳಗೆ ನನ್ನ ನೇತ್ರದಿಂದ ಆನಂದಬಾಷ್ಪಗಳುದುರಿದವು. ಕಾಮನು ಅವನನ್ನೂ ಪರವಶ ಮಾಡಿ, ನನಗೆ ಅನುಕೂಲಿಸಿ, ನಿಜವಾಗಿ ನನ್ನ ಮೇಲೆ ಉಪಕಾರ ಮಾಡಿದ ನೆಂದೂ, ಇಂಥ ಪ್ರಸಂಗದಲ್ಲಿ ನಾನು ಏನು ಉತ್ತರ ಕೊಡಬೇಕೆಂದೂ ಆಲೋಚಿ ಸುತ್ತ ಕುಳಿತಿರುವಷ್ಟರಲ್ಲಿ— ಒಬ್ಬ ದ್ವಾರಪಾಲಕನು ತವಕದಿಂದ ಬಂದು, 'ರಾಜಕನ್ನಿಕೆಯೇ, ನೀವು ಅಸ್ವಸ್ಥರಾಗಿದ್ದ ಸುದ್ದಿಯನ್ನು ಕೇಳಿ ಮಹಾರಾಣಿ ಯವರು ನಿಮ್ಮ ಸಮಾಚಾರಕ್ಕೆ ಬಂದರೆ'ಂದು ಹೇಳಿದನು. ಅದನ್ನು ಕೇಳಿ ಕಪಿಂಜಲ ಋಷಿಯು ಅಂಜಿ ಎದ್ದು ನಿಂತು, 'ರಾಜಪುತ್ರೀ, ಇನ್ನು ನಾನು ಕುಳಿತುಕೊಳ್ಳುವ ಸಮಯವಿಲ್ಲ, ಹೊತ್ತು ಮುಳುಗಿತು, ಹೋಗುತ್ತೇನೆ; ಆದರೆ ಎಲ್ಲ ಪರಿಯಿಂದ ನಿನ್ನ ಪ್ರಿಯನ ಪ್ರಾಣವನ್ನು ರಕ್ಷಿಸು ಕಂಡೆಯಾ!' ಎಂದು ಕೈಮುಗಿದು ಬೇಡಿಕೊಂಡು, ನನ್ನ ಪ್ರತ್ಯುತ್ತರದ ಮಾರ್ಗವ ನೋಡದೆ ನಮ್ಮ ತಾಯಿಯ ಸೇವಕರ ದಟ್ಟಣಿಯೊಳಗಿಂದ ನುಸುಳಿ, ಯುಕ್ತಿಯಿಂದ ಹೊರಬಿದ್ದು ಹೊರಟುಹೋದನು.

ನಮ್ಮ ತಾಯಿಯು ನನ್ನ ಹತ್ತಿರ ಬಂದು, ತುಸುಹೊತ್ತು ಕುಳಿತು ತಿರುಗಿ ತನ್ನ ಮಂದಿರಕ್ಕೆ ಹೋದಳು. ಆಗ ನನ್ನ ಮನಸ್ಸೆಲ್ಲ ಆ ಋಷಿಕುಮಾರ ನಲ್ಲಿಯೇ ತೊಡಗಿದ್ದರಿಂದ ಆಕೆ ಬಂದು ಏನು ಮಾತಾಡಿದಳೋ ನನಗೇನೂ ಅರಿವು ಇದ್ದಿಲ್ಲ. ಅವಳು ಹೋದ ಬಳಿಕ ಸೂರ್ಯಾಸ್ತಮಯವಾಗಿ ಮುಂಗಾ ವಳು ಕವಿಯಿತು. ಇನ್ನು ಮುಂದೆ ಏನು ಮಾಡಬೇಕೆಂಬುವದು ತಿಳಿಯದೆ ನಾನು ಮೂಢಳಾಗಿ ತರಲಿಕೆಯನ್ನು ಕುರಿತು— 'ತರಲಿಕೇ, ನನ್ನ ಮನಸ್ಸು

ತರಹರಗೊಳ್ಳದು, ಇನ್ನೇನು ಮಾಡಲಿ! ನೀನಾದರೂ ತಕ್ಕ ಹಂಚಿಕೆಯನ್ನು ಹೇಳೇ. ಆ ಕಪಿಂಜಲನು ಹೇಳಿದ್ದನ್ನೆಲ್ಲ ನೀನು ಕೇಳಿದಿಯಷ್ಟೇ. ಉಳಿದ ಕನ್ಯೆಯರಂತೆ ನಾಚಿಕೆದೊರೆದು, ಧೈರ್ಯಗೆಟ್ಟು, ಸದಾಚಾರಬಿಟ್ಟು, ಕುಲವನ್ನು ಲೆಕ್ಕಿಸದೆ, ಲೋಕಾಪವಾದಕ್ಕೆ ಹೆದರದೆ, ವಿಷಯಾಂಧಳಾಗಿ, ತಂದೆ ತಾಯಿಗಳ ಅನುಜ್ಞೆ ತಕ್ಕೊಳ್ಳದೆ, ಆತನ ಬಳಿಗೆ ಹೋಗಿ, ಅವನ ಪಾಣಿಗ್ರಹಣ ಮಾಡಿದರೆ, ಗುರುಹಿರಿಯರನ್ನು ಧಿಕ್ಕರಿಸಿದ ದೋಷವು ಬರುವದು. ಧರ್ಮದ ಪ್ರತಿಬಂಧದ ಮೂಲಕವಾಗಿ ಆತನ ಬಳಿಗೆ ಹೋಗದೆ, ನಾನೇ ಮೃತ್ಯುವಿಗೆ ತುತ್ತಾದರೆ ತಾನಾಗಿ ಬಂದ ಕಪಿಂಜಲನ ಮನೋಭಂಗ ಮಾಡಿದಂತಾಗುವದು. ಒಂದು ವೇಳೆ ಆಶಾಭಂಗ ಮಾಡಿದಳೆಂದು ನನ್ನ ಸಲುವಾಗಿ ಆ ಪುಂಡರೀಕನು ಪ್ರಾಣ ಕೊಟ್ಟರೆ, ಆ ಪಾಪವು ನನಗೆ ಜನ್ಮಜನ್ಮಾಂತರಕ್ಕೂ ಬಿಡದು. ಇನ್ನು ಮುಂದೆ ಏನು ಮಾಡಬೇಕು? ನೀನೇ ಹೇಳು' ಎಂದು ಮಾತಾಡುವಷ್ಟರಲ್ಲಿ ಮೂಡಣದಿಕ್ಕು ಬೆಳ್ಳಗಾಗಿ ಚಂದ್ರೋದಯವಾಯಿತು. ಚಂದ್ರನು ಮೇಲಕ್ಕೇರಿದ ಹಾಗೆ ನನ್ನ ಹೃದಯದೊಳಗಿನ ಮದನಾಗ್ನಿಯು ಪ್ರಜ್ವಲಿಸಿದ್ದರಿಂದ ವ್ಯಾಕುಲಚಿತ್ತಳಾಗಿ, ಕೂಡಲಾರದೆ ತರಲಿಕೆಯ ತೊಡೆಯ ಮೇಲೆ ತಲೆಯಿಟ್ಟು ಚಂದ್ರನನ್ನು ನೋಡುತ್ತ— 'ಮದನ, ಮಧುಮಾಸ, ಮಲಯಮಾರುತರು ಒಂದುಕಡೆ, ಈ ಚಂದ್ರನು ಒಂದು ಕಡೆ; ನೋಡು, ಕಾಮವ್ಯಥೆಯಿಂದ ನಾನು ಬಳಲುವಾಗಲೇ ಈತನು ಉದಿತನಾಗಿ, ಜ್ವರ ಬಂದವರ ಮೈಮೇಲೆ ಬೆಂಕಿಯ ಮಳೆಗರೆದಂತೆ ಮಾಡುತ್ತಾನೆ' ಎಂದು ಚಿಂತಿಸುತ್ತ, ಚಂದ್ರೋದಯದಿಂದ ಪದ್ಮಿನಿಯು ಮುಕುಳಿತವಾಗುವಂತೆ ಮೂರ್ಛೆ ಬಂದು ಕಣ್ಣು ಮುಚ್ಚಿದೆನು. ಆಗ ತರಲಿಕೆಯು ಗಾಬರಿಯಾಗಿ, ಚಂದನರಸವನ್ನು ನನ್ನ ಎದೆಗೆ ತೊಡೆದು, ತಾಲವೃಂತದಿಂದ ನನಗೆ ಗಾಳಿಯ ಹಾಕಿದಳು. ಆಗ ಎಚ್ಚರಗೊಂಡು ನನ್ನ ಅವಸ್ಥೆಗೆ ಕಣ್ಣೀರು ಸುರಿಸುವ ತರಲಿಕೆಯ ಮುಖವನ್ನು ಕಣ್ದೆರದು ನೋಡಹತ್ತಿದೆನು. ನಾನು ಕಣ್ಣು ತೆರೆದದ್ದನ್ನು ನೋಡಿ ತರಲಿಕೆಯು ನನಗೆ ಕೈ ಮುಗಿದು— 'ಭರ್ತೃದಾರಿಕೇ, ಇನ್ನು ಲಜ್ಜೆ ಯಾಕೆ? ಗುರುಹಿರಿಯರಿಗೆ ಇನ್ನು ಅಂಜಿ ಪ್ರಯೋಜನವೇನು? ಅಪ್ಪಣೆ ಕೊಡು. ನಿನ್ನ ಪ್ರಿಯನನ್ನು ಇಲ್ಲಿಗೆ ಕರತರುವೆನು; ಇಲ್ಲವೆ ನೀನೇ ಆತನ ಬಳಿಗೆ ಹೋಗುವ ಉದ್ಯೋಗಮಾಡು. ಇನ್ನು ಚಂದ್ರನು ಮೇಲಕ್ಕೇರಿದ ಹಾಗೆಲ್ಲ ನಿನ್ನ ಸಂತಾಪವು ಹೆಚ್ಚಾಗುತ್ತದೆ; ಆ ಸಂತಾಪವನ್ನು ನೀನು

ಸೈರಿಸಲಾರೆ; ಇನ್ನು ತಡಮಾಡಬೇಡ, ಬೇಗನೇ ಏಳು' ಎಂದ ತರಲಿಕೆಯ ನುಡಿಗಳನ್ನು ಕೇಳಿ, ನಾನು,—'ಗೆಳತೀ, ನೀನು ಆಡುವದು ನಿಜವು; ಈ ದೋಷಾಕರನಾದ ಚಂದ್ರನು ನನ್ನನ್ನು ಆ ಪ್ರಿಯನ ಬಳಿಗಾಗಲಿ, ಯಮನ ಬಳಿಗಾಗಲಿ ಒಯ್ಯಬೇಕೆಂದೇ ಉದಿತನಾಗಿದ್ದಾನೆ; ಇನ್ನು ತಾಳಲಾರೆನು. ಏಳು, ಜೀವವಿರುವದರೊಳಗೆ ಹೇಗಾದರೂ ಹೋಗಿ ಆ ಪ್ರಿಯನ ಮುಖವ ನೋಡುವಾ' ಎಂದು ಹೇಳಿ ಮನ್ಮಥವ್ಯಥೆಯಿಂದ ಅಶಕ್ತಳಾಗಿದ್ದರೂ ತರಲಿಕೆಯ ಕೈಹಿಡಿದು ಚಟ್ಟನೆ ಎದ್ದು ನಿಂತೆನು.

ನಾನು ಎದ್ದ ಕೂಡಲೆ ನನ್ನ ಬಲಗಣ್ಣು ಹಾರಿತು ಆ ದುಶ್ಚಿಹ್ನದಿಂದ ಮತ್ತೇನು ಅರಿಷ್ಟವು ಪ್ರಾಪ್ತವಾಗುತ್ತದೋ ಎಂದು ನನಗೆ ಸಂಶಯವು ತಟ್ಟಿತು.

ಅಷ್ಟರಲ್ಲಿ ಚಂದ್ರಬಿಂಬವು ಚೆನ್ನಾಗಿ ಮೇಲಕ್ಕೇರಿ ಭೂಮಂಡಲವನ್ನೆಲ್ಲ ಬೆಳದಿಂಗಳಿಂದ ಶೋಭೆಗೊಳಿಸಲಾಗಿ, ನಾನು ಕೊರಳೊಳಗೆ ರುದ್ರಾಕ್ಷ ಮಾಲೆಯನ್ನು ಹಾಕಿಕೊಂಡು, ಕಿವಿಯಲ್ಲಿ ಪಾರಿಜಾತ ಪುಷ್ಪಮಂಜರಿಯ ನ್ನಿಟ್ಟುಕೊಂಡು, ಕೆಂಪು ಶಾಲಜೋಡಿಯನ್ನು ತಲೆಯಮೇಲಿಂದ ಮೈತುಂಬ ಹೊದ್ದುಕೊಂಡು, ಯಾರಿಗೂ ತಿಳಿಯಗೊಡದೆ ಸೌಧಾಗ್ರದಿಂದ ಕೆಳಗೆ ಇಳಿದೆನು. ಆಗ ನನ್ನ ಸಂಗಡ ಹೂವುಗಳನ್ನೂ, ತಾಂಬೂಲವನ್ನೂ, ಸುಗಂಧ ದ್ರವ್ಯಗಳನ್ನೂ ತೆಗೆದುಕೊಂಡು ತರಲಿಕೆಯೂ ಬಂದಳು. ಆಕೆಯೂ ನಾನೂ ಪ್ರಮದವನದ ದಾರಿಯ ಹಿಡಿದು, ತೀವ್ರವಾಗಿ ಪುಂಡರೀಕನ ಬಳಿಗೆ ಹೋಗ ಬೇಕೆಂಬ ಲವಲವಿಕೆಯಿಂದ ಹೊರಟೆವು. ದಾರಿಯೊಳಗೆ ನಾನು—'ತರಲಿಕೇ, ಈ ಚಂದ್ರನು ನನ್ನನ್ನು ಮಂದಿರದೊಳಗೆ ಕೂಡಗೊಡದೆ ಹೊರಡಿಸಿದಂತೆ ಆ ಪುಂಡರೀಕನನ್ನೂ ನನ್ನ ಎದುರಿಗೆ ತಂದಾನೇನೆ?' ಎಂದು ನಾನು ಕೇಳಿ ದ್ದಕ್ಕೆ ಆಕೆ ಮುಗುಳ್ನಗೆ ನಕ್ಕು, ವಿನೋದದಿಂದ ನನಗೆ 'ರಾಜಕನ್ಯೇ, ನೀನು ಹುಚ್ಚಳು. ಈ ಚಂದ್ರನಿಗೆ ಆ ಪುಂಡರೀಕನಿಂದೇನು ಪ್ರಯೋಜನ? ನೋಡು, ತಾನೇ ಕಾಮಾತುರನಾಗಿ ನಿನ್ನ ಗಲ್ಲದ ಮೇಲಿನ ಬೆವರಹನಿ ಯೊಳಗೆ ಪ್ರತಿಬಿಂಬರೂಪದಿಂದ ಬಂದು ನಿಂತು, ನಿನಗೆ ಹೇಗೆ ಮುದ್ದು ಕೊಡುತ್ತಾನೆ! ನಿನ್ನ ಕಾಲ ಉಗುರೊಳಗೆ ಪ್ರತಿಬಿಂಬರೂಪದಿಂದ ಮೂಡಿ ನಿನ್ನ ಚರಣಕ್ಕೆರಗಿ, ದೈನ್ಯದಿಂದ ಹೇಗೆ ಬೇಡಿಕೊಳ್ಳುತ್ತಾನೆ ನೋಡು! ಪ್ರಿಯರಿಗೆ ಮೋಹಿತರಾಗದವರು ಯಾರು!' ಎಂದು ನಗೆಮಾತುಗಳನ್ನು

ಆಡುತ್ತಿರಲು, ಸಖಿಯೂ, ನಾನೂ ಅದೇ ಪ್ರದೇಶದ ಸಮೀಪದ ಚಂದ್ರಕಾಂತ ಮಣಿಯ ಝರಿಗೆ ಹೋಗಿ, ಹಾದಿಯ ಹುಡಿಯಿಂದಲೂ ಪುಷ್ಪಪರಾಗ ದಿಂದಲೂ ಮಲಿನವಾದ ಕಾಲು ತೊಳೆದುಕೊಂಡು ಮುಂದಕ್ಕೆ ಹೋಗಲು, ಪುಂಡರೀಕನಿದ್ದ ಸ್ಥಳದಿಂದ ಪುರುಷನು ಅಳುವ ಧ್ವನಿಯು ಕೇಳಬಂತು. ಮೊದಲೇ ನನ್ನ ಬಲಗಣ್ಣು ಹಾರಿದ್ದರಿಂದ ಮನಸ್ಸಿನೊಳಗೆ ಸಂಶಯವಿತ್ತೇ ಇತ್ತು; ಆ ಮೇಲೆ ಆ ರೋದನಧ್ವನಿಯನ್ನು ಕೇಳಿದ್ದರಿಂದಂತೂ ನನ್ನ ಹರಣವೇ ಹಾರಿತು; ಕಾಲುಗಳೇ ಏಳದ ಹಾಗಾದವು. ಏನು ಅನಿಷ್ಟವಾಯಿತೋ ಏನೋ ಎಂದು ಎದೆಯೊಡಕೊಂಡು, 'ತರಲಿಕೇ ಇದೇನಿದ್ದೀತು,' ಎಂದು ನಡುಗುತ್ತ ತತ್ತರಿಸುತ್ತ ಮುಂದಕ್ಕೆ ಹೋಗಲು,— "ಅಯ್ಯಯ್ಯೋ, ಏನು ಮೋಸವಾಯಿತು! ಒಮ್ಮಿಂದೊಮ್ಮೆಲೆ ಎಂಥ ಸಂಕಟ ಬಂತು! ಎಲಾ, ದುರಾತ್ಮಾ ಕಾಮಾ ನೀನು ಎಂಥ ನಿರ್ದಯನೋ, ಇಂಥ ಹೊಲ್ಲದ ಕೆಲಸ ಮಾಡಿದಿಯಾ! ಎಲೈ ನಿರ್ಘೃಣಮನಸ್ಕಳಾದ ಮಹಾಶ್ವೇತೇ, ನಿನಗೆ ಈತನು ಅಂಥದೇನು ಮಾಡಿದ್ದನೇ! ಪಾಪಾತ್ಮನಾದ ಚಾಂಡಾಳಾ ಚಂದ್ರಾ, ನಿನ್ನ ಹರಕೆ ಇಂದಿಗೆ ಕೈಗೂಡಿತೇ! ಈಗ ತಣ್ಣಗಾದಿಯಾ! ಮಲಯಮಾರುತಾ, ಈಗ ನಿನ್ನ ಮನೋರಥವು ಪೂರ್ಣವಾಯಿತೇ! ಇನ್ನು ಬೇಕಾದಷ್ಟು ಬೀಸು! ಎಲೈ ಪುತ್ರವತ್ಸಲನಾದ ಶ್ವೇತಕೇತೂ, ಮಗನು ಸತ್ತದ್ದು ನಿನಗೆ ಗೋಚರವೇ ಇಲ್ಲ. ಧರ್ಮವೇ, ಇಂದಿಗೆ ನೀನು ಬಯಲಾದಿ! ತಪವೇ, ಇಂದಿಗೆ ನೀನು ನಿರಾಶ್ರಯವಾದಿ! ಸರಸ್ವತಿಯೇ ಇಂದಿಗೆ ನೀನು ಪತಿಹೀನ ಳಾದಿ! ಸುರಲೋಕವೇ, ಇಂದಿಗೆ ನಮ್ಮ ಪಾಲಿಗೆ ಶೂನ್ಯವಾದಿ! ಅಯ್ಯೊ, ನನ್ನ ಜೀವದ ಗೆಳೆಯನೇ, ನಿನ್ನ ಬಿಟ್ಟು ನಾನು ಹೇಗೆ ಇಲ್ಲಿ ಇರಲಿ! ನಿನ್ನನ್ನು ಅಗಲಿ ನಾನೊಬ್ಬನೇ ಎಂದೂ ಒಂದು ನಿಮಿಷ ಸಹ ಇರುತ್ತಿದ್ದಿಲ್ಲ. ನನ್ನ ಮಾರ್ಗ ನಿರೀಕ್ಷಿಸು! ನಿನ್ನ ಬೆನ್ನ ಹಿಂದಿಂದಲೇ ಬಂದೆನು! ಇನ್ನು ನನ್ನೊಬ್ಬ ನನ್ನೇ ಇಲ್ಲಿ ಬಿಟ್ಟು ಅಪರಿಚಿತನಂತೆ ಒಮ್ಮಿಂದೊಮ್ಮೆಲೆ ನಿನಗೆ ಹೋಗ ಬೇಕೆನಿಸಿತೇ? ನನ್ನ ಮೇಲೆ ಇಂದು ಇಷ್ಟು ಬೇಸರವಾದ ಕಾರಣವೇನು? ಇನ್ನು ನಾನು ಯಾರ ಸಂಗಡ ತಿರುಗಾಡಲಿ? ಯಾರ ಕೂಡ ಮಾತಾಡಲಿ? ಯಾರಿಗೆ ಹೇಳಿಕೊಳ್ಳಲಿ? ಯಾರಿಗೆ ಮೊರೆಹೊಗಲಿ? ಇಂದಿಗೆ ನಾನು ಮುಂದುಗಾಣದವನಾದೆನು; ನಿರಾಶ್ರಿತನಾದೆನು; ಸುಖಹೀನನಾದೆನು. ಮಿತ್ರನೇ, ಇಷ್ಟು ಪ್ರಳಾಪಿಸುತ್ತೇನೆ. ನನಗೆ ಸ್ವಲ್ಪವಾದರೂ ಸಮಾಧಾನ

ಹೇಳೋ! ಎಲೈ ಪುಂಡರೀಕಾ, ನನ್ನ ಮೇಲಿನ ನಿನ್ನ ಪ್ರೇಮವು ಎತ್ತ ಹೋಯಿತು? ಮುಂಚೆ ನನ್ನ ಕೂಡ ಮಾತಾಡುವ ನಿನ್ನ ಸವಿಮಾತುಗಳು ಎತ್ತ ಹೋದವು?" ಎಂದು ಕಪಿಂಜಲನು ಹಾಡಿ ಹಾಡಿ ಅಳುವ ಧ್ವನಿಯು ನನ್ನ ಕಿವಿಗೆ ಬಿದ್ದ ಕೂಡಲೆ, ನಾನು ಎದೆ ಎದೆ ಬಡಕೊಳ್ಳುತ್ತ, ಅವಸರದಿಂದ ತೆಗ್ಗುಮುಗ್ಗುಗಳನ್ನು ನೋಡದೆ, ಓಡಿ ಬರುವಾಗ ನನ್ನ ಸೀರೆಯ ಸೆರಗು ಬಳ್ಳಿಗೆ ಸಿಕ್ಕು ಹರಿಯಿತು. ಆದರೂ ಅದನ್ನು ಲೆಕ್ಕಿಸದೆ ಆದಷ್ಟು ತ್ವರೆಮಾಡಿ, ಯಾರೋ ಎತ್ತಿಕೊಂಡು ಒಯ್ದರೊ ಏನೋ ಅನ್ನುವ ಹಾಗೆ ಆ ಸ್ಥಳಕ್ಕೆ ಹೋಗಿ ಮುಟ್ಟಿದೆನು. ನೋಡುತ್ತೇನೆ— ಚಂದ್ರಕಾಂತ ಶಿಲಾತಲದ ಮೇಲೆ ಕಮಲಪುಷ್ಪಗಳನ್ನೂ ಮೃಣಾಳಗಳನ್ನೂ ಹರವಿ ಹಾಸಿಗೆ ಮಾಡಿ, ಅದರ ಮೇಲೆ ಪುಂಡರೀಕನನ್ನು ಮಲಗಿಸಿ ಹತ್ತಿರ ಕಪಿಂಜಲನು ಅಳುತ್ತ ಕುಳಿ-ತಿದ್ದನು. ಆಗ ಇವನೇನು ನಿದ್ರಿತನೋ, ಮೂರ್ಛಿತನೊ, ಎಂದು ಸಂಶಯಗೊಳ್ಳುತ್ತ, ತೀರ ಸಮೀಪಕ್ಕೇ ಹೋದೆನು. ಕಪಿಂಜಲನು ಆತನ ಮೈತುಂಬ ಕರ್ಪೂರಚೂರ್ಣವ ತೊಡೆದು; ಕೊರಳೊಳಗೆ ಮೃಣಾಲಗಳನ್ನು ಹಾಕಿ, ಎದೆಯ ಮೇಲೆ ಬಾಳೆಯೆಲೆಗಳನ್ನು ಇಟ್ಟಿದ್ದನು; ಎದೆಗೆ ಎಡಗೈ ಹಚ್ಚಿಕೊಂಡು, ತಾವರೆಯ ತಲ್ಪದಮೇಲೆ ಬಲಗೈ ಚಲ್ಲಿ ಅದೇ ಜೀವ ಹೋದದ್ದರಿಂದ ನಿಶ್ಚೇಷ್ಟಿತನಾಗಿ ಅಂಗಾತ ಬಿದ್ದುಕೊಂಡ ಪುಂಡರೀಕನನ್ನು ಈ ಪಾಪದ ಕಂಣುಗಳು ನೋಡಿದವು. ನನ್ನನ್ನು ಕಂಡಕೂಡಲೇ ಆ ಕಪಿಂಜ-ಲನು ಅತಿ ದುಃಖದಿಂದ ದೊಡ್ಡ ಧ್ವನಿ ತೆಗೆದು ಪುಂಡರೀಕನ ಕೊರಳಿಗೆ ತೆಕ್ಕೆ-ಬಿದ್ದು ಅಳಹತ್ತಿದನು. ಆಗ ಪುಂಡರೀಕನು ಸತ್ತನೆಂದು ತಿಳಿದು ನಾನು ಪಾತಾಳಕ್ಕೇ ಇಳಿದೆನು; ಮೂರ್ಛೆ ಬಂದು ಕಣ್ಣಿಗೆ ಕತ್ತಲೆಗವಿಯಿತು. ನಾನೂ ಆಗಲೇ ಸತ್ತು ಹೋಗತಕ್ಕದ್ದು, ಆದರೆ ಮೂಢರ ಹೃದಯವು ಬಹು ಕಠಿಣವು. ಜನ್ಮಾಂತರದ ಪಾಪದ ಫಲವನ್ನು ಯಾರು ಅನುಭೋಗಿಸಬೇಕು? ದುಃಖದ ಸಂತಾಪದಿಂದ ಭೂಮಿಯ ಮೇಲೆ ಬಿದ್ದು ಹೊರಳಾಡಿ, ಹಲುಬಿ, ಹಂಬಲಿಸಿ, ಕಂಬನಿ ಸುರಿಸಿ, ಪುಂಡರೀಕನು ಸತ್ತು ನಾನು ಜೀವದಿಂದ ಇದ್ದದ್ದು ನನ್ನದು ನನಗೇ ಆಶ್ಚರ್ಯವಾಗಿ, ಇದು ಏನಾಯಿತೆಂದು ಗೋಳಿಟ್ಟು, 'ಎಲೈ ಪ್ರಾಣಕಾಂತಾ, ಪುಂಡರೀಕಾ, ನಿಷ್ಕರುಣಿಯೇ, ನಿನ್ನ ಸಲುವಾಗಿ ತಾಯಿ, ತಂದೆ, ಬಂಧು, ಬಳಗದವರನ್ನು ತೊರೆದು ಇಲ್ಲಿಗೆ ಬಂದೆನು; ನಿನ್ನನ್ನು ಆಗಲಿದಾಗ ಒಂದು ದಿನವೆಂಬುವದು ನನಗೆ ಒಂದು ಯುಗವಾಯಿತು.

ಈ ತರಲಿಕೆಯನ್ನು ಕೇಳು, ಬೇಕಾದರೆ; ಇಂಥಾಕೆಯನ್ನು ಬಿಟ್ಟು ಹೋಗು-ವದುಚಿತವೆ? ಮಾತಾಡು, ಇದೆಯೋ ನಿನ್ನ ಭಕ್ತವತ್ಸಲತೆ? ಕಣ್ಣು ತೆರೆದು ಸ್ವಲ್ಪಾದರೂ ನನ್ನನ್ನು ನೋಡು, ನಾನು ನಿನ್ನಲ್ಲಿ ಅನುರಕ್ತಳಾದ ದಾಸಿಯು, ದೀನಳು, ಅನಾಥಳು, ನಿನ್ನನ್ನು ನಂಬಿದ ತೊತ್ತು; ಇಂಥವಳಿಗೆ ದಯೆ ತೋರಿಸುವದು ನಿನ್ನ ಮನಸ್ಸಿಗೆ ಬರಲಿಲ್ಲವೇ? ನಾನು ಮಾಡಿದ ಅಪರಾಧವೇನು? ಹೇಳು; ನೀನು ಹೇಳಿದ್ದನ್ನು ನಾನು ಏನು ಕೇಳಲಿಲ್ಲ? ನಿನ್ನ ಪ್ರೀತಿಗೆ ನಾನು ಪ್ರತಿಕೂಲಳಾದದ್ದೇನು? ಸುಮ್ಮನೆ ಇಷ್ಟು ಮುನಿಸು ಯಾಕೆ? ನಚ್ಚಿದವಳನ್ನು ಕಾರಣವಿಲ್ಲದೆ ನಿರಾಕರಿಸಿದರೆ ನಿನಗೆ ಲೋಕಾಪ-ವಾದವು ಬಾರದೆ? ಇದು ನಿಜವೇ ಸರಿ, ಸುಳ್ಳೇ ಅನುರಾಗ ತೋರಿಸಿ ಮೋಸಗೊಳಿಸುವ ಸ್ತ್ರೀಯಿಂದ ನಿನಗೇನು ಪ್ರಯೋಜನವು! ಅಯ್ಯೋ ದೈವವೇ, ಇನ್ನೂ ನಾನು ಜೀವ ಹಿಡಿದಿರಬೇಕೆ! ಎಲೈ ಪ್ರಾಣಪ್ರಿಯನೇ, ನೀನು ನನಗೆ ಇಲ್ಲವಾದದರಿಂದ ತಾಯಿ, ತಂದೆ, ಬಂಧು, ಬಳಗ, ಇಹಲೋಕ, ಪರಲೋಕವೆಲ್ಲ ನನ್ನ ಪಾಲಿಗೆ ಇಲ್ಲದ ಹಾಗಾದವು; ನೀನು ನನ್ನ ಕೈಬಿಟ್ಟು ಹೋದುದರಿಂದ ಎಲ್ಲರೂ ನನ್ನ ಕೈ ಬಿಟ್ಟರು. ಏನಾಯಿತು ನನ್ನ ಜನ್ಮ! ನನ್ನ ಸಲುವಾಗಿ ನಿನ್ನ ಅವಸ್ಥೆ ಹೀಗಾದ ಬಳಿಕ ನಾನು ಎಂಥ ಪಾಪಿಷ್ಠಳು! ನಿನ್ನನ್ನು ಬಿಟ್ಟು ಮನೆಗೆ ಹೋದ ನನ್ನಂಥ ಕ್ರೂರಹೃದಯಳು ಇನ್ನಾವಳಿರುವಳು! ನಿನಗಿಂತ ಹೆಚ್ಚಿನದು ಅಂಥದೇನು ನನಗೆ ಮನೆಯೊಳಗಿತ್ತು! ನನ್ನ ಬಾಳ್ವೆ ಸುಡಲಿ! ಇನ್ನು ಯಾರಿಗೆ ಶರಣುಹೋಗಲಿ! ಯಾರಿಗೆ ಮೊರೆಯಿಡಲಿ! ಯಾರು ನನ್ನ ಪ್ರಲಾಪವನ್ನು ಕೇಳುವರು!' ಎಂದು ಹಲುಬುತ್ತ ಆತನ ಗಲ್ಲವನ್ನೂ, ಹಣೆ ಯನ್ನೂ, ಹೃದಯವನ್ನೂ, ಕೈಯಿಂದ ಮುಟ್ಟಿ ಮುಟ್ಟಿ, 'ಪುಂಡರೀಕಾ, ನೀನು ಬಹು ನಿರ್ದಯನು! ನಿಷ್ಠುರನು! ಇಷ್ಟು ಪರಿಯಿಂದ ಹಲುಬಿ ಹಂಬಲಿಸುವವ ಳನ್ನು ನೀನು ಲೆಕ್ಕಿಸಲೊಲ್ಲಿ! ಇಂಥ ಕಲ್ಲು ಮನಸ್ಸಿನವನೆಂಬದನ್ನು ನಾನು ತಿಳಿ ಯದೆ ಮೋಸಹೋದೆನು.' ಎಂದು ಅವನನ್ನು ಜರೆದು, ಅವನ ಮುಖಕ್ಕೆ ಮುದ್ದು ಕೊಟ್ಟು ಎದೆಗೆ ಎದೆ ಹಚ್ಚಿ ಅಪ್ಪಿಕೊಂಡಾಗ ಆತನ ಕೊರಳೊಳಗಿನ ಮುತ್ತಿನ ಸರವು ನನ್ನ ಎದೆಗೆ ನಟ್ಟಿತು. ಆಗ ಆ ಮಾತು ನೆನಪಾದುದರಿಂದಂತೂ ನಾನು ಕಿಚ್ಚಿನೊಳಗೆ ಬಿದ್ದ ಕೀಡಿಯಾಗಿ 'ಅಯ್ಯೋ, ನನ್ನ ಮುತ್ತಿನ ಏಕಾವಳಿಯೇ, ನೀನು ಸಹ ಇಷ್ಟು ನನ್ನ ಮೇಲೆ ಮುನಿದಿಯಾ? ಕೊರಳು

ಕೊಟ್ಟವರ ಕುತ್ತಿಗೆಯ ಕೊಯ್ಯಬೇಕೇ ? ನಾನು ತಿರುಗಿ ಬರುವತನಕ ನನ್ನ ಪ್ರಿಯನ ಪ್ರಾಣವನ್ನು ಉಳಿಸಿಕೊಳ್ಳುವದು ನಿನ್ನಿಂದಾಗಲಿಲ್ಲ ! ಕಡೆಗೆ ನಿನ್ನ ಕಠಿಣ ಗುಣವನ್ನು ತೋರಿಸಿಕೊಂಡಿ ! ಕಪಿಂಜಲಾ, ನಿನ್ನ ಕಾಲು ಬೀಳುತ್ತೇನೆ; ತರಲಿಕೇ, ನಿನಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ; ಹೇಗಾದರೂ ಮಾಡಿ ನನ್ನ ಮನೋವಲ್ಲಭನನ್ನು ಉಳಿಸಿಕೊಳ್ಳಿರಿ !' ಎಂದು ಭೂಮಿಯ ಬಗಿದು ಶೋಕಿಸಿದೆನು" ಎಂದು ಮಹಾಶ್ವೇತೆಯು ಹೇಳುತ್ತ ಆ ದುಃಖದ ಭರದೊಳಗೆ ಮೈಮರೆದು ಮೂರ್ಛಿತಳಾಗಿ ನೆಲದ ಮೇಲೆ ಬಿದ್ದಳು ; ಅದನ್ನು ಕಂಡು, ಚಂದ್ರಾಪೀಡನು ಗಾಬರಿಯಾಗಿ ತ್ವರೆಯಿಂದ ಆಕೆಯ ನೆತ್ತಿಗೆ ನೀರು ಬಡಿದು, ಗಾಳಿಯ ಹಾಕಿ ಆಕೆಯನ್ನು ಎಚ್ಚರಗೊಳಿಸಿದನು. ಚಂದ್ರಾಪೀಡನೂ ಆ ವೃತ್ತಾಂತವನ್ನು ಕೇಳಿ ದುಃಖಿತನಾಗಿ- "ತಾಯೀ ಮಹಾಶ್ವೇತೇ, ಇನ್ನು ಸಾಕು ಮಾಡು ! ನಿನ್ನ ದುಃಖಕ್ಕೆ ನಾನೇ ಕಾರಣವಾದೆನು. ನಾನು ಮಹಾ ಪಾಪಾತ್ಮನು, ಇನ್ನು ನಿನ್ನ ಕಥೆ ಸಾಕು. ನಾನು ಕೇಳಲಾರೆನು. ಯಾಕಂದರೆ ತೀರಿಹೋದ ದುಃಖಗಳನ್ನು ಕಥನ ಮಾಡುತ್ತ ಕುಳಿತರೆ, ಆ ದುಃಖಗಳು ಸುಹೃಜ್ಜನರ ಹೃದಯಕ್ಕೆ ಪುನಃ ಹೊಸ ನೋವನ್ನು ಮಾಡುತ್ತವೆ. ಈಗ ಸದ್ಯಕ್ಕೆ ಅವುಗಳನ್ನು ದಿಟವಾಗಿ ಅನುಭೋಗಿಸುತ್ತೇವೋ ಏನೋ, ಅನ್ನುವಹಾಗೆ ಮನಸ್ಸಿಗೆ ಆಗುತ್ತದೆ. ಆ ಕಾರಣ ಕಷ್ಟದಿಂದ ಹೇಗಾದರೂ ಹಿಡಿದ ಪ್ರಾಣವನ್ನು ಆಗಾಗ ಸ್ಮರಣದಿಂದ ಹುಟ್ಟುವ ಶೋಕಾಗ್ನಿಯೊಳಗೆ ಹಾಕುವದು ಯೋಗ್ಯವಲ್ಲವು" ಎಂದು ಹೇಳಿದನು.

ಬಳಿಕ ಮಹಾಶ್ವೇತೆ ನಿಟ್ಟುಸುರು ಬಿಟ್ಟು ಕಣ್ಣೀರು ಸುರಿಸುತ್ತ ಖಿನ್ನ ಮುಖಳಾಗಿ—"ಎಲೈ ರಾಜಪುತ್ರನೇ, ಅಂಥ ಭಯಂಕರವಾದ ಇರುಳೊಳಗೆ ಹೋಗದ ಈ ಪಾಪಿಯ ಪ್ರಾಣವು ಇನ್ನು ಹೋಗುವದು ದೂರವು. ಯಮನು ಕೂಡ ನನ್ನ ದರ್ಶನಕ್ಕೆ ಬೇಸರಗೊಂಡಹಾಗಾಯಿತು. ಇಂಥ ಪಾಪಾತ್ಮಳಾದ ನಾನು ಕೊನೆಗೆ ಜೀವಕೊಡಬೇಕೆಂದು ನಿಶ್ಚೈಸಿ, 'ತರಲಿಕೇ, ಇನ್ನೆಷ್ಟು ಪ್ರಲಾಪಿಸಲಿ ? ಏಳು, ಬೇಗನೆ ಕಾಷ್ಠಗಳನ್ನು ಕೂಡಿಸಿ ಚಿತೆಯನ್ನು ಸಿದ್ಧಮಾಡು. ನನ್ನ ಪ್ರಾಣವಲ್ಲಭನ ಕೂಡ ನಾನೂ ಹೋಗುತ್ತೇನೆ' ಎಂದು ಅವಳಿಗೆ ಹೇಳುವಷ್ಟರೊಳಗೆ ಚಂದ್ರಮಂಡಲದೊಳಗಿಂದ ಶುಭ್ರಶರೀರದ ದಿವ್ಯಾಕೃತಿಯ ಒಬ್ಬ ಪುರುಷನು, ಕಿರೀಟ ಹಾಕಿಕೊಂಡು,

ಕಟಕಕುಂಡಲಮುಕ್ತಾಹಾರಗಳನ್ನು ಧರಿಸಿಕೊಂಡು, ಮೈಗೆ ಸುಗಂಧದ್ರವ್ಯಗಳನ್ನು ಪೂಸಿಕೊಂಡು ಸರ್ರನೆ ಇಳಿದು ಬಂದು, ತನ್ನ ನಿಡುದೋಳುಗಳಿಂದ ಪುಂಡರೀಕನ ಕಳೇವರವನ್ನೆತ್ತಿಕೊಂಡು ಗಂಭೀರವಾಣಿಯಿಂದ- 'ಎಲೈ ಮಹಾಶ್ವೇತೇ, ನೀನು ಪ್ರಾಣ ಕೊಡಬೇಡ, ನಿನಗೆ ಪುನಃ ಈತನ ಸಮಾಗಮವಾಗುವದು' ಎಂದು ತಂದೆಯಂತೆ ನನಗೆ ಆದರದಿಂದ ಪ್ರಸಾದವಚನ ಕೊಟ್ಟು, ಪುಂಡರೀಕನನ್ನು ತಕ್ಕೊಂಡು ಆಕಾಶಕ್ಕೆ ಹಾರಿಹೋದನು. ನಾನು ಅದನ್ನು ನೋಡಿ ಭಯಕೌತುಕಗೊಂಡಿರಲು ಕಪಿಂಜಲನೂ ನನಗೆ ಉತ್ತರ ಸಹ ಕೊಡದೆ ತವಕದಿಂದೆದ್ದು, 'ಎಲೈ ದುಷ್ಟ, ಅಂತಕಾ, ನನ್ನ ಗೆಳೆಯನನ್ನು ಎಲ್ಲಿಗೆ ಒಯ್ಯುತ್ತೀ,' ಎಂದು ನಡು ಕಟ್ಟಿಕೊಂಡು ಕೋಪಾವಿಷ್ಟನಾಗಿ ಆ ಮಹಾಪುರುಷನ ಬೆನ್ನು ಹತ್ತಿ ತಾನೂ ಆಕಾಶಕ್ಕೆ ಹಾರಿಹೋದನು. ನೋಡನೋಡುವಷ್ಟರೊಳಗೆ ಅವರಿಬ್ಬರೂ ತಾರಾಮಂಡಲದೊಳಗೆ ಪ್ರವೇಶಿಸಿದರು. ಕಪಿಂಜಲನು ಸಹ ಹೋದುದರಿಂದಂತೂ ನನಗೆ ಇಮ್ಮಡಿ ದುಃಖವಾಯಿತು. ತರಲಿಕೆಯಂತೂ ಗದಗದನೆ ನಡುಗಿ ನೆಲಕ್ಕೆ ಬಿದ್ದು, ಇನ್ನು ಈಕೆ ಸಾಯುತ್ತಾಳೆಂದು ಖಿನ್ನಳಾಗಿ, ದೀನವಾಣಿಯಿಂದ ನನಗೆ— 'ಎಲೌ ರಾಜಕನ್ನೇ, ಇದು ಹೇಳಲಸದಳವಾದ ಸೋಜಿಗವಾಯಿತು! ಬಂದವನು ದಿವ್ಯಪುರುಷನಿದ್ದನು; ಬಹುತರವಾಗಿ ಇಂಥವರು ಆಡಿದ್ದು ಸಟಿಯಾಗುವದಿಲ್ಲ, ಇನ್ನು ಮೇಲೆ ನೀನು ಪ್ರಾಣ ಕೊಡುವದೇನೂ ಉಚಿತವಲ್ಲ. ಆತನ ಹಿಂದಿಂದೇ ಕಪಿಂಜಲನೂ ಹೋಗಿದ್ದಾನೆ. ಅವನು ತಿರುಗಿ ಬಂದಬಳಿಕ ಆ ದಿವ್ಯಪುರುಷನು ಯಾವಾತನು? ಎಲ್ಲಿಂದ ಬಂದನು? ಪುಂಡರೀಕನ ಶವವನ್ನು ಎಲ್ಲಿಗೆ ಯಾತಕ್ಕೆ ಒಯ್ದನು? ಆತನು ನಿನಗೆ ಪ್ರಸಾದವಚನ ಕೊಟ್ಟ ಕಾರಣವೇನು? ಇದನ್ನೆಲ್ಲ ತಿಳಿದುಕೊಂಡು ಮುಂದೆ ನೀನು ಮಾಡತಕ್ಕದ್ದನ್ನು ಮಾಡಬೇಕಲ್ಲದೆ ಸುಮ್ಮನೆ ಪ್ರಾಣತ್ಯಾಗ ಮಾಡುವದರಿಂದೇನು ಪ್ರಯೋಜನವು? ಹಾಗೆ ಮಾಡುವದೇನೂ ದೊಡ್ಡ ಮಾತಲ್ಲ. ಕೈಯೊಳಗೇ ಇದೆ; ಬೇಕಾದಾಗ ಮಾಡಬಹುದು. ಕಪಿಂಜಲನು ಜೀವದಿಂದಿರುವವದರೊಳಗೆ ನಿನಗೆ ದರ್ಶನ ಕೊಡದೆ ಇರನು. ಕಾರಣ ಅವನು ತಿರುಗಿ ಬರುವವರೆಗಾದರೂ ಮಾರ್ಗ ನೋಡು' ಎಂದು ಹೇಳಿ ನನ್ನ ಕಾಲಿಗೆರಗಿದಳು. ಆಗ ಅವಳ ಮಾತು ಕೇಳಿ ವಿಚಾರ ಮಾಡಿ, ಆಶೆಯಿಂದ ಇನ್ನೂ ಜೀವ ಹಿಡಿದಿದ್ದೇನೆ. ಆಶೆಯು ಸಲುವಾಗಿ ಯಾರು ಏನು

ಮಾಡರು ? ಬಳಿಕ ಅದೇ ಸರೋವರದ ದಂಡೆಯು ಮೇಲೆ, ಆ ದಿನ ಇರುಳು ಕಳೆಯುಬೇಕಾದರೆ ನನಗೂ ತರಲಿಕೆಗೂ ಒಂದು ಯುಗ ಕಳೆದ ಹಾಗಾಯಿತು.

ಬೆಳಿಗ್ಗೆ ಎದ್ದು ಅದೇ ಸರೋವರದಲ್ಲಿ ಮೈತೊಳಕೊಂಡು ಆ ಪುಂಡರೀಕನ ಮೇಲಿನ ಪ್ರೀತಿಯ ಸಲುವಾಗಿ ನಾನು ಆವನ ಕಮಂಡಲ, ವಲ್ಕಲ, ಅಕ್ಷ ಮಾಲೆಗಳನ್ನು ತಕ್ಕೊಂಡು, ಇನ್ನು ಮೇಲೆ ಈ ನಿಃಸಾರ ಸಂಸಾರ ಮಾಡ ಬೇಕೇ ! ಎಂದು ವೈರಾಗ್ಯದಿಂದ ತಾಯಿತಂದೆಗಳನ್ನು ತೊರೆದು, ಇಂದ್ರಿಯ ಗಳನ್ನು ತಡೆದು, ದೀನಬಂಧು ಪತಿತಪಾವನನಾದ ಪರಮೇಶ್ವರನಿಗೆ ಶರಣು ಹೋಗಿ, ಆತನನ್ನು ಆರಾಧಿಸುತ್ತ ಇಲ್ಲಿ ನಿಂತುಕೊಂಡೆನು. ಮರುದಿನ ಈ ಸುದ್ದಿಯ ಕೇಳಿ, ನನ್ನ ತಾಯಿತಂದೆಗಳು ಇಲ್ಲಿಗೆ ಬಂದು, ಪರಿಪರಿಯಿಂದ ಶೋಕ ಮಾಡಿ, ಅನೇಕ ಉಪಾಯಗಳಿಂದಲೂ, ಉಪದೇಶದಿಂದಲೂ ಪ್ರಾರ್ಥನೆಗಳಿಂದಲೂ ನನಗೆ ಸಮಾಧಾನ ಹೇಳಿ, ಮನೆಗೆ ಬರಬೇಕೆಂದು ಆಗ್ರಹ ಮಾಡಿದರು. ನಾನು ಆವರ ಮಾತು ಲೆಕ್ಕಿಸದೆ ಅವರನ್ನು ನಿರಾಕರಿಸಿ ದೆನು ; ಆದರೂ ಮಗಳೆಂಬ ಕರುಳಿನ ಸಲುವಾಗಿ ಅವರು ಹಲವು ದಿವಸ ಇಲ್ಲಿ ನಿಂತು ನನ್ನ ದೃಢನಿಶ್ಚಯವನ್ನು ಕಂಡು, ಕಡೆಗೆ ಆಶೆದೊರೆದು, ಮನೆಗೆ ಹೋದರು.

ತಂದೆತಾಯಿಗಳು ಹೋದಬಳಿಕ ಪ್ರಿಯನ ಸಲುವಾಗಿ ಕಣ್ಣೀರು ಸುರಿ. ಸುವದರಿಂಲೇ ಕೃತಜ್ಞತೆ ತೋರಿಸುತ್ತ ಶೋಕದಗ್ಧವಾದ ಈ ಶರೀರವನ್ನು ಹಲವು ನಿಯಮಗಳಿಂದ ಸವೆಸುತ್ತ ಈ ಸರೋವರದೊಳಗೆ ತ್ರಿಕಾಲ ಸ್ನಾನ ಮಾಡುತ್ತ ಪರಮೇಶ್ವರನನ್ನು ಆರಾಧಿಸುತ್ತ, ವನದೊಳಗಿನ ಫಲ ಮೂಲ ಗಳನ್ನು ಸೇವಿಸುತ್ತ, ಈ ಗವಿಯೊಳಗೆ ತರಲಿಕೆ ಸಹಿತ ಅತಿಶಯ ದುಃಖ ವನ್ನು ಅನುಭೋಗಿಸುತ್ತ ನಿಂತುಕೊಂಡಿದ್ದೇನೆ. ಇಂಥ ಪಾಪಾತ್ಮಳ ದರ್ಶನ ದಿಂದ ನಿಮ್ಮಂಥ ಭಾಗ್ಯಶಾಲಿಗಳಿಗೆ ಫಲವೇನು ? ನನ್ನಂಥ ನಿಂದ್ಯಳ ವೃತ್ತಾಂತ ಕೇಳುವದರಿಂದ ಪ್ರಯೋಜನವೇನು " ಎಂದು ಮೋರಿಗೆ ಸೆರಗು ಹಾಕಿಕೊಂಡು ದೊಡ್ಡ ಧ್ವನಿ ತೆಗೆದು ಅಳಹತ್ತಿದಳು.

ಚಂದ್ರಾಪೀಡನು ಮೊದಲೇ ಆಕೆಯ ವಿನಯಗುಣಕ್ಕೂ, ಮಧುರ ಭಾಷಣಕ್ಕೂ, ಶಾಂತಸ್ವಭಾವಕ್ಕೂ, ಗೌರವಕ್ಕೂ, ಪ್ರಸನ್ನ ಹೃದಯನಾಗಿ ದ್ದನು. ಮೇಲಾಗಿ ಆಕೆಯ ಸದ್ಭಾವ ಗರ್ಭಿತವಾದ ಈ ವೃತ್ತಾಂತ ಕೇಳಿದ್ದ ರಿಂದಂತೂ ಮನಸ್ಸು ಕರಗಿ ಅವಳ ವಿಷಯವಾಗಿ ಭಕ್ತಿಯೂ ಪ್ರೀತಿಯೂ

ಜನಿಸಿದ್ದರಿಂದ “ ತಾಯಿೂ ನೀನು ಪ್ರಿಯನ ಮೇಲಿನ ಪ್ರೇಮಕ್ಕೆ ಸರಿಯಾಗಿ ಆಚರಿಸತಕ್ಕವುಗಳನ್ನೆಲ್ಲ ಆಚರಿಸಿದಿ; ತಾಯಿತಂದೆ ಬಂಧುಬಳಗವನ್ನು ತ್ಯಜಿಸಿದಿ; ಸಂಪತ್ತಿನ ಸುಖಗಳನ್ನು ತೊರೆದಿ; ಕಷ್ಟಕಾರಕವಾದ ಈ ಅರಣ್ಯವಾಸವನ್ನೂ ಬ್ರಹ್ಮಚರ್ಯವ್ರತವನ್ನೂ ಕೈಕೊಂಡು ಕಾಯವನ್ನು ಕಂದಿಸಿದಿ; ಇನ್ನು ಉಳಿಯಿತೇನು ? ಪತಿ ತೀರಿದನೆಂಬ ಶೋಕದಿಂದ ಪ್ರಾಣ ಕೊಡುವದು ಮಾತ್ರ ಮೂರ್ಖತನವು. ವಿಚಾರಮಾಡಿ ನೋಡಿದರೆ ಇಂಥ ಪ್ರಾಣತ್ಯಾಗವು ಸ್ವಾರ್ಥಪರವೆನ್ನಬಹುದು. ಯಾಕಂದರೆ ಪ್ರಿಯನ ಸಲುವಾಗಿ ಆಗುವ ಶೋಕವೇದನೆಯನ್ನು ತಾನು ತಾಳಲಾರದೆ ಪ್ರಾಣ ಕೊಟ್ಟ ಹಾಗಾ-ಗುತ್ತದಲ್ಲದೆ, ಅದರಿಂದ ಸತ್ತ ಪ್ರಿಯನಿಗೇನು ಪ್ರಯೋಜನವು ? ಸತ್ತವನು ಪರಾಧೀನನಾಗಿ ಕರ್ಮಾರ್ಜಿತ ಭೂಮಿಗೆ ಹೋಗುವನು. ಅವನ ಸಲುವಾಗಿ ಈ ಪ್ರಾಣತ್ಯಾಗ ಮಾಡಿದವರು ಆತ್ಮಹತ್ಯಾದೋಷದಿಂದ ನರಕದೊಳಗೆ ಬೀಳುವರು. ಇನ್ನೂ ಜೀವದಿಂದ ಇದ್ದು ಸತ್ತವನಿಗಾಗಿ ಜಲಾಂಜಲಿದಾನ, ಪಿಂಡದಾನ ಮುಂತಾದವುಗಳನ್ನು ಮಾಡುತ್ತಿದ್ದರೆ, ಆತನ ಉಪಕಾರ ಸ್ಮರಿಸಿ, ಆತನಿಗೆ ಸದ್ಗತಿಯಾಗಲೆಂಬ ಇಚ್ಛೆಯಿಂದ, ಸತ್ಕೃತ್ಯ ಮಾಡಿದಂತೆ ಆಗುವದು. ಇಂಥವರಿಂದ ಉಭಯತಃ ಪ್ರಯೋಜನವು. ಹೀಗೆ ಮಾಡದೆ ಸುಮ್ಮನೆ ಆತ್ಮಘಾತ ಮಾಡಿಕೊಳ್ಳುವದರಿಂದ ಯಾವ ಸತ್ಕೃತ್ಯವನ್ನು ಮಾಡಿದ ಹಾಗಾಯಿತು ? ಇದರಿಂದ ಯಾರಿಗೂ ಪ್ರಯೋಜನವಿಲ್ಲ. ಜಯಶಾಲಿಯಾದ ಪಾಂಡುರಾಜನು ಕಿಂದಮ ಋಷಿಯ ಶಾಪದಿಂದ ಮೃತನಾಗಲು, ಆತನ ಪತ್ನಿ ಕುಂತಿಯು ಜೀವ ಕೊಡದೆ ಧೈರ್ಯಮಾಡಲಿಲ್ಲವೇ ? ಬಾಲಚಂದ್ರನಂತೆ ಆನಂದ ಕೊಡುವ ಅಭಿಮನ್ಯುವು ಭಾರತಯುದ್ಧದಲ್ಲಿ ಕಲಿತನದಿಂದ ಕಾದಿ ಮಡಿದ ಬಳಿಕ ಆತನ ಪ್ರಿಯಪತ್ನಿಯಾದ ಉತ್ತರೆಯು ಆತ್ಮಹತ್ಯ ಮಾಡಿಕೊಂಡಳೇ ? ಈ ಮೇರೆಗೆ ದೇವದೈತ್ಯ-ಮನುಷ್ಯ-ಗಂಧರ್ವರಲ್ಲಿ ಸಾವಿರಾರು ತರುಣಿಯರು ಪತಿರಹಿತರಾಗಿ ಪ್ರಾಣಕೊಡದೆ ಇದ್ದದ್ದನ್ನು ಕೇಳಿಬಲ್ಲೆವು. ಮತ್ತೂ ಪುಂಡರೀಕನ ಸಮಾಗಮವಾಗುವದೆಂದು ಆ ದಿವ್ಯ ಪುರುಷನು ಹೇಳಿದ್ದು ಎಂದಿಗೂ ಸಟೆಯಾಗದು. ಯಾಕಂದರೆ, ನಿನ್ನಲ್ಲಿ ದಯೆಹುಟ್ಟಿ ಆತನ ಪುನರುಜ್ಜೀವನ ಮಾಡಬೇಕೆಂತಲೇ ಆ ದಿವ್ಯ ಪುರುಷನು ಆತನನ್ನು ದೇವ ಲೋಕಕ್ಕೆ ಒಯ್ದಿದ್ದಾನೆ. ದೈವವು ಬಲವತ್ತರವು; ನಾವೆಲ್ಲರೂ ದೈವಾ ಧೀನರೇ ಸರಿ. ಬಂದುದನ್ನು ಅನುಭೋಗಿಸಿ ತೀರಸಬೇಕು. ಈ ಸಂಸಾರ

ಮಾರ್ಗವು ಅತಿ ಗಹನವು. ಇದರಲ್ಲಿ ಅಡಿಗಡಿಗೆ ಹಲವು ತರದ ಎಡರುಗಳು ಬರುತ್ತವೆ; ಧೈರ್ಯದಿಂದ ಅವುಗಳಿಗೆ ಈಡಾಗಿ ಅವುಗಳನ್ನು ನೀಗಬೇಕು" ಎಂದು ಒಗೆಬಗೆಯ ಮೃದುಭಾಷಣಗಳಿಂದ ಚಂದ್ರಾಪೀಡನು ಆಕೆಗೆ ಸಮಾಧಾನ ಹೇಳಿದನು.

ಅಷ್ಟರೊಳಗೆ ಸೂರ್ಯನು ಪಡುವಣಕಡಲ ಪಾಲಾಗಿ, ಕತ್ತಲೆಯಾಯಿತು. ಮಹಾಶ್ವೇತೆಯು ಮೆಲ್ಲನೆ ಎದ್ದು ಕಮಂಡಲದೊಳಗಿನ ಉದಕದಿಂದ ಕರ-ಚರಣಮುಖ ಪ್ರಕ್ಷಾಳನ ಮಾಡಿಕೊಂಡು, ಸಂಧ್ಯೋಪಾಸನೆ ತೀರಿಸಿ ದುಃಖ-ದಿಂದ ಬಿಸುಸುಯ್ಯುತ್ತ ವಲ್ಕಲದ ಹಾಸಿಗೆಯ ಮೇಲೆ ಕುಳಿತುಕೊಂಡಳು. ಚಂದ್ರಾಪೀಡನೂ ಎದ್ದು, ಸರೋವರಕ್ಕೆ ಹೋಗಿ ಕೈಕಾಲು, ಮುಖ ತೊಳೆದುಕೊಂಡು, ಸಂಧ್ಯಾವಂದನೆ ತೀರಿಸಿಕೊಂಡು ತಿರುಗಿ ಬಂದು, ಒಂದು ಹಾಸುಗಲ್ಲಿನ ಮೇಲೆ ಚಿಗುರೆಲೆಗಳನ್ನು ಹಾಸಿ, ಅದರ ಮೇಲೆ ಕುಳಿತುಕೊಂಡು, ಮನದೊಳಗೆ ಆ ಮಹಾಶ್ವೇತೆಯ ವೃತ್ತಾಂತವನ್ನು ನೆನೆದು, "ತಾಯೀ, ನಿನ್ನ ವನವಾಸದೊಳಗಿನ ಗೆಳತಿ ತರಲಿಕೆ ಎಂಬವಳು ಎಲ್ಲಿದ್ದಾಳೆ?" ಎಂದು ಕೇಳಿದನು. ಮಹಾಶ್ವೇತೆಯು—"ಎಲೈ ಭಾಗ್ಯವಂತನೇ, ಅಮೃತದಿಂದ ಅಪ್ಸರರದೊಂದು ಕುಲವು ಹುಟ್ಟಿದ್ದು ನಿನಗೆ ಮೊದಲೇ ಅರಿಕೆ ಮಾಡಿಕೊಂಡಿದ್ದೇನೆ; ಅದೇ ಕುಲದೊಳಗೆ ಮದಿರಾ ಎಂಬ ಕನ್ನಿಕೆಯು ಹುಟ್ಟಿದಳು. ಆಕೆಯನ್ನು ಗಂಧರ್ವರಾಜನಾದ ಚಿತ್ರರಥನು ಮದುವೆ ಮಾಡಿಕೊಂಡನು. ಅವರ ಉದರದಿಂದ ಲೋಕೋತ್ತರ ಲಾವಣ್ಯಾದಿ ಗುಣಗಳಿಂದ ಸಂಪನ್ನಳಾದ ಕಾದಂಬರಿ ಎಂಬವಳೊಬ್ಬಳೇ ಮಗಳು ಹುಟ್ಟಿದಳು. ಆ ಕಾದಂಬರಿಯೂ ನಾನೂ ಚಿಕ್ಕಂದಿನ ಓರಗೆಯ ಗೆಳತಿಯರು. ಆಕೆಯೂ ನಾನೂ ಒಂದೇ ಶಾಲೆಯಲ್ಲಿ ನೃತ್ಯ ಗೀತಾದಿ ಕಲೆಗಳನ್ನು ಕಲಿತೆವು; ಕೂಡಿಯೇ ಉಣ್ಣುವೆವು, ಕೂಡಿಯೇ ಆಡುವೆವು, ಒಂದೇ ಹಾಸಿಗೆಯ ಮೇಲೆ ಮಲಗುವೆವು. ನನ್ನ ಹೊರತು ಆಕೆಗೆ, ಆಕೆಯ ಹೊರತು ನನಗೆ, ಒಂದು ಕ್ಷಣ ಸಹ ಹೊತ್ತು ಹೋಗುತ್ತಿದ್ದಿಲ್ಲ; ಆ ನನ್ನ ಗೆಳತಿ ಕಾದಂಬರಿಯು, ಈ ನನ್ನ ದುಃಖದ ಸುದ್ದಿಯ ಕೇಳಿ ಬಳಲಿ ಬೆಂಡಾಗಿ, ನಾನು ದುಃಖದೊಳಗಿರುವ ತನಕ ತಾನು ಮದುವೆ ಮಾಡಿಕೊಳ್ಳಲಿಕ್ಕಿಲ್ಲೆಂದು ಕಟ್ಟುಮಾಡಿಕೊಂಡಿದ್ದಾಳೆ. ಮಗಳು ಈ ಮೇರೆಗೆ ದೃಢನಿಶ್ಚಯ ಮಾಡಿದ ಸುದ್ದಿಯ ಕೇಳಿ, ಆಕೆಯ ತಂದೆಯು ಬಹು ಚಿಂತಾಕ್ರಾಂತನಾಗಿದ್ದಾನೆ. ಆಕೆಯ ನೇಮವನ್ನು ಆಗಾಗ್ಗೆ ನೆನಸಿ

ಕೊಂಡು, ಇರುವ ಒಬ್ಬ ಮಗಳ ಗತಿ ಹೀಗಾಯಿತಲ್ಲ! ಎಂದು ಬಹಳ ಹಳಹಳಿಸುತ್ತಾನೆ; ಒಂದು ಕ್ಷಣವಾದರೂ ಆತನ ಮನಸ್ಸಿಗೆ ಸುಖವಿಲ್ಲ. ತಾನೇ ಮಗಳಿಗೆ ಹೇಳಲಾರದೆ, ಹೆಂಡತಿ ಮದಿರಾದೇವಿಯೂ ತಾನೂ ಕೂಡಿ ಮಾತಾಡಿಕೊಂಡು ಕ್ಷೀರೋದ ಎಂಬ ಕಂಚುಕಿಯ ಕೂಡ ನನಗೆ— 'ಮಗಳೇ ಮಹಾಶ್ವೇತೇ, ನಿನ್ನ ವರ್ತಮಾನ ಕೇಳಿ ನಾವು ತಳಮಳಗೊಂಡೆವು. ಅದರೊಳಗೆ ಇದೂ ಒಂದು ಎರಡನೆಯ ದುಃಖವು ಪ್ರಾಪ್ತವಾಯಿತು; ಈ ಪ್ರಸಂಗದಲ್ಲಿ ಕಾದಂಬರಿಗೆ ಬುದ್ಧಿಯ ಹೇಳುವದಕ್ಕೆ ನೀನೇ ಸಮರ್ಥಳು. ನಿನ್ನ ಹೊರತು ಎರಡನೆಯವರಿಂದ ಆಗದು' ಎಂದು ಅಪ್ಪಣೆ ಕಳಿಸಿದ್ದರು. ಅವರ ವಚನ ಗೌರವದ ಸಲುವಾಗಿಯೂ, ಗೆಳತಿಯ ಮೇಲಿನ ಪ್ರೇಮದ ಸಲುವಾಗಿಯೂ ನಾನು ಈ ಹೊತ್ತು ಮುಂಜಾನೆ ಆ ಕಂಚುಕಿಯ ಸಂಗಡ ತರಲಿಕೆಯನ್ನು ಕಾದಂಬರಿಯ ಬಳಿಗೆ—'ಸಖೀ ಕಾದಂಬರೀ, ದುಃಖಿತರಾದ ಪ್ರಿಯಜನರಿಗೆ ಮತ್ತೆ ಆಗಾಗ್ಗೆ ನೋವಿನ ಮೇಲೆ ಬರೆ ಕೊಟ್ಟ ಹಾಗೆ ಯಾಕೆ ಮಾಡುತ್ತೀ? ಮಾಡಬೇಡ, ನಾನು ಜೀವದಿಂದಿರಬೇಕೆಂಬುವದು ನಿನ್ನ ಮನಸ್ಸಿನೊಳಗಿದ್ದರೆ ತಾಯಿತಂದೆಗಳು ಹೇಳಿದಂತೆ ಕೇಳಿ, ಮದುವೆ ಮಾಡಿಕೊಳ್ಳು' ಎಂದು ಹೇಳಿ ಕಳಿಸಿದ್ದೇನೆ. ಈ ನನ್ನ ಮಾತು ಹೇಳಲಿಕ್ಕೆ ತರಲಿಕೆಯು ಅತ್ತ ಹೊರಟುಹೋದ ಕೂಡಲೆ ತಾವು ಇಲ್ಲಿಗೆ ಬಂದಿರಿ" ಎಂದು ಹೇಳಿದಳು.

ಅಷ್ಟರೊಳಗೆ ಚಂದ್ರೋದಯವಾಗಿ ಆಕಾಶವೆಲ್ಲ ಚಂದ್ರಿಕೆಯಿಂದ ಧವಲಿತವಾಗಿ ಶೋಭಾಯಮಾನವಾಯಿತು. ಬಳಲಿಕೆಯಿಂದ ಮುಗ್ಗಲು ಹೆಚ್ಚಿ ಕಣ್ಣುಮುಚ್ಚುವ ಮಹಾಶ್ವೇತೆಯನ್ನು ನೋಡಿ, ಮಲಗಿಕೊಳ್ಳಲೆಂದು ಚಂದ್ರಾಪೀಡನೂ ತಳಿರ ಹಾಸಿಗೆಯ ಮೇಲೆ ಒರಗಿ ತನ್ನನ್ನು ಕಳಕೊಂಡ ವೈಶಂಪಾಯನ ಪ್ರಧಾನನೂ, ಆ ಪ್ರಾಣಿ ಪತ್ರಲೇಖೆಯೂ ಆ ಅರಸು ಮಕ್ಕಳೂ ಏನು ಮಾಡುತ್ತಿದ್ದಾರು? ಎಂದು ಅವರನ್ನು ನೆನಸಿ ಚಿಂತಿಸುತ್ತ ನಿದ್ರೆಗೊಳಗಾದನು. ಬೆಳಗಾದ ಬಳಿಕ ಮಹಾಶ್ವೇತೆಯು ಪರಮೇಶ್ವರನ ಧ್ಯಾನ ಮಾಡುತ್ತ ಎದ್ದು, ಪ್ರಾತಃಸಂಧ್ಯೋಪಾಸನವನ್ನು ತೀರಿಸಿಕೊಂಡು, ಶಿಲಾತಲದ ಮೇಲೆ ಜಪ ಮಾಡುತ್ತ ಕುಳಿತಿರಲು, ಚಂದ್ರಾಪೀಡನೂ ದೇವರನ್ನು ಸ್ಮರಿಸುತ್ತ ಎದ್ದು ಪ್ರಾತಃಕಾಲಾಹ್ನಿಕವನ್ನು ತೀರಿಸಿಕೊಂಡು, ಮತ್ತೊಂದು ಶಿಲಾತಲದ ಮೇಲೆ ಕುಳಿತನು. ಆಗ ಹದಿನಾರು ವರ್ಷದ

ಹರೆಯದ ಭವ್ಯಾಕೃತಿಯ ಒಬ್ಬ ಗಂಧರ್ವ ಕುಮಾರನನ್ನು ಸಂಗಡ ಕರ ಕೊಂಡು ತರಲಿಕೆಯು ಬಂದು, ಇವನಾರು ಎಂದು ಕೌತುಕದಿಂದ ಚಂದ್ರಾ ಪೀಡನನ್ನು ದಿಟ್ಟಿಸಿ ನೋಡುತ್ತ, ಮಹಾಶ್ವೇತೆಯ ಬಳಿಗೆ ಹೋಗಿ, ಅತಿ ವಿನಯದಿಂದ ಆಕೆಗೆ ನಮಿಸಿ ಕುಳಿತಳು. ಬಳಿಕ ಆ ಗಂಧರ್ವ ಕುಮಾರನು ಭಕ್ತಿಭಾವದಿಂದ ಮಹಾಶ್ವೇತೆಗೆ ಪ್ರಣಾಮಂಗೈದು ಅವಳ ದೃಷ್ಟಿಯಿಂದ ಸೂಚಿತವಾದ ಶಿಲಾತಲದ ಮೇಲೆ ಕುಳಿತು, ಪೂರ್ವದಲ್ಲೆಂದೂ ನೋಡದಂಥ ಸುಂದರಕಾಯದ ಚಂದ್ರಾಪೀಡನನ್ನು ನೋಡಿ ವಿಸ್ಮಿತನಾದನು.

ಬಳಿಕ ಮಹಾಶ್ವೇತೆಯು ಜಪವನ್ನು ಮುಗಿಸಿ- "ತರಲಿಕೇ, ನೀನು ಕಾದಂಬರಿಯನ್ನು ಕಂಡೆಯಾ? ಆಕೆ ಸುಖದಿಂದಿರುವಳೇ? ನನ್ನ ಮಾತು ಮನ್ನಿಸುವಳೇ?" ಎಂದು ಕೇಳಿದ್ದಕ್ಕೆ ತರಲಿಕೆಯು—"ತಾಯಿಾ, ಕಾದಂಬರೀ ದೇವಿಯನ್ನು ನೋಡಿದೆನು. ಆಕೆ ಸುಖವಾಗಿ ಇದ್ದಾಳೆ. ನಿನ್ನ ಸಂದೇಶ ವನ್ನು ಅವಳಿಗೆ ನಿವೇದಿಸಿದೆನು. ಅದಕ್ಕೆ ಆಕೆ ಕಣ್ಣೀರು ಸುರಿಸಿ, ತಿರುಗಿ ಹೇಳಿದ ಸಂದೇಶವನ್ನು ನನ್ನ ಸಂಗಡ ಬಂದ ಆಕೆಯ ವೀಣೆಹಿಡಿಯುವ ಈ ಕೇಯೂರಕನೇ ಹೇಳುವನು" ಎಂದು ಸುಮ್ಮನಾದ ಕೂಡಲೆ, ಆತನು ಮುಂದೆಬಂದು—"ತಾಯಿಾ, ಮಹಾಶ್ವೇತೇ, ಕಾದಂಬರೀದೇವಿಯು ನಿನಗೆ ಆಲಿಂಗಿಸಿ, ವಿಜ್ಞಾಪಿಸುವದೇನೆಂದರೆ, 'ತರಲಿಕೆಯ ಕೂಡ ನೀವು ಹೇಳಿ ಕಳುಹಿದ ಸಂದೇಶವು ನನ್ನ ಮನಸ್ಸು ಪರೀಕ್ಷಿಸುವದಕ್ಕೋ, ಅಥವಾ ನಾನು ಮನೆಯಲ್ಲಿ ನಿಂತುಕೊಂಡದ್ದಕ್ಕೆ ನನ್ನ ಮೇಲಿನ ಪ್ರಕೋಪಕ್ಕೋ, ನನಗಂತೂ ತಿಳಿಯದು. ನಿನ್ನ ಸಲುವಾಗಿ ನನ್ನ ಹೃದಯವು ಪ್ರೇಮಭರಿತವಾದದ್ದೆಂದು ನಿನಗೆ ಮನವರಿಕೆಯಾಗಿದ್ದೂ ಇಂಥ ನಿಷ್ಠುರ ಸಂದೇಶ ಹೇಳಿ ಕಳುಹಿಸಿದ ಬಗೆ ಏನು? ಮಧುರ ಮಾತಿನ ಮಾನಿನೀ, ನಿನಗೆ ಇಂಥ ಕಠೋರ ಭಾಷಣವನ್ನು ಯಾರು ಕಲಿಸಿದರು? ಸುಹೃಜ್ಜನರ ದುಃಖದಿಂದ ದುಃಖಿತರಾದವರ ಮನ ಸ್ಸಿಗೆ ಸುಖದ ಆಶೆಯೂ ಶಾಂತಿಯೂ ಇನ್ನೆಲ್ಲಿಯವು? ಸೂರ್ಯನ ವಿಯೋಗ ದಿಂದ ಮ್ಲಾನವಾದ ಪದ್ಮಿನಿಯನ್ನು ಕಂಡು ಚಕ್ರವಾಕ ಪಕ್ಷಿಯು ಸಹ ಖಿನ್ನವಾಗಿ ಸುಖ ತೊರೆಯುತ್ತದೆ; ನಮ್ಮಂಥ ಪ್ರಿಯರು ಸುಮ್ಮನಿರುವರೇ? ಪ್ರಿಯನ ವಿರಹದಿಂದ ದುಃಖಿತ ಪ್ರಿಯಸಖಿಯಾದ ನಿನಗೆ ಹಗಲೂ ಇರುಳೂ ಮನೆಯಾದ ನನ್ನ ಮನಸ್ಸು ಪುರುಷನನ್ನು ಇಚ್ಛಿಸುವ ಬಗೆ ಯಾವದು? ವಿರಹ ದುಃಖಮೂಲಕವಾಗಿ ನೀನು ತಪಶ್ಚರ್ಯ ಮಾಡುತ್ತ ದೇಹವನ್ನು ಸಣ್ಣಿಸಿ

ಕಷ್ಟಗಳನ್ನು ಅನುಭೋಗಿಸುವಾಗಲೇ ನಾನು ನಿನ್ನ ದುಃಖಗಳನ್ನು ಲೆಕ್ಕಿಸದೆ ಮದುವೆ ಮಾಡಿಕೊಳ್ಳಬೇಕೇ? ಆ ಮಾತು ಕನಸು ಮನಸ್ಸಿನಲ್ಲಿ ಸಹ ತೆಗೆಯಬೇಡ. ನನ್ನ ಜೀವವು ನಿನ್ನ ಕೂಡ ವನದಲ್ಲಿಯೆ ಇದೆ ಎಂದು ತಿಳಿ,' ಎಂದು ನಿಮಗೆ ಕೈಮುಗಿದು ಕಾಲುಬಿದ್ದು ಬಿನ್ನವಿಸಿದಳು" ಎಂದು ಹೇಳಿದನು.

ಮಹಾಶ್ವೇತೆಯು ಆ ಮಾತು ಕೇಳಿ ಮನದೊಳಗೆ ಸ್ವಲ್ಪ ಹೊತ್ತು ಆಲೋಚಿಸಿ, "ನೀನು ಹೋಗು, ನಾನೇ ಅಲ್ಲಿಗೆ ಬರುತ್ತೇನೆ" ಎಂದು ಹೇಳಿ ಕೇಯೂರಕನಿಗೆ ತಿರುಗಿ ಹೋಗಲಪ್ಪಣೆಕೊಟ್ಟು, ಚಂದ್ರಾಪೀಡನಿಗೆ "ಎಲೈ ಭಾಗ್ಯಶಾಲಿಯಾದ ರಾಜಕುಮಾರನೇ, ನೀನು ಹೇಮಕೂಟ ಪರ್ವತವನ್ನು ನೋಡಿರಲಿಕ್ಕಿಲ್ಲ! ಅದರ ಮೇಲೆ ಚಿತ್ರರಥ ಗಂಧರ್ವರಾಜನ ಅತಿ ರಮಣೀಯವಾದ ರಾಜಧಾನಿಯುಂಟು. ಕಿಂಪುರುಷರೂ ಗಂಧರ್ವರೂ ಇರುವ ಕೌತುಕದ ಸುಂದರ ಲೋಕವು ಅದು. ಅಲ್ಲಿ ಸರಳ ಮನಸ್ಸಿನ ನನ್ನ ಜೀವದ ಗೆಳತಿ ಕಾದಂಬರಿಯು ಇದ್ದಾಳೆ. ದಾರಿಯ ನಡೆಯುವದರಿಂದ ತಮಗೆ ಶ್ರಮವಾಗದ ಹಾಗಿದ್ದರೆ, ತಮ್ಮ ಕಾರ್ಯಕ್ಕೆ ಅಡ್ಡಿಯಾಗದಂತಿದ್ದರೆ, ಆ ಅಪೂರ್ವ ಲೋಕವನ್ನು ನೋಡುವ ಕೌತುಕವನ್ನು ನೆರವೇರಿಸಬೇಕೆಂಬ ಇಚ್ಛೆಯಿದ್ದರೆ, ನನ್ನ ಪ್ರಾರ್ಥನೆಯನ್ನು ವ್ಯರ್ಥಮಾಡದ ಹಾಗಿದ್ದರೆ, ಅನುಗ್ರಹಕ್ಕೆ ನಾವು ಪಾತ್ರರೆಂದು ಮನವರಿಕೆಯಾದರೆ, ನೀವು ದಯಮಾಡಿ ನನ್ನ ಸಂಗಡ ಅಲ್ಲಿಯವರೆಗೆ ಬಂದು, ಕಾದಂಬರಿಯ ದರ್ಶನ ತೆಕ್ಕೊಂಡು, ಆಕೆಯ ಹಟವನ್ನು ನಿರಸನ ಮಾಡಿ, ಅಲ್ಲಿ ಒಂದು ದಿನ ವಿಶ್ರಮಿಸಿಕೊಂಡು ನಾಳಿಗೆ ಇಲ್ಲಿಗೆ ತಿರುಗಿ ಬರಬೇಕು. ಕಾರಣವಿಲ್ಲದೆ ನಮ್ಮ ನಿಮ್ಮ ಬಂಧುತ್ವವು ಘಟಿಸಿತು; ನಿಮ್ಮ ದರ್ಶನವಾದಾಗಿನಿಂದ ನನ್ನ ಚಿತ್ತವು ಸ್ವಸ್ಥವಾಗಿದೆ; ನಿಮಗೆ ನನ್ನ ವೃತ್ತಾಂತವನ್ನೆಲ್ಲ ಹೇಳಿಕೊಂಡದ್ದರಿಂದ ನನ್ನ ಶೋಕವು ಕಡಿಮೆಯಾಯಿತು. ಸಜ್ಜನರ ಸಮಾಗಮದಿಂದ ದುಃಖಿಗಳಿಗೆ ಸಹ ಸಮಾಧಾನವಾಗುತ್ತದೆ. ನಿಮ್ಮಂಥ ಮಹಾಪುರುಷರ ಗುಣೋದಯವು ಎರಡನೆಯವರಿಗೆ ಸುಖ ಕೊಡುವದರಲ್ಲಿಯೇ ತತ್ಪರವಾಗಿರುತ್ತದೆ" ಎಂದು ಹೇಳಿಕೊಂಡಳು. ಮಹಾಶ್ವೇತೆಯ ಈ ಮಾತುಗಳನ್ನು ಕೇಳಿ ಚಂದ್ರಾಪೀಡನು— "ತಾಯಿ, ನಿನ್ನ ದರ್ಶನವಾದಾಗಿನಿಂದ ಈ ದೇಹವು ನಿನ್ನದಾಗಿದೆ; ನಿನ್ನ ಇಚ್ಛೆಯೇ ನನ್ನ ಇಚ್ಛೆಯು" ಎಂದು ಹೇಳಿ ಆಕೆಯ ಸಂಗಡ ಹೇಮಕೂಟ ಪರ್ವತಕ್ಕೆ ಹೊರಟನು.

ಚಂದ್ರಾಪೀಡನೂ ಮಹಾಶ್ವೇತೆಯೂ ಗಮನಕ್ರಮದಿಂದ ಹೇಮಕೂಟ ಪರ್ವತವನ್ನೇರಿ ಹೋಗಿ, ಗಂಧರ್ವರಾಜನ ಕೋಟೆಯನ್ನು ದಾಟಿ, ಕನಕ ತೋರಣಗಳಿಂದ ಶೋಭಿಸುವ ಏಳು ಚೌಕುಗಳೊಳಗಿಂದ ಕನ್ಯಾಂತಃಪುರದ ಮಹಾದ್ವಾರದ ಹತ್ತಿರ ಹೋದರು. ಅಲ್ಲಿ ಮಹಾಶ್ವೇತೆಯನ್ನು ನೋಡಿದ ಕೂಡಲೇ, ಬಂಗಾರದ ಬೆತ್ತ ಹಿಡಿಯುವ ಕಂಚುಕಿಗಳು ಓಡಿ ಮುಂದೆ ಬಂದು ತಲೆಬಾಗಿ ನೆಲ ಮುಟ್ಟಿ ವಂದನೆ ಮಾಡಿ ಮುಂದೆ ಮುಂದೆ ಮಾರ್ಗ ತೋರಿಸಲು, ಆ ಮಾರ್ಗದಿಂದ ಮಹಾಶ್ವೇತೆಯೊಡನೆ ಚಂದ್ರಾಪೀಡನು ಒಳಗೆ ಹೊಕ್ಕು ನೋಡುತ್ತಾನೆ—ಆ ಕನ್ಯಾಂತಃಪುರದೊಳಗೆ ವಸ್ತ್ರಾಲಂಕಾರ ಗಳಿಂದ ಭೂಷಿತರಾದ ಸುಂದರ ಸ್ತ್ರೀಯರೇ ಇದ್ದರು; ಪುರುಷರ ಸಂಪರ್ಕ ಕೂಡ ಅಲ್ಲಿ ಇದ್ದಿಲ್ಲ. ಆದುದರಿಂದ ಅದೊಂದು ಸ್ತ್ರೀಮಯವಾದ ಎರಡನೆಯ ಲೋಕವೋ ಏನೋ ಅನ್ನುವಂತೆ ಅವನಿಗೆ ತೋರಿತು.

ಆ ಕನ್ಯಾಂತಃಪುರದೊಳಗೆ ಕಾದಂಬರಿಯ ಸೇವೆ ಮಾಡುವದಕ್ಕೆ ನೆರೆದಿದ್ದ ನೂರಾರು ದಾಸಿಯರು ತಟ್ಟನೆ ಇಬ್ಭಾಗವಾಗಿ ಕೊಟ್ಟ ಮಾರ್ಗ ದಿಂದ ಹಾಯ್ದು, ಚಂದ್ರಾಪೀಡನು ಕಾದಂಬರಿಯು ಕುಳಿತ ಮಂಟಪದ ಹತ್ತರ ಹೋದನು. ಸುತ್ತುಮುತ್ತು ನೂರಾರು ಸುಂದರ ಕನ್ಯೆಯರು ಉಲ್ಲಾಸದಿಂದ ಕುಳಿತಿದ್ದಾರೆ; ಎಡಬಲದಲ್ಲಿ ಬಡನಡು ಬಳಕುವ ಚೆನ್ನೆಯ ರಿಬ್ಬರು ನಿಂತುಕೊಂಡು, ರತ್ನಖಚಿತವಾದ ಕಾವಿನ ಚಾಮರಗಳನ್ನು ಒಡಿದು ಸೊಕ್ಕರಿದು ತೋಳುಗಳನ್ನು ನೆಗವಿ ಢಾಳಿಸುತ್ತಾರೆ; ಬಾಯಿಯಿಂದ ಬಂದ ಸೇವೆಯನ್ನು ಮುಂದುವರಿದು ಮಾಡಬೇಕೆಂದು ಹಾರೈಸಿಕೊಂಡು, ಹಲವು ಹೆಂಗಸರು ಸಂದಣಿಗೊಂಡು ಮುಂಭಾಗದಲ್ಲಿ ನಿಂತಿದ್ದಾರೆ; ಆ ಮಂಟಪದ ಮಧ್ಯದಲ್ಲಿ ಹಸ್ತಿದಂತದ ಮಂಚದ ಮೇಲೆ ರೇಶಿಮೆಯ ದಿಂಬು ಗಳಿಗೆ ಆತು ಸಖಿಯರ ಕೂಡ ವಿನೋದದ ಮಾತುಗಳನ್ನಾಡುತ್ತ, ಹಾಗೂ ತನ್ನ ಎದುರಿಗೆ ಕುಳಿತುಕೊಂಡು ತನ್ನನ್ನು ವರ್ಣಿಸುವ ಕೇಯೂ ರಕನ ಕೂಡ “ ಆತನು ಯಾರು ? ಯಾರ ಮಗನು ? ಎಷ್ಟು ವಯಸ್ಸಿನ ವನು ? ಆತನ ಹೆಸರೇನು ? ಏನು ಅನ್ನುತ್ತಿದ್ದನು ? ಆತನ ಕೂಡ ಮಾತಾ ಡಿದಿಯಾ ? ಎಷ್ಟು ಹೊತ್ತು ಆತನ ಬಳಿಯಲ್ಲಿದ್ದಿ ? ಅವನಿಗೂ ಮಹಾ ಶ್ವೇತೆಗೂ ಹೇಗೆ ಗುರುತಾಯಿತು ? ಆತನು ಇಲ್ಲಿಗೆ ಬರುವನೋ ? ಇಲ್ಲಿಗೆ ಬರುವಂತೆ ಏನು ಉಪಾಯ ಮಾಡಬೇಕು ?” ಎಂದು ತನ ಸಂಬಂಧದ

ಮಾತುಗಳನ್ನೇ ಮಾತಾಡುತ್ತ ಕುಳಿತ ಕಾದಂಬರಿಯನ್ನು ಚಂದ್ರಾಪೀಡನು ನೋಡಿದನು.

ಲೋಕೋತ್ತರ ಲಕ್ಷಣಯುಕ್ತಳಾಗಿ, ರೂಪ-ಯೌವನ ಸಂಪನ್ನಳಾದ ಕಾದಂಬರಿಯನ್ನು ಪ್ರತಿಬಂಧವಿಲ್ಲದೆ ಯಥೇಚ್ಛವಾಗಿ ನೋಡುವಂಥ ತನ್ನ ಕಣ್ಣುಗಳು ಜನ್ಮಾಂತರದಲ್ಲಿ ಎಷ್ಟು ಪುಣ್ಯ ಮಾಡಿದ್ದಾವು! ಇದೇನು ಕಾದಂಬರಿಯ ರೂಪವೋ ಬ್ರಹ್ಮನು ನಿರ್ಮಿಸಿದ ಲಾವಣ್ಯದ ನಿಧಿಯೋ! ಎಂದು ಮನದೊಳಗೆ ಆಲೋಚಿಸುತ್ತ ಆಶ್ಚರ್ಯಗೊಂಡು ಆದರದಿಂದ ದಿಟ್ಟಿಸಿ ನೋಡುವ ಚಂದ್ರಾಪೀಡನ ಕಡೆಗೆ ಕಾದಂಬರಿಯ ದೃಷ್ಟಿ ಹೋಯಿತು. ಆಗ ಆತನ ರೂಪಾತಿಶಯವನ್ನು ಕಂಡು ಇಷ್ಟು ಹೊತ್ತಿನ ತನಕ ಕೇಯೂರಕನು ವರ್ಣಿಸಿದ ಚಂದ್ರಾಪೀಡನು ಈತನೇ ಆದಾನು ಎಂದು ತಿಳಿದು, ಬೆರಗಾಗಿ ಪ್ರೀತಿಯಿಂದ ಆತನ ಮುಖವನ್ನು ನೋಡುವಾಗ, ಅವಳ ನೇತ್ರಗಳು ಪ್ರಫುಲ್ಲಿತವಾದವು; ಮೈಮೇಲೆ ರೋಮಾಂಚಗಳೆದ್ದವು; ಹೃದಯದೊಳಗೆ ನಡುಗೂ ನಾಚಿಕೆಯೂ ಹುಟ್ಟಿದವು. ಇದರಂತೆಯೇ ಚಂದ್ರಾಪೀಡನಿಗೂ ಕಾಮಭಾವಗಳಾದವು.

ಬಹಳ ದಿವಸಕ್ಕೆ ಮಹಾಶ್ವೇತೆಯ ದರ್ಶನವಾಯಿತೆಂದು ಕಾದಂಬರಿಯು ಆನಂದಭರಿತಳಾಗಿ ಎದ್ದು ಮುಂದಕ್ಕೆ ಬಂದು ಪ್ರೇಮದಿಂದ ಆಕೆಯ ಕೊರಳಿಗೆ ತೆಕ್ಕೆಬೀಳಲು, ಅವಳು ಈಕೆಯನ್ನು ಅಪ್ಪಿಕೊಂಡಳು. ಬಳಿಕ ಮಹಾಶ್ವೇತೆಯು—"ಸಖೀ ಕಾದಂಬರೀ, ಭೂಲೋಕದಲ್ಲಿ ಸಮುದ್ರವಲಯಾಂಕಿತ ಪೃಥ್ವಿಯನ್ನು ಆಳುವಂಥ, ಉತ್ತಮರೀತಿಯಿಂದ ಪ್ರಜೆಗಳನ್ನು ಪಾಲಿಸುವಂಥ ತಾರಾಪೀಡನೆಂಬ ಸಾರ್ವಭೌಮ ರಾಜನಿದ್ದಾನೆಂದು ನೀನು ಕೇಳಿ ಬಲ್ಲಿಯಷ್ಟೇ; ಆತನ ಮಗನು ಈ ಚಂದ್ರಾಪೀಡನು. ಈ ಪರಾಕ್ರಮಶಾಲಿಯು ದಿಗ್ವಿಜಯಾರ್ಥವಾಗಿ ಹೊರಟು ಈ ಲೋಕಕ್ಕೆ ಬಂದಿದ್ದಾನೆ. ಈತನ ದರ್ಶನವಾದ ಬಳಿಕ ಕಾರಣವಿಲ್ಲದೆ ಈತನಿಗೂ ನನಗೂ ಬಂಧುತ್ವವು ಘಟಿಸಿತು. ಸರ್ವಸಂಗಪರಿತ್ಯಾಗ ಮಾಡಿ ವಿರಕ್ತವಾದ ನನ್ನ ಚಿತ್ತವೃತ್ತಿಯನ್ನು ಈತನು ತನ್ನ ಸರಳ ಸ್ವಭಾವದಿಂದ ಪ್ರಸನ್ನ ಮಾಡಿಕೊಂಡನು. ಚತುರನಿದ್ದು ಅನುಕೂಲತನದಿಂದ ವರ್ತಿಸುವಂಥ, ಕಾರಣವಿಲ್ಲದೆ ಮಿತ್ರತ್ವವನ್ನು ಕಾಯುವಂಥ, ನಿಷ್ಕೃತ್ರಿಮ ಅಂತಃಕರಣವುಳ್ಳಂಥ ಪುರುಷನು ದೊರೆಯುವದು ಬಹಳ ವಿರಳ. ಆದುದರಿಂದ, ಈತನನ್ನು ನೋಡಿ ರೂಪದ

ನಿರುಪಮತ್ವವನ್ನೂ, ಲಕ್ಷ್ಮಿಯ ಯೋಗ್ಯ ನಿವಾಸವನ್ನೂ, ಸತ್ಕೃತಿನಿಮಿತ್ತ ದಿಂದ ಪೃಥ್ವಿಗೆ ಉಂಟಾದ ಸೌಭಾಗ್ಯವನ್ನೂ, ದೇವಲೋಕಕ್ಕಿಂತ ಮರ್ತ್ಯ ಲೋಕದ ಮೇಲನ್ನೂ, ಸ್ತ್ರೀಯರ ಕಣ್ಣುಗಳ ಸಾಫಲ್ಯವನ್ನೂ, ಒಂದೇ ಸ್ಥಳ ದಲ್ಲಿ ಒಟ್ಟುಗೂಡಿದ ಸಕಲ ಕಲೆಗಳನ್ನೂ, ಬ್ರಹ್ಮನ ಚಾತುರ್ಯ ಔದಾರ್ಯ ಗಳನ್ನೂ ನೀನೂ ನನ್ನಂತೆಯೇ ತಿಳಕೊಳ್ಳಬೇಕು ಎಂದು ನಾನು ಆಗ್ರಹ ದಿಂದ ಈತನನ್ನು ನಿನ್ನೆಡೆಗೆ ಕರಕೊಂಡು ಬಂದೆನು. ಆದರೆಹೊಸದಾಗಿ ದರ್ಶನವಾದುದರಿಂದ ಉಂಟಾಗುವ ನಾಚಿಕೆಗೆ ಇಂಬುಗೊಡದೆ, ಪರಿಚಯ ವಿಲ್ಲದಮೂಲಕವಾಗಿ ತೋರುವ ಅವಿಶ್ವಾಸವನ್ನು ತೊರೆದು, ಸ್ವಭಾವವು ಗೊತ್ತಿಲ್ಲದ ಕಾರಣ ಹುಟ್ಟುವ ಶಂಕೆಯನ್ನು ಬಿಟ್ಟು, ನನ್ನ ಕೂಡ ವರ್ತಿಸಿ ದಂತೆಯೇ ಈತನ ಕೂಡ ವರ್ತಿಸು. ಈತನು ನಿನ್ನ ಆಪ್ತನು.” ಎಂದು ಅರಿಕೆ ಮಾಡಿಕೊಂಡ ಕೂಡಲೇ ಚಂದ್ರಾಪೀಡನು ಕಾದಂಬರಿಗೆ ಅತಿ ವಿನಯದಿಂದ ತಲೆಬಾಗಿದನು. ಕಾದಂಬರಿಯೂ ಕಡು ಮಮತೆಯ ಕಡೆಗಣ್ಣಿನ ನೋಟ ದಿಂದ ಅವನ ಮುಖ ನೋಡುತ್ತ, ಮುಗುಳ್ನಗೆ ನಗುತ್ತ ಚಂದ್ರಾಪೀಡನ ಚರಣಕ್ಕೆರಗಿದಳು. ಆಗ ಸುತ್ತು ಮುತ್ತು ಕುಳಿತ ಕನ್ನಿಕೆಯರು ಕೌತುಕ ದಿಂದ ಚಂದ್ರಾಪೀಡನನ್ನೇ ನೋಡಹತ್ತಿದರು.

ಕಾದಂಬರಿಯು ಮಹಾಶ್ವೇತೆಯ ಕೈಹಿಡಿದು ಕರಕೊಂಡು ತನ್ನ ಮಂಚದ ಮೇಲೆ ಕೂಡಿಸಿಕೊಂಡಳು. ಅಷ್ಟರೊಳಗೆ ದಾಸಿಯರು ತವಕದಿಂದ ತಂದಿಟ್ಟ ಮಣಿಮಂಚದ ಮೇಲೆ ಚಂದ್ರಾಪೀಡನು ಕುಳಿತನು. ಆ ಸಮಯದಲ್ಲಿ, ಕಾದಂಬರಿಯ ಇಂಗಿತವನ್ನು ತಿಳಿಯುವ ದ್ವಾರಪಾಲಿಕೆಯರು ಅಲ್ಲಿ ಆಗುವ ವೀಣಾವೇಣುಮೃದಂಗ ಧ್ವನಿಗಳನ್ನೂ, ಗಾನಗಾರ್ತಿಯರ ಗಾಯನವನ್ನೂ, ಸ್ತುತಿಪಾಠಗೈಯುವ ಸುಂದರಿಯರ ಜಯಜಯಕಾರವನ್ನೂ ಕಣ್ಸನ್ನೆಯಿಂದ ಕಟ್ಟು ಮಾಡಿದರು.

ಆಗ ಕಾದಂಬರಿಯು ಎದ್ದು ದಾಸಿಯರು ತಂದುಕೊಟ್ಟ ಪನ್ನೀರು ತಕ್ಕೊಂಡು ತಾನೇ ಮಹಾಶ್ವೇತೆಯ ಕಾಲ್ತೊಳೆದು ಮೇಲುದದಿಂದ ಒರಸಿ ಆಸನದ ಮೇಲೆ ಹೋಗಿ ಕುಳಿತುಕೊಂಡಳು. ಕಾದಂಬರಿಯ ಜೀವದ ಗೆಳತಿ ಮದಲೇಖೆ ಎಂಬವಳು ಚಂದ್ರಾಪೀಡನ ಇಚ್ಛೆಯಿಲ್ಲದಿದ್ದರೂ ಆಗ್ರಹದಿಂದ ಕೋಮಲ ಹಸ್ತವ ಚಾಚಿ ಆತನ ಕಾಲಹೆಬ್ಬೆರಳು ಹಿಡಿದು ಚನ್ನಾಗಿ ಪನ್ನೀರಿ- ನಿಂದ ಪಾದಪ್ರಕ್ಷಾಳನಮಾಡಿ ತನ ಸೀರೆಯ ಸೆರಗಿನಿಂದ ಒರಸಿದಳು.

ಮಹಾಶ್ವೇತೆಯು ಪ್ರೇಮದಿಂದ ಕಾದಂಬರಿಯ ಹೆಗಲಮೇಲೆ ತನ್ನ ಎಡದೋಳು ಹಾಕಿ, ಚಾಮರದ ಗಾಳಿಗೆ ಹಾರಿ ಹಣೆಯ ಮೇಲೆ ಬಂದ ಆಕೆಯ ಮುಂಗುರುಳುಗಳನ್ನು ಬಲಗೈ ಬೆರಳುಗಳಿಂದ ತಿದ್ದಿ ಸುಕ್ಷೇಮವನ್ನು ಕೇಳಿದಳು. ಸಖಿಯು ಸಂಕಟದಲ್ಲಿದ್ದಾಗ ತಾನು ಮನೆಯಲ್ಲಿಯೇ ನಿಂತು ಕೊಂಡದ್ದೊಂದು ತಪ್ಪಾಗಿದೆ ಎಂದು ಕಾದಂಬರಿಯು ನಾಚುತ್ತ ಸುಖರೂಪ ವಾಗಿದ್ದೇನೆಂದು ಕಷ್ಟದಿಂದ ಉತ್ತರ ಕೊಟ್ಟು ಮಹಾಶ್ವೇತೆಯ ದುಃಖ ವನ್ನು ಮನದೊಳಗೆ ನೆನನೆನಸಿ, ಅಂತಃಕರಣದೊಳಗೆ ಶೋಕಾವಿಷ್ಟಳಾಗಿ ಅವಳ ಮೋರೆ ನೋಡುತ್ತ ನಡುನಡುವೆ ಚಂದ್ರಾಪೀಡನ ಮುಖವನ್ನು ಓರೆ ನೋಟದಿಂದ ನೋಡಿ ನೋಡಿ ಆತನ ರೂಪಕ್ಕೆ ಮೋಹಿತಳಾದಳು. ಈ ಪರಿಯಾಗಿ ಎರಡು ಗಳಿಗೆ ಹೊತ್ತು ಹೋದಬಳಿಕ, ಕಾದಂಬರಿಯು ಮಹಾ- ಶ್ವೇತೆಗೆ ತಾಂಬೂಲ ಕೊಡಲನುವಾಗಲು, ಮಹಾಶ್ವೇತೆಯು— "ಸಖೀ ಕಾದಂಬರೀ, ನಾವೆಲ್ಲರೂ ಹೊಸದಾಗಿ ಮನೆಗೆ ಬಂದ ಚಂದ್ರಾಪೀಡನಿಗೆ ಸನ್ಮಾನ ಮಾಡತಕ್ಕದ್ದು, ಮೊದಲು ಅವನಿಗೆ ತಾಂಬೂಲ ಕೊಡು," ಎಂದು ಹೇಳಲು ಮಹಾಶ್ವೇತೆಯ ಮುಖ ನೋಡುತ್ತ ಕಾದಂಬರಿಯು "ಅವರಿಗೂ ನನಗೂ ಪರಿಚಯವಿಲ್ಲದ ಮೂಲಕ ಅವರಿಗೆ ತಾಂಬೂಲ ಕೊಡಲಿಕ್ಕೆ ನಾನು ಸಂಕುಚಿತಳಾಗುತ್ತೇನೆ; ನೀನೇ ಈ ತಾಂಬೂಲ ತಕ್ಕೊಂಡು ಅವರಿಗೆ ಕೊಡು." ಎಂದು ಮೆಲ್ಲನೆ ನುಡಿಯಲು ಅವಳು ಕಾದಂಬರಿಗೆ "ನೀನೇ ಕೊಡತಕ್ಕದ್ದು." ಎಂದು ಬಹಳ ಆಗ್ರಹ ಮಾಡಿದಳು. ಆದುದರಿಂದ ಕಾದಂಬರಿಯು ಕಷ್ಟದಿಂದ ಗ್ರಾಮ್ಯಸ್ತ್ರೀಯಂತೆ ಅಂಜುತ್ತ ಮಹಾಶ್ವೇತೆಯ ಮುಖ ನೋಡುತ್ತ ಚಂದ್ರಾಪೀಡನ ಕಡೆಗೆ ತಾಂಬೂಲದ ಕೈಯನ್ನು ಸಾವ ಕಾಶ ಚಾಚಿದಳು; ಅದನ್ನು ಕಂಡು ಚಂದ್ರಾಪೀಡನು ವಿನಯದಿಂದ ಮುಂದಕ್ಕೆ ಸಾಗುಬಿದ್ದು ಕೈಯೊಡ್ಡಲು, ಅವಳು ತನ್ನ ಮನಸ್ಸನ್ನೇ ಆತನ ವಶಮಾಡುತ್ತಾಳೋ ಏನೋ ಅನ್ನುವಂತೆ ಅವನ ಕೈಯೊಳಗೆ ತನ್ನ ಕೈ ಮುಟ್ಟಿ ತಾಂಬೂಲ ಕೊಟ್ಟು, ಸ್ಪರ್ಶಸುಖದಿಂದ ಅತಿ ಹರ್ಷಿತಳಾಗಿ, ಕೃತಾ- ರ್ಥಳಾದೆನೆಂದು ಭಾವಿಸಿಕೊಂಡು, ಎರಡನೆಯ ತಾಂಬೂಲವನ್ನು ತೆಗೆದು ಕೊಂಡು ಮಹಾಶ್ವೇತೆಗೆ ಕೊಟ್ಟಳು.

ಅಷ್ಟರೊಳಗೆ ಒಬ್ಬ ಕಂಚುಕಿಯು ಬಂದು ಮಹಾಶ್ವೇತೆಗೆ ತಲೆಬಾಗಿ— "ತಾಯಿ ಆಯುಷ್ಮತೀ, ಚಿತ್ರರಥರಾಜನೂ ಮದಿರಾದೇವಿಯೂ ನಿಮ್ಮನ್ನು

ನೋಡಲುತ್ಕಂಠಿತರಾಗಿ ನಿಮ್ಮ ಮಾರ್ಗ ನಿರೀಕ್ಷಿಸುತ್ತಾರೆ" ಎಂದು ಹೇಳಿದ ಕೂಡಲೆ ಮಹಾಶ್ವೇತೆಯು ಅತ್ತ ಹೋಗಲನುವಾಗಿ—"ಸಖೀ ಕಾದಂಬರೀ, ಇನ್ನು ಈ ಚಂದ್ರಾಪೀಡನು ಎಲ್ಲಿರಬೇಕು?" ಎಂದು ಕೇಳಿದಳು. ಅದಕ್ಕೆ ಕಾದಂಬರಿಯು ಮನದೊಳಗೆ ನನ್ನ ಹೃದಯವೇ ಇವನಿಗೀಗ ಮಂದಿರವಾಗಿರಲು, ಇನ್ನು ಬೇರೆ ಸ್ಥಳವೇಕೆ? ಎಂದು ತುಸು ನಕ್ಕು—"ಸಖೀ ಮಹಾಶ್ವೇತೇ, ನೀನು ಹೀಗೆ ಕೇಳುವ ಬಗೆಯೇನು? ಮನಸ್ಸಿಗೆ ಬಂದಲ್ಲಿ ಇರಲಿ, ಇದ್ದಲ್ಲಿ ಸರ್ವಸಾಹಿತ್ಯದ ಸಿದ್ಧತೆಯುಂಟು" ಎಂದು ಹೇಳಿದಳು. ಕಾದಂಬರಿಯ ಈ ಮಾತು ಕೇಳಿ, ಮಹಾಶ್ವೇತೆಯು—"ನಿನ್ನ ಪ್ರಾಸಾದದ ಬಳಿಯ ಪ್ರಮದವನದೊಳಗಿನ ಕ್ರೀಡಾಪರ್ವತದ ಮೇಲಿನ ಮಣಿಮಯ ಗೃಹದೊಳಗೆ ಚಂದ್ರಾಪೀಡನು ಇರಲಿ" ಎಂದು ಹೇಳಿ ಗಂಧರ್ವರಾಜನ ದರ್ಶನಕ್ಕೆ ಹೋದಳು. ಚಂದ್ರಾಪೀಡನೂ ಅವಳೊಡನೆ ಹೊರಬಿದ್ದು ಕೇಯೂರಕನು ತೋರಿಸಿದ ಮಾರ್ಗದಿಂದ ಆ ಕ್ರೀಡಾಪರ್ವತದ ಮೇಲಿನ ಮಣಿಮಯ ಮಂದಿರಕ್ಕೆ ಹೋದನು. ಇತ್ತ ಕಾದಂಬರಿಯು ಸರ್ವಸಖಿಯರಿಗೆ ಹೋಗಲಪ್ಪಣೆ ಕೊಟ್ಟು ಒಬ್ಬ ಗೆಳತಿಯನ್ನು ಕರಕೊಂಡು ತನ್ನ ಮೇಲುಪ್ಪರಿಗೆಯನ್ನೇರಿದಳು.

ಪ್ರಾಸಾದದ ಶಿಖರವನ್ನು ಹತ್ತಿ, ಕಾದಂಬರಿಯು ಆಗಾಗ ಆ ಕ್ರೀಡಾ ಪರ್ವತದ ಕಡೆಗೆ ನೋಡಿ ನೋಡಿ, ತಿರುತಿರುಗಿ ಬಂದು, ತನ್ನ ಮಂಚದ ಮೇಲೆ ಒರಗುವಳು; ಹೊತ್ತು ಹೋಗುವದಕ್ಕಾಗಿ ಗೆಳತಿಯು ಹೇಳುವ ಕಥೆಗೆ ಕಿವಿಗೊಡದೆ ಮೆಲ್ಲನೆ ಕಣ್ಣು ಮುಚ್ಚುವಳು; ಒಮ್ಮಿಂದೊಮ್ಮೆ ಎದ್ದು ಕುಳಿತು—"ಈತನನ್ನು ಪೂರ್ವದಲ್ಲಿ ನಾನು ಎಂದೂ ನೋಡಿದ್ದಿಲ್ಲ, ಎಂದೂ ಕೇಳಿದ್ದಿಲ್ಲ. ಇಂಥ ಅಪರಿಚಿತನನ್ನು ಬಯಸುವದಕ್ಕೆ ನಾನು ಸ್ವಲ್ಪವಾದರೂ ಶಂಕಿಸಿದೆನೇ! ಹತ್ತಿರಿರುವ ಗೆಳತಿಯರು ನನಗೆ ಮಾತು ಇಟ್ಟಾರೆಂಬದನ್ನು ಬಗೆದೆನೇ? ನನ್ನ ಮೇಲೆ ಈ ಪುರುಷನ ಮನಸ್ಸು ಹೇಗಿರುವದೆಂಬದನ್ನು ಪರೀಕ್ಷಿಸಿದೆನೇ? ಏನೂ ಇಲ್ಲ. ಒಮ್ಮಿಂದೊಮ್ಮೆಲೆ ಅವನಿಗೆ ಮನಸ್ಸು ಒಪ್ಪಿಸಿದೆನು; ಎಂಥ ಮೂಢಳು ನಾನು! ಗುರುಹಿರಿಯರ ಅಂಜಿಕೆಯನ್ನೂ ಜನರು ಏನೆಂಬುವರೆಂಬ ಅಭಿಮಾನವನ್ನೂ ತೊರೆದೆನು; ಇಂದು ನನ್ನ ಮನಸ್ಸಿನ ಚಾಂಚಲ್ಯವನ್ನು ಜನರಿಗೆ ತೋರಿಸಿಕೊಂಡೆನು; ಮೋಹದಿಂದ ಕಂಗೆಟ್ಟೆನು. ಮಹಾಶ್ವೇತೆಯ ದುಃಖವನ್ನು ಸಹ ಮರೆತುಬಿಟ್ಟೆನು; ನಾನು

ಎಂಥ ಮಂದಮತಿಯು ! ಈ ನನ್ನ ದಡ್ಡತನವೂ ಮರುಳತನವೂ ಈ ಚತುರ ಸಖಿಯರಿಗೂ ಮದನವ್ಯಥೆಯನ್ನು ಅನುಭವಿಸಿದ ಆ ಮಹಾಶ್ವೇತೆಗೂ ತಿಳಿಯವೋ? ಅಲ್ಪಪುಣ್ಯದ ಸಲುವಾಗಿ ನಾನು ಎಲ್ಲ ತರದಿಂದ ಗತಿಗೆಟ್ಟೆನು; ಈ ಸುದ್ದಿ ಹತ್ತಿದರೆ ನನಗೆ ನನ್ನ ತಾಯಿತಂದೆಗಳೇನೆಂದಾರು ? ಗಂಧರ್ವ ರೇನೆಂದಾರು ? ಇನ್ನೇನು ಮಾಡಲಿ ? ಯಾರಿಗೆ ಹೇಳಲಿ ? ಕಾಮನಂತೂ ಕೂರಂಬುಗಳನ್ನು ಎಸೆದು ನನ್ನ ಎದೆ ಹೋಳುಮಾಡಿದನು. ಮಹಾಶ್ವೇತೆಯ ದುಃಖದ ವೃತ್ತಾಂತ ಕೇಳಿ ಮಾಡಿಕೊಂಡ ನೇಮವೇನಾಯಿತು ! ಕೇಯೂರ-ಕನ ಕೂಡ ಮಹಾಶ್ವೇತೆಗೆ ದೊಡ್ಡಸ್ತನದ ಪ್ರತಿಸಂದೇಶ ಹೇಳಿಕಳಿಸಿದೆನೇನು ! ಈಗ ಈ ಅವಸ್ಥೆಗೆ ಒಳಗಾದೆನೇನು ! ನಾನು ಎಂಥ ಚಂಚಲಮನಸ್ಕಳು ? ” ಎಂದು ಮನದೊಳಗೆ ಆಲೋಚಿಸುತ್ತ ನಾಚಿ ತನ್ನನ್ನು ತಾನೇ ಹಳಿದುಕೊಳ್ಳು ವಳು. “ ಇನ್ನೊಮ್ಮೆ ಚಂದ್ರಾಪೀಡನು ನನ್ನ ಮಂದಿರಕ್ಕೆ ಬಂದಾನೇ ? ನನ್ನ ಕಣ್ಣಿಗೆ ಬಿದ್ದಾನೇ ? ” ಎಂದು ಆಲೋಚಿಸುತ್ತ, ಚಟ್ಟನೆ ಎದ್ದು, ಕಿಡಕಿಯ ಜಾಳಿಗೆಯೊಳಗಿಂದ ಕ್ರೀಡಾಪರ್ವತದ ಕಡೆಗೆ ಮರಮರಳಿ ನೋಡುತ್ತ ನಿಲ್ಲುವಳು.

ಅತ್ತ ಆ ರಮಣೀಯ ಮಣಿಮಯ ಗೃಹದೊಳಗೆ, ಮೃದುವಾದ ಶಿವಾಸಿಗೆಯನ್ನು ಹಾಸಿ, ಅದರ ಮೇಲೆ ರತ್ನಗಂಬಳಿಯ ಹಾಕಿ, ದಿಂಬು ಗಳನ್ನು ಇಟ್ಟಿದ್ದರು. ಅದರ ಮೇಲೆ ಚಂದ್ರಾಪೀಡನು ಸ್ವಚ್ಛಂದದಿಂದ ಕಾಲು ಚಾಚಿಕೊಂಡು ಅಡ್ಡಾಗಿದ್ದನು; ಕೇಯೂರಕನು ಪಾದಸಂವಾಹನ ಮಾಡುತ್ತಿದ್ದನು ; ಕುಲಕನ್ನಿಕೆಯರು ಸುತ್ತುಮುತ್ತು ಕುಳಿತುಕೊಂಡು, ವೀಣಾಮೃದಂಗಗಳನ್ನು ಶ್ರುತಿಗೊಳಿಸಿ ಬಾರಿಸುತ್ತ, ಸುಸ್ವರದಿಂದ ಹಾಡು ತ್ತಿದ್ದರು ; ಆಗ ಚಂದ್ರಾಪೀಡನು ಕಾದಂಬರಿಯ ಎರಡನೆಯ ಹೃದ ಯವೋ ಏನೋ ಅನ್ನುವ ಹಾಗೆ ಮನಸ್ಸಿನೊಳಗೆ— “ ಈ ಕಾದಂಬರಿಯ ಸ್ವಾಭಾವಿಕ ವಿಲಾಸಗಳು ಎಷ್ಟು ಬೇಗ ನನ್ನ ಅಂತಃಕರಣವನ್ನು ಎಳಕೊಂಡವು ! ಓರೆನೋಟದಿಂದ ನನ್ನನ್ನು ನೋಡುವಾಗ, ನಾನು ನೋಡಿದ ಕೂಡಲೆ ಮುಸುಗಿನೊಳಗೆ ಮುಗುಳ್ನಗೆ ನಕ್ಕು ನಾಚಿ ಮೋರೆದಿರುವುತ್ತಿದ್ದದ್ದು ನನ್ನ ಮನಸ್ಸು ಪರೀಕ್ಷಿಸುವದಕ್ಕೋ ? ಕಾಮ-ಪ್ರೇರಿತಳಾಗಿಯೋ ? ತಿಳಿಯದು ” ಎಂದು ಚಿಂತಿಸುತ್ತ, “ ಮೋಹಿತಳಾದದ್ದೇ ನಿಜವಾದರೆ ಮನ್ಮಥನೇ ಅದನ್ನು ಹೊರಗೆಡವಿ, ನನ್ನ ಸಂಶಯವನ್ನು ಪರಿ

ಹರಿಸುವನು. ಈಗ ವ್ಯರ್ಥವಾಗಿ ಆಯಾಸಗೊಂಡು ಫಲವಿಲ್ಲೆಂದು ನಿಶ್ಚಯಿಸಿ, ಎದ್ದು ಕುಳಿತು, ಆ ಕನ್ನಿಕೆಯರ ಕೂಡ ಪಗಡಿ, ಚದುರಂಗ, ವಾದ್ಯವಾದನ, ಗಾಯನ, ಸುಭಾಷಿತ ಮುಂತಾದ ಕಲಾವಿಲಾಸಗಳಿಂದ ಕೆಲಹೊತ್ತು ಕಳೆದ ಬಳಿಕ, ಅಲ್ಲಿಂದ ಎದ್ದು, ಉಪವನದೊಳಗೆ ವಿಹರಿಸಿ, ಕ್ರೀಡಾಪರ್ವತದ ಶಿಖರದ ಮೇಲೆ ಆರೋಹಿಸಿ, ಕಾದಂಬರಿಯನ್ನು ದಿಟ್ಟಿಸಿ ನೋಡುತ್ತ ನಿಂತುಕೊಂಡನು.

ಇತ್ತ ಕಾದಂಬರಿಯೂ ಆ ಚಂದ್ರಾಪೀಡನನ್ನು ನೋಡಿ ಮಹಾಶ್ವೇತೆ ಬರುವ ಮಾರ್ಗ ಪ್ರತೀಕ್ಷಿಸುವ ನೆವಮಾಡಿಕೊಂಡು, ಸೌಧಾಗ್ರದ ಮೇಲೆ ಹತ್ತಿ, ಚಂದ್ರಾಪೀಡನ ಕಡೆಗೆ ನೋಡುತ್ತ ಬಹಳ ಹೊತ್ತು ನಿಂತುಕೊಂಡಳು.

ಅಷ್ಟರೊಳಗೆ ಒಬ್ಬ ದ್ವಾರಪಾಲಿಕೆಯು ಬಂದು, ಮಹಾಶ್ವೇತೆಯು ತಿರುಗಿ ಬಂದಳೆಂದು ಅರಿಕೆ ಮಾಡಿಕೊಂಡದ್ದರಿಂದ, ಕಾದಂಬರಿಯು ಸೌಧಾಗ್ರದಿಂದಿಳಿದು ಕೆಳಗೆ ಬಂದು, ತನ್ನ ಮನಸ್ಸಿಲ್ಲದಿದ್ದರೂ ಮಹಾಶ್ವೇತೆಯ ಆಗ್ರಹದಿಂದ ಸ್ನಾನ ಮುಂತಾದ ಕಾರ್ಯಗಳನ್ನು ಮಾಡಿದಳು. ಇತ್ತ ಚಂದ್ರಾಪೀಡನೂ ಆ ಕ್ರೀಡಾಶೈಲದ ಶಿಖರದಿಂದ ಕೆಳಗಿಳಿದು ಬರುವಷ್ಟರಲ್ಲಿ ಕಾದಂಬರಿಯ ಕಡೆಯಿಂದ ಬಂದ ಸೇವಕರು ಸರ್ವ ಸಿದ್ಧತೆಯಾದದ್ದನ್ನು ಸೂಚಿಸಲು ಸ್ನಾನಸಂಧ್ಯಾ ದೇವತಾರ್ಚನ ಭೋಜನ ಮುಂತಾದ ವಿಧಿಗಳನ್ನು ಅಲ್ಲಿಯೇ ತೀರಿಸಿಕೊಂಡು, ಮರಕತಮಣಿಯ ಶಿಲಾತಲದ ಮೇಲೆ ಸ್ವಸ್ಥ ಕುಳಿತುಕೊಂಡನು.

ಅಷ್ಟರೊಳಗೆ ಕಾದಂಬರಿಯ ಪ್ರಿಯ ಸಖಿಯಾದ ಮದಲೇಖೆಯೂ ಮಹಾಶ್ವೇತೆಯ ಗೆಳತಿ ತರಲಿಕೆಯೂ ಹಲವು ಸ್ತ್ರೀಯರನ್ನೊಡಗೂಡಿ, ಛತ್ರ ಚಾಮರ ಸಹಿತರಾಗಿ ಬಂಗಾರದ ಬೆತ್ತದ ದ್ವಾರಪಾಲಿಕೆಯರ ಕೈಯೊಳಗೆ ಅಂಗರಾಗ ದ್ರವ್ಯ ತುಂಬಿದ ಕರಡಿಗೆಗಳನ್ನು, ತಮಾಲಿಕೆ ಎಂಬವಳ ಕೈಯಲ್ಲಿ ಮಾಲತೀಕುಸುಮದ ಹಾರತುರಾಯಿಗಳನ್ನು ಹಿಡಿಸಿಕೊಂಡು, ಮಂಜಿನಂಥ ಅತಿ ಸೂಕ್ಷ್ಮವಾದ ಎರಡು ಬಿಳಿಯ ಕೆಲ್ಲೆಗಳನ್ನೂ ಪ್ರಕಾಶಿಸುವ ಶೋರ ಮುತ್ತಿನ ಹಾರವನ್ನೂ ರತ್ನಖಚಿತವಾದ ಪೊಂಬರಿವಾಣದೊಳಗೆ ಇಟ್ಟು ಕೊಂಡು, ಮೇಲೆ ಮಡಿಬಟ್ಟೆಯನ್ನು ಮುಚ್ಚಿಕೊಂಡು, ಚಂದ್ರಾಪೀಡನ ಬಳಿಗೆ ಬಂದರು. ಚಂದ್ರಾಪೀಡನು ತನ್ನೆಡೆಗೆ ಬರುವ ಮದಲೇಖಾ ತರಲಿಕೆ ಯರನ್ನು ಕಂಡು ಎದ್ದು, ಆದರದಿಂದ ಇಬ್ಬರಿಗೂ ಸನ್ಮಾನ ಮಾಡಿದನು. ಆಗ ಮದಲೇಖೆಯು ಅದೇ ಶಿಲಾತಲದ ಮೇಲೆ ಸ್ವಲ್ಪ ಹೊತ್ತು ಕುಳಿತು,

ಬಳಿಕ ಎದ್ದು ಕರಡಿಗೆಯೊಳಗಿನ ಪರಿಮಳ ದ್ರವ್ಯವನ್ನು ಚಂದ್ರಾಪೀಡನ ಮೈಗೆ ತಾನೇ ಪೂಸಿ, ಅವೆರಡೂ ಶಲ್ಲೆಗಳನ್ನು ಆತನಿಗೆ ಹೊದಿಸಿ, ಪೂಮಾಲೆಯನ್ನು ಕೊರಳೊಳಗೆ ಹಾಕಿ, ಮುಂಡಾಸದಲ್ಲಿ ತುರಾಯಿ ಇಟ್ಟು ಮುತ್ತಿನ ಸರವನ್ನು ಕೈಯೊಳಗೆ ತಕ್ಕೊಂಡು--"ಎಲೈ ರಾಜಪುತ್ರನೇ, ಈ ನಿನ್ನ ಸೌಂದರ್ಯಕ್ಕೆ ಮೋಹಿತರಾಗದವರು ಯಾರು? ನಿನ್ನ ಸೌಜನ್ಯವೇ ನಮ್ಮಂಥವರಿಗೆ ನಿನ್ನ ಬಳಿಗೆ ಬರುವದಕ್ಕೆ ಧೈರ್ಯ ಕೊಡುತ್ತದೆ. ನಿನ್ನ ಸ್ವಭಾವವೂ ಸಮ್ಯಗ್ವ್ಯವಹಾರವೂ ಯಾರನ್ನು ಒಲಿಸವು? ಪ್ರಥಮದರ್ಶನವಾದ ಕೂಡಲೆ ನಿನ್ನ ಮೂರ್ತಿಯೇ ವಿಶ್ವಾಸವನ್ನು ಹುಟ್ಟಿಸುತ್ತದೆ. ಇಂಥ ಮಹಿಮಾಶಾಲಿಯ ಸಲುವಾಗಿ ಯೋಚಿಸಿದ್ದೆಲ್ಲ ಅನುಚಿತವಾಗಿ ತೋರುತ್ತದೆ. ನನ್ನ ಸಖಿ ಕಾದಂಬರಿಯು--'ತಾನಾಗಿ ನನ್ನ ಹರಣ ಮಾಡಿ, ನನ್ನ ಪ್ರಾಣಕ್ಕೆ ಒಡೆಯನಾದವನಿಗೆ ಏನು ಕೊಡಬೇಕು? ಪ್ರಥಮಾಗಮನದಿಂದಲೇ ಮಹೋಪಕಾರ ಮಾಡಿದವನಿಗೆ ಯಾವ ಪ್ರತ್ಯುಪಕಾರ ಮಾಡಬೇಕು? ದರ್ಶನಮಾತ್ರದಿಂದ ನನ್ನ ಜನ್ಮವನ್ನು ಸಫಲ ಮಾಡಿದವನ ಆಗಮನದ ಸಾಫಲ್ಯವನ್ನು ಯಾತರಿಂದ ಮಾಡಬೇಕು?' ಎಂದು ಪರ್ಯಾಲೋಚಿಸಿ ಈ ಮುಕ್ತಾಮಾಲೆಯನ್ನು ಕೊಡುವ ನೆವದಿಂದ ತನ್ನ ನಿರ್ಮಲ ಪ್ರೀತಿಯನ್ನೇ ನಿನಗೆ ಸಮರ್ಪಿಸುತ್ತಾಳೆ. ಈ ಕಾಣಿಕೆಯು ಅವಳ ವೈಭವ ದ್ಯೋತಕವೆಂದು ತಾವು ತಿಳಿಯಕೂಡದು. ತಮ್ಮಂಥವರು ಈ ಲೋಕಕ್ಕೆ ಬರುವದೇ ದುರ್ಲಭವಿದ್ದು ತಾವು ಬಂದಿರಲೂ ತನ್ನ ಕೈಯಿಂದ ತಕ್ಕ ಸತ್ಕಾರವಾಗಲಿಲ್ಲೆಂದು ಕಾದಂಬರಿಯು ತನ್ನನ್ನು ಕೃತಾಪರಾಧಳೆಂದು ಎಣಿಸುತ್ತಾಳೆ. ತಮಗೆ ತನ್ನ ಆತ್ಮವನ್ನು ಅರ್ಪಿಸಿದ್ದರಿಂದ ನನ್ನ ಗೆಳತಿ ಕಾದಂಬರಿಯು ಮೋಸಗೊಳ್ಳಲಿಲ್ಲೆಂತಲೂ, ಮುಂದೆ ಪಶ್ಚಾತ್ತಾಪ ಪಡಳೆಂತಲೂ ನಾವು ತುಂಬಾ ನಂಬಿದ್ದೇನೆ. ಸಮುದ್ರನಾಥನು ತನ್ನಲ್ಲಿದ್ದ ಉತ್ಕೃಷ್ಟ ಮುತ್ತುಗಳೊಳಗೆ ಒಂದೊಂದನ್ನು ಆರಿಸಿ, ಈ ಹಾರ ಮಾಡಿ ಇದಕ್ಕೆ ಶೇಷವೆಂಬ ಹೆಸರಿಟ್ಟು ವರುಣನಿಗೆ ಆದರದಿಂದ ಕೊಟ್ಟಿದ್ದನು; ಆ ವರುಣನು ಚಿತ್ರರಥ ಗಂಧರ್ವರಾಜನಿಗೆ ಇದನ್ನು ಸನ್ಮಾನಾರ್ಥವಾಗಿ ಕಾಣಿಕೆ ಸಲ್ಲಿಸಿದ್ದನು. ಆತನು ತನ್ನ ಪ್ರೀತಿಯ ಮಗಳಾದ ಕಾದಂಬರಿಗೆ ಒಪ್ಪಿಸಿದ್ದನು. ಅಂಥ ಈ ಹಾರಕ್ಕೆ ತಾವು ತಕ್ಕವರೆಂದು ತಿಳಿದು, ಕಾದಂಬರಿಯು ಅತಿ ಪ್ರೀತಿಯಿಂದ ಇದನ್ನು ತಮಗೆ ಕಳಿಸಿದ್ದಾಳೆ. ದಯಮಾಡಿ ಸ್ವೀಕರಿಸಬೇಕು.

ಸದ್ಗುಣರೂಪವಾದ ಅಲಂಕಾರಗಳಿಂದ ಭೂಷಿತರಾದ ತಮ್ಮಂಥ ಪುರುಷರು ಇಂಥ ಕ್ಲೇಶಕಾರಕವಾದ ಜಡ ಭೂಷಣಗಳನ್ನು ಧರಿಸುವದಿಲ್ಲ. ಆದರೂ ಕಾದಂಬರಿಯ ಪ್ರೀತಿಯ ಸಲುವಾಗಿ ಈ ಹಾರವನ್ನು ತಾವು ಧಾರಣ ಮಾಡಬೇಕು. ಒಂದು ಪಕ್ಷದಲ್ಲಿ ತಾವು ಆಕೆಯ ಪ್ರೀತಿಗೆ ಪ್ರತಿಕೂಲರಾದರೆ, ಅವಳು ತನ್ನನ್ನು ಹಳಿದು ಪ್ರಾಣತ್ಯಾಗ ಮಾಡಿಕೊಂಡಾಳೆಂಬ ಅಂಜಿಕೆಯಿಂದ, ಮಹಾಶ್ವೇತೆಯು ಈ ತರಲಿಕೆಯ ಕೂಡ— 'ಕಾದಂಬರಿಯ ಪ್ರೀತಿದಾನವನ್ನು ಉಪೇಕ್ಷಿಸೀ ಕಂಡೆಯಾ' ಎಂದು ತಮಗೆ ಸಂದೇಶ ಕಳಿಸಿದ್ದಾಳೆ" ಎಂದು ಹೇಳಿ ಚಂದ್ರಾಪೀಡನ ಕೊರಳೊಳಗೆ ಆ ಹಾರವನ್ನು ಹಾಕಿದಳು.

ಚಂದ್ರಾಪೀಡನು ಆಕೆಯ ಜಾಣ್ಮೆಗೆ ಆಶ್ಚರ್ಯಪಟ್ಟು— "ಎಲೈ ಮದಲೇಖೆಯೇ, ನೀನು ಬಹು ಚತುರಳು; ಹೆರವರಿಗೆ ಒಡವೆಗಳನ್ನು ಸಲ್ಲಿಸುವ ಜಾಣ್ಮೆ ನಿನಗೆ ಸಲ್ಲುವದು. ಮಾತಾಡಗೊಡದೆ ಮಾತಾಡುವ ಇಂಥ ಪ್ರೌಢಿಮೆಯನ್ನು ಎಲ್ಲಿ ಕಲಿತಿ? ಮಾನಿನೀ, ನಿಮ್ಮ ಸೌಜನ್ಯದ ಮುಂದೆ ನನ್ನದೇನು ಸಾಗೀತು? ಅದೇ ನನ್ನನ್ನು ತೀರ ಕೈವಶ ಮಾಡಿಕೊಂಡಿದೆ. ಇನ್ನು ಇಷ್ಟವಾಗಲಿ ಅನಿಷ್ಟವಾಗಲಿ ನಿಮ್ಮ ಮನಸ್ಸಿಗೆ ಬಂದಂತೆ ನೀವೇ ಮಾಡಬೇಕಲ್ಲದೆ ನಾನು ಹೇಳಲು ಸಮರ್ಥನಲ್ಲ. ಕಾದಂಬರಿಯ ಗುಣಕ್ಕೆ ಯಾರು ದಾಸರಾಗರು?" ಎಂಬ ಆದರದ ಮಾತುಗಳನ್ನಾಡಿ, ಮದಲೇಖೆಗೆ ಮನೆಗೆ ಹೋಗಲಪ್ಪಣೆ ಕೊಟ್ಟನು.

ಬಳಿಕ ಹೊತ್ತು ಮುಳುಗಿ ಚಂದ್ರೋದಯವಾಗಲು, ಚಂದ್ರಾಪೀಡನು ಕೆಳಗಿಳಿದು ಕಾದಂಬರಿಯ ಸೇವಕರು ಸಿದ್ಧಮಾಡಿಕೊಟ್ಟ ಅಂಜೆದುಪ್ಪಳ ಹಾಸಿಗೆಯ ಮೇಲೆ ಅಡ್ಡಾದನು. ಆಗ ಕೇಯೂರಕನು ಓಡುತ್ತ ಬಂದು— "ಜೀಯಾ ಮಹಾಶ್ವೇತೆಯು ಕಳಿಸಿಕೊಟ್ಟದ್ದರಿಂದ ಕಾದಂಬರೀ ದೇವಿಯು ತಮ್ಮ ದರ್ಶನಕ್ಕೆ ಬಂದಳು" ಎಂದು ಆತನಿಗೆ ಬಿನ್ನವಿಸಿದನು.

ಈ ಮಾತು ಕೇಳಿದಕೂಡಲೆ ಚಂದ್ರಾಪೀಡನು ಚಟ್ಟನೆ ಎದ್ದು ಕುಳಿತನು. ಅಷ್ಟರಲ್ಲಿ ಕಾದಂಬರಿಯು ಹಲವು ಸಖಿಯರೊಡನೆ ಮದಲೇಖೆಯ ಮುಂಗೈ ದಂಡೆವಿಡಿಯುತ್ತ, ಬೇಸರದಿಂದ ಛತ್ರಚಾಮರಗಳನ್ನು ಓರೆ ಮಾಡುತ್ತ ಸಾಮಾನ್ಯ ಸ್ತ್ರೀಯಂತೆ ಕೊರಳೊಳಗೆ ಮುತ್ತಿನ ಏಕಾವಳೀಸರವೊಂದನ್ನೇ ಹಾಕಿಕೊಂಡು, ಮೈಗೆ ಚಂದನವನ್ನು ಪೂಸಿಕೊಂಡು, ಒಂದು ಕಿವಿಯ ಮೇಲೆ

ಹಣಿಗೆಯನ್ನೂ, ಮತ್ತೊಂದರ ಮೇಲೆ ತಾವರೆಯ ಹೂವನ್ನೂ ಇಟ್ಟು ಕೊಂಡು, ಕಲ್ಪವೃಕ್ಷದ ಶ್ವೇತಾಂಬರವನ್ನುಟ್ಟುಕೊಂಡು ಬಂದು ಅತಿ ವಿನಯ ದಿಂದ ತಲೆವಾಗಿ ಅವನಿಗೆ ಪೊಡಮಟ್ಟು, ನೆಲದಮೇಲೆ ಕುಳಿತುಕೊಂಡಳು. ಚಂದ್ರಾಪೀಡನಿಗೆ ಮಂಚದಮೆಲೆಯೇ ಕುಳಿತುಕೊಳ್ಳುವದಕ್ಕೆ ಮದಲೇಖೆಯು ಎಷ್ಟು ಆಗ್ರಹಮಾಡಿದರೂ ಕೇಳದೆ, ಆತನೂ ನೆಲದಮೇಲೆಯೇ ಕುಳಿತನು. ಬಳಿಕ ಕಾದಂಬರಿಯ ಸಂಗಡ ಬಂದ ಸಖಿಯರೆಲ್ಲರು ಕೆಳಗೇ ಕುಳಿತರು ; ಚಂದ್ರಾಪೀಡನು—" ದೇವೀ, ಕಾದಂಬರೀ, ನೀವು ಇಲ್ಲಿಯತನಕ ಅನುಗ್ರಹ ಮಾಡಿ ಬಂದದ್ದಕ್ಕೆ ನಿಮ್ಮ ಸುಸ್ವಭಾವವೂ ನಿರಭಿಮಾನತೆಯೂ ಸೌಜನ್ಯವೂ ಕಾರಣವಲ್ಲದೆ, ನನ್ನಲ್ಲಿ ಅಂಥ ಗುಣವೇನೂ ಇಲ್ಲ. ನಿಮ್ಮ ಅವಲೋಕನ ಮಾತ್ರದಿಂದ ಆನಂದಪಡುವವನು ನಾನು ; ಇನ್ನು ನೀನೇ ಇಲ್ಲಿಯವರೆಗೆ ಬಂದು ಮಾತಾಡಿಸಿದ್ದರಿಂದಂತೂ ನಾನು ಧನ್ಯನೇ ಸರಿ " ಎಂದು ಕೃತಾರ್ಥ ಭಾವವನ್ನು ಕೈಕೊಂಡು ಮನಸ್ಸಿನಲ್ಲಿ ಉಂಟಾದದ್ದನ್ನು ಉಪಚಾರವಿಲ್ಲದೆ ಮಾತಾಡಲು, ಕಾದಂಬರಿಯೂ ಮದಲೇಖೆಯೂ ಆತನ ವಿನಯೋಕ್ತಿಗೆ ಹರ್ಷನಿರ್ಭರಿತರಾಗಿ ಮೆಲ್ಲನೆ ಒಂದು ಪ್ರಸಂಗ ತೆಗೆದು 'ತಾರಾಪೀಡ ದೊರೆಯು ಹೇಗಿದ್ದಾನೆ; ವಿಲಾಸವತೀ ರಾಣಿಯು ಹೇಗಿದ್ದಾಳೆ ? ಶುಕನಾಸ ಪ್ರಧಾನನು ಹೇಗಿದ್ದಾನೆ ? ಉಜ್ಜಯಿನೀ ಪಟ್ಟಣವು ಇಲ್ಲಿಗೆ ಎಷ್ಟು ದೂರ ಇದೆ ? ಹೇಗಿದೆ ? ಭರತಖಂಡದ ಸ್ಥಿತಿಯು ಹೇಗಿದೆ? ಮರ್ತ್ಯಲೋಕವು ರಮಣೀಯವಿದೆಯೋ ಹೇಗೆ ' ಎಂದು ಹಲವು ಸಂಗತಿಗಳನ್ನು ಕೇಳಲು, ಆತನು ಅವುಗಳಿಗೆಲ್ಲ ಉತ್ತರ ಕೊಟ್ಟನು. ಇಂಥ ಮಾತುಗಳಿಂದ ಕೆಲ ಹೊತ್ತುಗಳೆದು, ಕಾದಂಬರಿಯು ಚಂದ್ರಾಪೀಡನ ಅಪ್ಪಣೆತಕ್ಕೊಂಡು ತನ್ನ ಮಂದಿರಕ್ಕೆ ಹೋಗಿ, ಮೇಲುಪ್ಪರಿಗೆಯ ಸಜ್ಜೆವನೆಯೊಳಗೆ ಹಂಸತೂಲಿಕಾ ತಲ್ಪದ ಮೇಲೆ ಮಲಗಿಕೊಂಡಳು. ಇತ್ತ ಚಂದ್ರಾಪೀಡನೂ ತನ್ನ ಹಾಸಿ ಗೆಯ ಮೇಲೆ ಮಲಗಿಕೊಂಡು ಕಾದಂಬರಿಯ ನಿರಭಿಮಾನತೆಯನ್ನೂ, ಅಭಿ ರೂಪವನ್ನೂ, ಗಾಂಭೀರ್ಯವನ್ನೂ ಮಹಾಶ್ವೇತೆಯ ನಿಷ್ಕಾರಣ ವತ್ಸಲತೆ ಯನ್ನೂ, ಮದಲೇಖೆಯ ಸೌಜನ್ಯವನ್ನೂ, ಸೇವಕರ ಮಹಾನುಭಾವತೆ ಯನ್ನೂ, ಗಂಧರ್ವಲೋಕದ ವೈಭವವನ್ನೂ, ಕಿಂಪುರುಷ ದೇಶದ ರಮ್ಯತನ ವನ್ನೂ ಮನದೊಳಗೆ ನೆನೆಸುತ್ತ, ಒಂದು ನಿಮಿಷದಂತೆ ಇರುಳುಗಳೆದನು.

ಬಳಿಕ ಚಂದ್ರನು ಅಸ್ತನಾಗಿ ಬೆಳಗುಮಂಜಾವಿನ ತಂಗಾಳಿಯು

ಮಕರಂದವನ್ನು ಹೆರವುತ್ತ ಮೆಲ್ಲನೆ ಸುಳಿಯಹತ್ತಿತು; ಸೊಡರುಗಳು ಬೆಳ್ಳಗಾದವು; ಚಿಕ್ಕೆಗಳು ಕಾಣದಾದವು; ಸೂರ್ಯನು ಮೂಡಣಿಂದ ಮೇಲಕ್ಕೇರಿ ತನ್ನ ಹೊಂಬಣ್ಣದ ಕಿರಣಗಳನ್ನು ಹರವುತ್ತ ಬಂದನು. ಆಗ ಚಂದ್ರಾಪೀಡನು ಶಿವಸ್ಮರಣೆಯೊಡನೆ ಹಾಸಿಗೆಯಿಂದೆದ್ದು ಮುಖಪ್ರಕ್ಷಾಳನ ಮಾಡಿ, ಸ್ನಾನಸಂಧ್ಯಾದಿಗಳನ್ನು ತೀರಿಸಿ— "ಎಲೈ ಕೇಯೂರಕಾ, ಕಾದಂಬರೀದೇವಿಯು ಎದ್ದಳೋ ಇಲ್ಲವೋ? ಎದ್ದಿದ್ದರೆ ಎಲ್ಲಿ ಕುಳಿತಿದ್ದಾಳೆ ನೋಡಿ ಬಾ" ಎಂದು ಅಪ್ಪಣೆ ಮಾಡಿದನು. ಆ ವೇಳೆಗೆ ಕೇಯೂರಕನು ನೋಡಿ ಬಂದು— "ಸ್ವಾಮಿಾ, ಕಾದಂಬರೀದೇವಿಯು ಸುಂದರ ಪ್ರಾಸಾದದ ಕೆಳಗಿನ ಮಲ್ಲಿಗೆಯ ಬಳ್ಳಿಯ ಮಂಟಪದಲ್ಲಿ ಚಂದ್ರಕಾಂತದ ಕಟ್ಟೆಯ ಮೇಲೆ ಮಹಾಶ್ವೇತೆಯ ಕೂಡ ಮಾತಾಡುತ್ತ ಕುಳಿತಿದ್ದಾಳೆ" ಎಂದು ಅರಿಕೆಮಾಡಿಕೊಳ್ಳಲು, ಚಂದ್ರಾಪೀಡನು ಕಾದಂಬರಿಯ ದರ್ಶನ ತಕ್ಕೊಂಡು ತಿರುಗಿ ಹೋಗುವ ಅಪ್ಪಣೆ ಕೇಳಬೇಕೆಂದು ಅಲ್ಲಿಗೆ ಹೋಗಿ ಮಹಾಶ್ವೇತೆಯ ಮುಖ ನೋಡಿ ಮುಗುಳ್ನಗೆ ನಗಲು, ಅಷ್ಟರಿಂದಲೇ ಅವಳು ರಾಜಪುತ್ರನ ಮನೋಭಾವವನ್ನು ತಿಳಿದು — "ಸಖೀ ಕಾದಂಬರೀ, ಈ ಚಂದ್ರಾಪೀಡನು ನಿನ್ನ ಗುಣಗಳಿಗೆ ಮನಸ್ಸು ಕರಗಿ ನಿನ್ನ ಕೂಡ ಮಾತಾಡಲಾರನು; ಆದರೆ ಈ ರಾಜಕುಮಾರನ ಮನಸ್ಸಿನೊಳಗೆ ತಿರುಗಿ ಹೋಗಬೇಕೆಂದು ಇಚ್ಛೆ ಹುಟ್ಟಿದೆ. ಯಾಕಂದರೆ, ಈತನ ಹಿಂದೆ ಬಂದ ರಾಜಕುಮಾರರಿಗೆ ಇವನ ಗೊತ್ತು ಹತ್ತದ ಮೂಲಕವಾಗಿ ಬಹಳ ದುಃಖವಾಗುತ್ತಿದ್ದೀತು; ಆದುದರಿಂದ ಇವನಿಗೆ ನೀನು ಅಪ್ಪಣೆಕೊಡಬೇಕು. ದೂರ ಹೋಗುವನೆಂದು ಚಿಂತಿಸಬೇಡ. ಪದ್ಮಿನಿಯೂ ಸೂರ್ಯನೂ ಇರುವಂತೆ ನೀವು ಯಾವಾಗಲೂ ಒಬ್ಬರ ಮೇಲೊಬ್ಬರು ಪ್ರೀತಿಮಾಡುತ್ತ ಇರಬೇಕು." ಎನಲು ಕಾದಂಬರಿಯು:— "ಅಕ್ಕಾ ಮಹಾಶ್ವೇತೇ, ಈ ರಾಜಕುಮಾರನ ಅಂಕೆಗೊಳಗಾದ ಈ ತೊತ್ತು ಈತನ ಇಚ್ಛೆಗೆ ಪ್ರತಿಕೂಲಳಾಗಲು ಸಮರ್ಥಳೇ?" ಎಂದು, ಗಂಧರ್ವಕುಮಾರನನ್ನು ಕರೆದು, ಚಂದ್ರಾಪೀಡನನ್ನು ಸುರಕ್ಷಿತವಾಗಿ ಮುಟ್ಟಿಸಿ ಬರಬೇಕೆಂದು ಆಜ್ಞಾಪಿಸಿದಳು.

ಬಳಿಕ ಚಂದ್ರಾಪೀಡನು ಮೊದಲು ಮಹಾಶ್ವೇತೆಗೆ ನಮಿಸಿ, ಬಳಿಕ ಕಾದಂಬರಿಗೆ ಪ್ರೀತಿಯಿಂದ ತಲೆಬಾಗಿ, ಕಣ್ತುಂಬ ನೀರು ತಂದು— "ದೇವೀ ಕಾದಂಬರೀ ಹೆಚ್ಚಿಗೆ ಹೇಳುವದೇನು? ಬಹಳ ಮಾತಾಡುವವರ ಮಾತು

ಗಳನ್ನು ಯಾರೂ ಆದರದಿಂದ ಆಲಿಸುವದಿಲ್ಲ. ಕಾರಣ ಸ್ವಲದರಲ್ಲಿ ಹೇಳು ತ್ತೇನೆ. ನಿನ್ನ ಸೇವಕರೊಳಗೆ ನನ್ನನ್ನು ಎಣಿಸಿ ನನಗೆ ಏನಾದರೂ ಸಂದೇಶ ಕಳಿಸುತ್ತಿರಬೇಕು.'' ಎಂದು ಹೇಳಿ ಕನ್ಯಾಂತಃಪುರದಿಂದ ಹೊರಟನು. ಆಗ ಕಾದಂಬರಿಯ ಹೊರತು ಎಲ್ಲ ಸ್ತ್ರೀಯರು ಅವನನ್ನು ಆದರದಿಂದ ಕಳಿ ಸುವದಕ್ಕೆ ಆತನ ಹಿಂದಿಂದೆ ನಡೆಯುತ್ತ ವಿನಯದಿಂದ ಆತನ ಸದ್ಗುಣ ಗಳನ್ನು ತಮ್ಮತಮ್ಮೊಳಗೆ ಕೊಂಡಾಡುತ್ತ ಹೆಬ್ಬಾಗಿಲ ತನಕ ಹೋದರು. ಬಳಿಕ ಅವನು ಆ ಸ್ತ್ರೀಯರಿಗೆ ತಿರುಗಿ ಹೋಗಲು ವಿನಯದಿಂದ ಹೇಳಿ, ಕೇಯೂರಕನು ತಂದ ಅಶ್ವವನ್ನು ಆರೋಹಿಸಿ, ಗಂಧರ್ವಕುಮಾರನನ್ನೊ ಡಗೊಂಡು ಹೇಮಕೂಟ ಪರ್ವತವನ್ನಿಳಿದು ಶಯಣಗತಿಯಿಂದ ಬರುವಾಗ ಕೂಡ ಆತನ ಹೃದಯವೇ ಕಾದಂಬರೀಮಯವಾಗಿದ್ದದರಿಂದ ಎತ್ತ ನೋಡಿ ದರೂ ಆತನಿಗೆ ಕಾದಂಬರಿಯೇ ಕಾಣಿಸಹತ್ತಿದಳು.

ಈ ಮೇರೆಗೆ ಚಂದ್ರಾಪೀಡನು ಗಮನಕ್ರಮದಿಂದ ಮಹಾಶ್ವೇತೆಯ ಆಶ್ರಮಕ್ಕೆ ಬರುವಷ್ಟರೊಳಗೆ ಆತನ ಸೇನೆಯು ಇಂದ್ರಾಯುಧದ ಹೆಜ್ಜೆ ಹಿಡಿದು ಬಂದು, ಅಚ್ಛೋದ ಸರೋವರದ ದಂಡೆಯ ಮೇಲೆ ಬೀಡಾರ ಗೊಂಡಿತ್ತು; ಅದನ್ನು ಕಂಡು ಪರಮಹರ್ಷಿತನಾಗಿ, ತನ್ನ ಸಂಗಡ ಬಂದ ಗಂಧರ್ವಕುಮಾರನನ್ನು ತಿರುಗಿ ಕಳುಹಿ, ತನ್ನ ಪಾಳಯದೊಳಗೆ ಹೋಗಲು, ಜನರು ಅವನನ್ನು ಕಂಡು ಆನಂದಾಶ್ಚರ್ಯಗಳಿಂದ ಆತನಿಗೆ ನಮಿಸಹತ್ತಿದರು. ಚಂದ್ರಾಪೀಡನು ಅವರ ಶರಣುಗಳನ್ನು ಕೈಕೊಳ್ಳುತ್ತ ಆನಂದದ ನೋಟದಿಂದವರನ್ನು ನೋಡುತ್ತ ತನ್ನ ಪಟಗೃಹವನ್ನು ಪ್ರವೇ ಶಿಸಿ, ಬಂದ ಯಾವತ್ತು ರಾಜಕುಮಾರರಿಗೆ ದರ್ಶನಲಾಭಕೊಟ್ಟು ಅವರ ವರಿಗೆ ತಕ್ಕ ಸನ್ಮಾನಮಾಡಿ, ವೈಶಂಪಾಯನ ಪತ್ರಲೇಖೆಯರ ಕೂಡ, ಮಹಾಶ್ವೇತೆ ಇಂಥಾಕೆ, ಕಾದಂಬರಿ ಇಂಥವಳು, ಮದಲೇಖೆ ಇಂಥವಳು, ತಮಾಲಿಕೆ ಇಂಥಾಕೆ, ಕೇಯೂರಕನಿಂಥವನು, ಗಂಧರ್ವಲೋಕವಿಂಥದು ಎಂದು ಮಾತಾಡುತ್ತ ಹೊತ್ತುಗಳೆದನು. ಮರುದಿನ ಮುಂಜಾನೆ ಚಂದ್ರಾ-ಪೀಡನು ಓಲಗದಲ್ಲಿ ಕುಳಿತಾಗ, ಕೇಯೂರಕನು ದ್ವಾರಪಾಲಕನ ಸಂಗಡ ಅಕಸ್ಮಾತ್ತಾಗಿ ಬಂದು, ದೂರದಿಂದಲೇ ತಲೆಬಾಗಿ, ನೆಲಮುಟ್ಟಿ ವಂದಿಸಲು, ಚಂದ್ರಾಪೀಡನು ಆತನನ್ನು ನೋಡಿ ಆನಂದದಿಂದ— "ಕೇಯೂರಕಾ, ಯಾವಾಗ ಬಂದಿ, ಬಾ" ಎಂದು ಎದ್ದು ಬಂದು, ಆಲಿಂಗಿಸಿ,

ಬಳಿಯಲ್ಲಿ ಕುಳ್ಳಿರಿಸಿಕೊಂಡು ಆದರಪೂರ್ವಕವಾಗಿ—"ಕಾದಂಬರೀದೇವಿಯು ಪರಿವಾರದೊಡನೆ ಸುಕ್ಷೇಮದಿಂದಿರುವಳೇ? ಮಹಾಶ್ವೇತೆಯು ಹೇಗಿದ್ದಾಳೆ?" ಎಂದು ಕೇಳಲು, ಕೇಯೂರಕನು—"ಜೀಯಾ, ತಮ್ಮ ದಯೆಯಿಂದ ಸರ್ವರೂ ಸುಖದಲ್ಲಿ ಇರುವರು" ಎಂದು ಹೇಳಿ, ಕಾದಂಬರಿಯು ಕೊಟ್ಟ ಕಮಲಪತ್ರದ ಪುಡಿಕೆಯನ್ನು ಬಿಚ್ಚಿ ಮುಂದಿಟ್ಟು ಅದರೊಳಗಿನ ಪಚ್ಚದ ತೆನೆಗಳನ್ನೂ, ಕೇದಗಿಯ ಬಣ್ಣದ ವೀಳೆಯದೆಲೆಗಳನ್ನೂ, ಪಚ್ಚಕರ್ಪೂರವನ್ನೂ, ಕಸ್ತೂರಿ ಬೆರಸಿದ ಯಕ್ಷಕರ್ದಮವನ್ನೂ, ಬೇರೆ ಬೇರೆ ತೆಗೆದು ತೋರಿಸಿ, "ಸ್ವಾಮಿ, ಕಾದಂಬರೀದೇವಿಯು ಕೈಜೋಡಿಸಿಕೊಂಡು ಈ ಉಪಕರಣಗಳಿಂದ ತಮ್ಮನ್ನು ಬಹುವಾಗಿ ಅರ್ಚಿಸುತ್ತಾಳೆ; ಮಹಾಶ್ವೇತೆಯು ತಮ್ಮನ್ನು ಬಹಳ ನೆನಸುತ್ತಾಳೆ; ಮದಲೇಖೆ, ತಮಾಲಿಕೆ ಮುಂತಾದ ಕನ್ನಿಕೆಯರು ಒಡೆಯರ ಅಡಿದಾವರೆಗಳಿಗೆ ಪೊಡಮಡುತ್ತಾರೆ. ಮಹಾಶ್ವೇತೆಯು ನನ್ನ ಮುಖಾಂತರವಾಗಿ—'ನಿನ್ನನ್ನು ಇನ್ನೂ ನೋಡದ ಹೆಂಗಸರೇ ಧನ್ಯರು; ಯಾಕೆಂದರೆ, ನೀನು ಕಣ್ಣ ಮುಂದೆ ಇದ್ದಾಗ ನಿನ್ನ ಗುಣಗಳು ಚಂದ್ರನ ಚಂದ್ರಿಕೆಯಂತೆ ತಣ್ಣಗೆ ಸುಖಕೊಡುತ್ತವೆ; ಆದರೆ ಅವೇ ನಿನ್ನ ಗುಣಗಳು ನೀನು ಅಗಲಿದ ಕೂಡಲೆ ಸೂರ್ಯಕಿರಣಗಳ ಹಾಗೆ ತಾಪವನ್ನೂ ದುಃಖವನ್ನೂ ಕೊಡುತ್ತವೆ; ನೀನು ಇಲ್ಲಿ ಇದ್ದಾಗಿನ ಕಾಲವು ಇಲ್ಲಿಯವರೆಗೆ ಅಮೃತಮಯವಾಗಿತ್ತು; ಹಾಗೆಯೇ ಇನ್ನೊಮ್ಮೆ ಆಗ ಬೇಕೆಂದು ಎಲ್ಲರೂ ಇಚ್ಛಿಸುತ್ತಾರೆ. ಬಹಳ ಹೇಳುವದೇನು, ನೀನು ಇಲ್ಲಿಂದ ಹೋದಂದಿನಿಂದ ಗಂಧರ್ವನಗರವು ಹಾಳುಸುರಿಯುತ್ತದೆ; ನಾನು ಸರ್ವಸಂಗಪರಿತ್ಯಾಗಮಾಡಿದವಳಾದರೂ ಇನ್ನೊಮ್ಮೆ ನಿನ್ನ ದರ್ಶನವನ್ನು ತಕ್ಕೊಳ್ಳಬೇಕೆಂದು ನನ್ನ ಮನಸ್ಸು ಹರಿಯುತ್ತದೆ; ನಿನ್ನ ವಿಯೋಗದಿಂದ ಕಾದಂಬರಿಯ ಮನಸ್ಸು ಸ್ವಸ್ಥವಿಲ್ಲ; ಆಕೆ ಯಾವಾಗಲೂ ನಿನ್ನನ್ನೇ ನೆನಸುತ್ತಾಳೆ. ಆದದರಿಂದ ಇನ್ನೊಮ್ಮೆ ಬಂದು ಎಲ್ಲರ ಇಚ್ಛೆಯನ್ನು ಪೂರ್ಣ ಮಾಡಬೇಕು' ಎಂದು ಬಿನ್ನವಿಸಿರುವಳು" ಎಂದು ಹೇಳಿ, "ಈ ಶೇಷವೆಂಬ ಮುಕ್ತಾಹಾರವನ್ನು ತಾವು ತಮ್ಮ ಹಾಸಿಗೆಯ ಮೇಲೆ ಮರೆತು ಬಂದಿದ್ದಿರಿ ತಕ್ಕೊಳ್ಳಬೇಕು" ಎಂದು ತನ್ನ ಶೆಲ್ಲೆಯ ಸೆರಗಿನೊಳಗೆ ಕಟ್ಟಿದ ಹಾರವ ತೆಗೆದು ಮುಂದಿಟ್ಟನು.

ಬಳಿಕ ಚಂದ್ರಾಪೀಡನು—"ಇದೆಲ್ಲ ಮಹಾಶ್ವೇತೆಯ ಕೃಪೆಯ ಫಲವು;

ನಮ್ಮಂಥ ಬಡಸೇವಕರ ನೆನಪು ಕೃಪೆಯ ಹೊರತು ಆಗಾಗ ಹೇಗಾದೀತು; ಕಾದಂಬರೀದೇವಿಯು ಅಂತಃಕರಣಪೂರ್ವಕವಾಗಿ ಕಳಿಸಿದ ಪ್ರಸಾದವಿದು" ಎಂದು ಆ ಪರಿಮಳಿಸುವ ಪಚ್ಚೆದ ತೆನೆಗಳನ್ನು ತಲೆಯ ಮೇಲೆ ಇಟ್ಟು ಕೊಂಡು, ಕಾದಂಬರಿಯ ಅಂತಃಕರಣದೊಳಗಿನ ಪ್ರೇಮರಸವಿದೆಂದು ಆ ಆಹ್ಲಾದಕಾರಕವಾದ ವಿಲೇಪನದ್ರವ್ಯವನ್ನು ಮೈಗೆಲ್ಲ ಪೂಸಿಕೊಂಡು, ಮುತ್ತಿನ ಸರವನ್ನು ಕೊರಳೊಳಗೆ ಹಾಕಿಕೊಂಡು, ಎಲ್ಲರಿಗೂ ತಾಂಬೂಲ ಕೊಡಿಸಿ, ತಾನೂ ಸವಿದು, ರಾಜಕುಮಾರರಿಗೆ ಸನ್ಮಾನಪೂರ್ವಕವಾಗಿ ಹೋಗಲಪ್ಪಣೆ ಕೊಟ್ಟು, ಕೇಯೂರಕನ ಹೆಗಲಮೇಲೆ ಎಡದೋಳು ಹಾಕಿ, ಅವನನ್ನು ಕರಕೊಂಡು ಮೆಲ್ಲಮೆಲ್ಲನೆ ಆಡ್ಡಾಡುತ್ತ, ಗಂಧಮಾದನವೆಂಬ ಆನೆಯ ಹತ್ತರ ಹೋಗಿ, ಕ್ಷಣಹೊತ್ತು ಅದನ್ನು ನೋಡಿ, ತನ್ನ ಕೈಮುಟ್ಟಿ ಅದಕ್ಕೆ ಕೋಮಲ ತೃಣಗ್ರಾಸವನ್ನು ಕೊಟ್ಟು, ಅಲ್ಲಿಂದ ಮುಂದೆ ಸಾಗಿ ತನ್ನ ಪ್ರೀತಿಯ ಇಂದ್ರಾ-ಯುಧದ ಹತ್ತರ ಹೋಗಿ, ಅದರ ಬೆನ್ನ ಮೇಲಿನ ಜೂಲು ಒತ್ತಟ್ಟಿಗೆ ಸರಿದು ಓರೆಯಾದದ್ದನ್ನು ಕಂಡು, ಅದನ್ನು ತಾನೇ ತನ್ನ ಕೈಯಿಂದ ನೆಟ್ಟಗೆ ಸರಿಸಿ, ಮೇಲಕ್ಕೆ ಹಾರಿದ ಗೋಣ್ಮೂದಲುಗಳನ್ನು ಕೈಯಾಡಿಸಿ ನೆಟ್ಟಗೆ ಮಾಡಿ, ಸೇವಕರ ಕಡೆಗೆ ಮುಖದಿರುಪಿ ನೋಡಿದ ಕೂಡಲೆ ಅರಸನ ಇಂಗಿತ ವನ್ನರಿದು ಅವರೆಲ್ಲರೂ ದೂರ ಹೋಗಲು ಕೇಯೂರಕನೊಬ್ಬನೇ ಹತ್ತಿರ ಉಳಿದನು. ಆಗ ಚಂದ್ರಾಪೀಡನು ಇಂದ್ರಾಯುಧದ ಹೆಡಕಿನ ಮೇಲೆ ತೋಳು ಹಾಕಿಕೊಂಡು ತನ್ನ ಮೈಭಾರವನ್ನೆಲ್ಲ ಅದರ ಮೇಲೆ ಚೆಲ್ಲಿ, ಅತಿ ಕೌತುಕ ದಿಂದ--"ಕೇಯೂರಕಾ, ನಾನು ಹೊರಟು ಬಂದಾಗಿನಿಂದ ಆ ಗಂಧರ್ವರಾಜ ಮಂದಿರದೊಳಗಿನ ವೃತ್ತಾಂತವೇನು ? ಕಾದಂಬರಿಯು ಹೇಗೆ ಹೊತ್ತುಗಳೆ ವಳು ? ಮಹಾಶ್ವೇತೆ ಏನು ಮಾಡುತ್ತಿರುವಳು ? ಮದಲೇಖೆ ಏನು ಅನ್ನು ತ್ತಾಳೆ" ಎಂದು ಕೇಳಿದನು. ಅದಕ್ಕೆ ಕೇಯೂರಕನು "ಸ್ವಾಮಿ, ಆಲಿಸಬೇಕು. ತಾವು ಅಲ್ಲಿಂದ ಹೊರಟ ಬಳಿಕ ಕಾದಂಬರೀದೇವಿಯು ಕನ್ಯಾಂತಃಪುರದಿಂದ ಹೊರಬಿದ್ದು ತನ್ನ ಮೇಲುಪ್ಪರಿಗೆಯನ್ನು ಹತ್ತಿ ಹುಬ್ಬುಗೈ ಹಚ್ಚಿಕೊಂಡು ನಿಮ್ಮ ಕುದುರೆಯ ಖುರಪುಟದಿಂದೆದ್ದ ಕೆಂಧೂಳಿ ಕಾಣುವ ತನಕ ನೋಡುತ್ತ ನಿಂತುಕೊಂಡು, ಅದು ಕಾಣದ ಹಾಗಾದ ಬಳಿಕ ನಿಟ್ಟುಸುರು ಬಿಡುತ್ತ, ಮದಲೇಖೆಯ ಹೆಗಲಮೇಲೆ ಕೆನ್ನೆಯನ್ನಿಟ್ಟು, ತಾವು ಹೋದ ದಿಕ್ಕನ್ನು ಕೆಲ ಹೊತ್ತು ನೋಡುತ್ತ ನಿಂತುಕೊಂಡು ಬಳಿಕ ದುಗುಡದಿಂದ ಕೆಳಗಿಳಿದು, ಕ್ಷಣ

ಹೊತ್ತು, ಸಭಾಮಂಟಪದೊಳಗೆ ಕುಳಿತು, ಮನಸ್ಸಿಗೆ ಸೊಗಸೆನಿಸದ ಕಾರಣ ತಾವು ಇಳುಕೊಂಡ ಕ್ರೀಡಾಪರ್ವತವನ್ನು ಏರಿ,— 'ಚಂದ್ರಾಪೀಡನು ಕುಳಿತ ಮರಕತಮಣಿಯ ಹಾಸುಗಲ್ಲು ಇದೇ ಅಲ್ಲವೇನೆ? ಆತನು ಪನ್ನೀರಿನಿಂದ ಸ್ನಾನ ಮಾಡಿದೆಡೆಯು ಇದೇ! ಇದೇ ಸ್ಥಳದಲ್ಲಿ ಕುಳಿತು ಆತನು ಪ್ರಭುವಿನ ಪೂಜೆಯನ್ನು ಮಾಡಿದನು! ಅವನು ಕುಳಿತುಕೊಂಡು ಭೋಜನ ಮಾಡಿದ ಸ್ಫಟಿಕದ ಜಗುಲಿಯು ನೋಡು! ಇದೇ ಮಂಚದ ಮೇಲೆ ಮಲಗಿದ್ದನಲ್ಲವೇ!' ಎಂದು ಸಖಿಯರ ಕೂಡ ಮಾತಾಡುತ್ತ, ಒಡೆಯರ ವಿಲಾಸ ಸ್ಥಾನಗಳನ್ನು ನೋಡಿ ನೋಡಿ ಹೊತ್ತುಗಳೆಯಲಾರಂಭಿಸಿದಳು. ಇರುಳು ಮಹಾಶ್ವೇತೆಯ ಆಗ್ರಹದಿಂದ ಉಂಡು, ಸಜ್ಜೆವನೆಗೆ ಬಂದು, ತಲೆನೋವಿನಿಂದಲೂ, ದಾಹಜ್ವರದಿಂದಲೂ, ಮನೋವ್ಯಥೆಯಿಂದಲೂ ವ್ಯಾಕುಲಳಾಗಿ, ಹಾಸಿಗೆಯ ಮೇಲೆ ಹೊರಳಾಡುತ್ತ, ತೇಲುಗಣ್ಣು ಹಾಕುತ್ತ, ಅಡಿಗಡಿಗೆ ನಿಟ್ಟುಸುರು ಬಿಡುತ್ತ, ಕಷ್ಟದಿಂದ ಇರುಳುಗಳೆದು, ಬೆಳಗಾದ ಬಳಿಕ ನನ್ನನ್ನು ಕರೆದು, ಸ್ವಾಮಿಯವರ ಸುದ್ದಿಯ ತಿಳಕೊಂಡು ಬಾ! ಎಂದು ನನ್ನನ್ನು ತಮ್ಮ ಸನ್ನಿಧಿಗೆ ಬಹು ಆತುರದಿಂದ ಕಳಿಸಿರುವಳು" ಎಂದು ಹೇಳಿದನು.

ಈ ಮೇರೆಗೆ ಅರಿಕೆ ಮಾಡಿಕೊಂಡ ಕೇಯೂರಕನ ಮಾತು ಕೇಳಿ ಚಂದ್ರಾಪೀಡನು ಕಾದಂಬರಿಯ ಬಳಿಗೆ ಹೋಗಬೇಕೆಂಬ ಆತುರತೆಯಿಂದ 'ಕುದುರೆ ಸಿದ್ಧವಾಗಲಿ, ಕುದುರೆ ಸಿದ್ಧವಾಗಲಿ' ಎನ್ನುತ್ತ ಅಲ್ಲಿಂದ ಹೊರಟು ತನ್ನ ರಾಹುಟಿಯ ಕಡೆಗೆ ಬಂದನು. ಅಷ್ಟರೊಳಗೆ ಅಶ್ವಸೇವಕರು ಇಂದ್ರಾಯುಧವನ್ನು ಸಿದ್ಧಮಾಡಿ ತರಲು, ಚಂದ್ರಾಪೀಡನು ಕುದುರೆಯನ್ನೇರಿ ಪತ್ರಲೇಖೆಯನ್ನು ಹಿಂದೆ ಕುಳ್ಳಿರಿಸಿಕೊಂಡು, ವೈಶಂಪಾಯನನಿಗೆ ದಂಡು ಒಪ್ಪಿಸಿ, ಸಂಗಡ ಸೇವಕರನ್ನು ಕರಕೊಳ್ಳದೆ, ಮತ್ತೊಂದು ಕುದುರೆಯನ್ನು ಕೇಯೂರಕನಿಗೆ ಕೊಡಿಸಿ, ಆತನನ್ನು ಕರಕೊಂಡು ಅತಿ ತ್ವರೆಯಿಂದ ಹೇಮಕೂಟ ಪರ್ವತವನ್ನು ಆರೋಹಿಸಿ ಕಾದಂಬರಿಯ ಮಂದಿರದ ಮಹಾದ್ವಾರದ ಮುಂದೆ ಹೋಗಿ, ಮೊದಲು ಪತ್ರಲೇಖೆಯನ್ನು ಇಳಿಸಿ ತಾನೂ ಕುದುರೆಯಿಂದಿಳಿದನು.

ಅಲ್ಲಿಯ ದ್ವಾರಪಾಲಕರು ಚಂದ್ರಾಪೀಡನು ಬಂದದ್ದನ್ನು ಕಂಡು, ಓಡುತ್ತ ಬಂದು ಕುದುರೆಯನ್ನು ಹಿಡಿಯಲು, ಅವನು ಪತ್ರಲೇಖೆಯೊಡನೆ

ಮಂದಿರದೊಳಗೆ ಪ್ರವೇಶಿಸಿ, ಎದುರಿಗೆ ಬಂದ ಒಬ್ಬ ದಾಸಿಯನ್ನು ಕಾದಂಬ-ರೀದೇವಿಯು ಎಲ್ಲಿರುವಳೆಂದು ವಿಚಾರಿಸಿದನು. ಅದಕ್ಕೆ ಅವಳು— "ಜೀಯಾ, ಮತ್ತ ಮಯೂರಕವೆಂಬ ಕ್ರಿಡಾಪರ್ವತದ ಕೆಳಭಾಗದಲ್ಲಿ ಕಮಲವನ ವಾಪಿಕೆಯ ದಂಡೆಯ ಹತ್ತರ ಹಿಮಗೃಹದೊಳಗೆ ಇದ್ದಾಳೆ" ಎಂದು ಅರಿಕೆ ಮಾಡಿಕೊಂಡ ಕೂಡಲೆ ಕೇಯೂರಕನು ತನಗೆ ಆ ಸ್ಥಳದ ಮಾರ್ಗವು ಗೊತ್ತು ಇದ್ದದರಿಂದ ಅತ್ತಕಡೆಗೆ ಚಂದ್ರಾಪೀಡ ಪತ್ರಲೇಖೆಯರನ್ನು ಕರಕೊಂಡು ಹೊರಟನು. ಅವರು ಪ್ರಮದವನದೊಳಗಿನ ಚಮತ್ಕಾರಗಳನ್ನು ನೋಡುತ್ತ ಹೋಗುತ್ತಿರಲು, ಎದುರಿಗೆ ಸೊಂಪಿನಿಂದಲೂ ತಂಪಿನಿಂದಲೂ ಹೆಚ್ಚಾಗಿ ಶೋಭಿಸುವದೊಂದು ಕದಳೀವನವನ್ನು ಕಂಡರು. ಆದರ ನಡುವೆ ಆ ಹಿಮಗೃಹವು ಕಂಗೊಳಿಸುತ್ತಿತ್ತು. ಅದರೊಳಗೆ ಕಾದಂಬರಿಯ ಅಂತರಂಗದ ಸೇವಕರು ಸೇವೆಯಲ್ಲಿ ತತ್ಪರರಾಗಿ ಎಡೆಯಾಡುತ್ತಿದ್ದರು. ಅವರು ಚಂದ್ರಾ-ಪೀಡನನ್ನು ನೋಡಿ ಓಡುತ್ತ ಮುಂದೆ ಬಂದು ನೆಲಮುಟ್ಟಿ ನಮಸ್ಕರಿಸಿ ಕರಕೊಂಡು ಹೋದರು. ಆಗ ಒಳಹೊಕ್ಕು ನೋಡುತ್ತಾನೆ— ಅಲ್ಲಲ್ಲಿಗೆ ದಾಸಿಯರು ಶೀತೋಪಚಾರದ ಸಾಹಿತ್ಯಗಳನ್ನಳವಡಿಸುವದರಲ್ಲಿಯೇ ತೊಡಗಿದ್ದರು. ಅದನ್ನು ನೋಡುತ್ತ ಚಂದ್ರಾಪೀಡನು ಆ ಹಿಮಗೃಹದ ನಡುವೆ ಹೋಗಿ ನೋಡಲು ಅದು ಚಳಿಬೆಟ್ಟದೊಳಗಿನ ಗವಿಯೋ, ಮಾಗಿಯ ಕಾಲದ ಇರುಳೆಡೆಯೋ, ಮಳೆಗಾಲದ ನೆಲಮನೆಯೋ ಅನ್ನುವ ಹಾಗೆ ತಂಪು ಬೀರುತ್ತಿತ್ತು. ಅಲ್ಲಿ ಪುಟಿಯುತ್ತಿರುವ ನೂರಾರು ಜಲಯಂತ್ರಗಳ ತುಂತುರ್ವನಿಗಳು ಮಂಜುಗವಿದ ಹಾಗೆ ಕಾಣುತ್ತಿರುವವು; ಮೆಲ್ಲನೆ ಸುಳಿಯುವ ತಂಗಾಳಿಯು ಕದಂಬಪುಷ್ಪಗಳೊಳಗಿನ ಪರಾಗವನ್ನು ತಂದು ಹರಹುತ್ತಿರುವದು; ಅರಳಿದ ಹೂವಿನ ತನಿಗಂಪಿಗೆ ಹೆಣ್ದುಂಬಿಗಳೆರಗಿ ಜೇಂಕರಿಸುತ್ತಿರುವವು; ಪೂಗೊಂಚಲುಗಳಿಂದಲೂ ಕುಡಿಗಳಿಂದಲೂ, ಅರಳುಮೊಗ್ಗೆಗಳಿಂದಲೂ, ತೆನೆಗಳಿಂದಲೂ ಎಸೆಯುತ್ತಿರುವ ತರತರದ ಬಳ್ಳಿಗಳು ಕಿಡಿಕೆಗಳೊಳಗೆಲ್ಲ ಹಬ್ಬಿರುವವು. ಇವೆಲ್ಲಬಗೆಯ ಶೀತೋಪಚಾರದ ಸೊಬಗನ್ನು ನಡುವೆ ನಿಂತು ನೋಡುತ್ತಿರುವ ಚಂದ್ರಾಪೀಡನ ಅಂಗಾಲಿನಿಂದ ನಡುನೆತ್ತಿಯವರೆಗೆ ತಣ್ಣಗೆ ತಂಪೇರಿ ನಡುಗು ಹುಟ್ಟಿತು.

ಇಂಥ ಹಿಮಗೃಹದೊಳಗೆ ಮಳಲೆಡೆಯ ಮೃಣಾಳಮಂಟಪದಲ್ಲಿ ಹೂವಿನ ಹಾಸಿಗೆಯ ಮೇಲೆ ಮಲಗಿದ ಕಾದಂಬರಿಯ ಸುತ್ತುಮುತ್ತು ನೆರೆದು,

ಮತ್ತು ಶೀತೋಪಚಾರ ಮಾಡುತ್ತಿದ್ದ ಹೆಂಗಳೆಯರು ಚಂದ್ರಾಪೀಡನನ್ನು ನೋಡಿ ಕಾದಂಬರಿಗೆ ತಿಳಿಸಲು, ಚಟ್ಟನೆ ಎದ್ದು, 'ಎಲ್ಲಿರುವನು? ಯಾರು ನೋಡಿದರು?' ಎಂದು ಅವರನ್ನು ಆತುರತೆಯಿಂದ ಕೇಳುವಷ್ಟರಲ್ಲಿ ಚಂದ್ರಾಪೀಡನು ಅವಳೆದುರಿಗೇ ಹೋಗಿ ನಿಂತನು. ಅವನನ್ನು ನೋಡಿ ಕಾದಂಬರಿಯು ಕಯ್ಯೂರಿ ಮೆಲ್ಲನೆ ಎದ್ದು, ಎದೆಯಮೇಲಿನ ಸೆರಗು ನೆಟ್ಟಗೆ ಸರಿಸಿಕೊಂಡು, ಮುಂದಲೆಯ ಮುಂಗುರುಳುಗಳನ್ನು ಅವಸರದಿಂದ ತಿದ್ದಿ, ಆನಂದಬಾಷ್ಪಗಳುದುರುವ ಕಡೆಗಣ್ಣಿನ ನೋಟದಿಂದ ಆತನ ಮುಖವನ್ನು ಕೆಲಹೊತ್ತು ದಿಟ್ಟಿಸಿ ನೋಡಿದಳು. ಚಂದ್ರಾಪೀಡನೂ, ಮಹಾಶ್ವೇತೆಯೂ ಕಾದಂಬರಿಯೂ, ಒಬ್ಬರಿಗೊಬ್ಬರು ವಂದನೆ ಮಾಡಿ ಕುಳಿತುಕೊಂಡ ಬಳಿಕ, ಕೇಯೂರಕನು ಕಾದಂಬರಿಗೆ ಕೈಮುಗಿದು ಪತ್ರಲೇಖೆಯನ್ನವಳಿಗೆ ತೋರಿಸಿ— "ತಾಯಿ, ಚಂದ್ರಾಪೀಡರಾಜನ ತಾಂಬೂಲದ ಕರಡಿಗೆ ಹಿಡಿಯುವ ಇವಳು ಸ್ವಾಮಿಯವರಿಗತ್ಯಂತ ಪ್ರಿತ್ಯಾಸ್ಪದಳಾದ ಪತ್ರಲೇಖೆಯು;" ಎಂದು ಹೇಳಿ ಆಕೆಗೂ ಕಾದಂಬರಿಗೂ ಭೆಟ್ಟಿ ಮಾಡಿಸಿದನು. ಕಾದಂಬರಿಯು ಪತ್ರಲೇಖೆಯನ್ನು ನೋಡಿ ಕೌತಕದಿಂದ "ಬ್ರಹ್ಮನಿಗೆ ಮಾನುಷ ಸ್ತ್ರೀಯರ ಪಕ್ಷಪಾತವೆಷ್ಟುಂಟು ನೋಡಿರಿ!" ಎಂದು "ಇಲ್ಲಿ ಬಾ! ಇಲ್ಲಿ ಬಾ!" ಎಂದು ಆದರದಿಂದ ಕರೆದು ಕೈಹಿಡಿದು ಅವಳನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು ಮಮತೆಯಿಂದ ಮೈಮೇಲೆ ಕೈಯಾಡಿಸಿ ಆನಂದಪಟ್ಟಳು. ಇದನ್ನು ನೋಡಿ ಎಲ್ಲ ಸಖಿಯರು ಸೋಜಿಗಗೊಂಡರು.

ಆಗಮನ ಸಂಬಂಧದ ಉಪಚಾರದ ಮಾತುಗಳು ಮುಗಿದ ತರುವಾಯ, ಚಂದ್ರಾಪೀಡನು ವಿರಹವ್ಯಥೆಯಿಂದ ವ್ಯಥಿತಳಾದ ಕಾದಂಬರಿಗೆ "ದೇವೀ ನೀವು ಸೊರಗಿದಿರಿ; ಯಾವಾಗಲೂ ಕಣ್ಣೀರು ಸುರಿಸುತ್ತೀರಿ; ಹೀಗಾದ ಬಗೆಯೇನು? ನೀವು ಹೀಗಾದದ್ದನ್ನು ಕಂಡು ನನಗೆ ಬಹಳ ದುಃಖವಾಗುತ್ತದೆ" ಎಂದನು. ಈ ಮಾತಿಗೆ ಕಾದಂಬರಿಯು ಲಜ್ಜಿತಳಾಗಿ ತಲೆಬಾಗಿ ಏನೂ ಮಾತಾಡದೆ ಸುಮ್ಮನೆ ಓರೆನೋಟದಿಂದ ಆತನ ಮುಖ ನೋಡಿ ಮುಗುಳ್ನಗೆ ನಕ್ಕಳು. ಕಾದಂಬರಿಯು ಮಾತಾಡದೆ ಇದ್ದುದ್ದನ್ನು ನೋಡಿ ಮದಲೇಖೆಯು "ರಾಜಕುಮಾರನೇ, ಈಕೆಯ ಸಂತಾಪವು ಹೇಳಲಾರದಂಥದು, ನೀವೇ ಮನಸ್ಸುಗೊಟ್ಟು ಈಕೆಯ ಪ್ರಾಣವನ್ನು ಕಾಯಬೇಕು!" ಎಂದಳು. ಬಳಿಕ ಚಂದ್ರಾಪೀಡನು ಮಹಾಶ್ವೇತೆಯ ಕೂಡ ಪ್ರೀತಿಯ ಮಾತುಗಳನ್ನು

ಆಡುತ್ತ ಬಹಳ ಹೊತ್ತು ಕುಳಿತು, ಬಳಿಕ ಇಬ್ಬರನ್ನೂ ಕೇಳಿಕೊಂಡು ತಿರುಗಿ ಅಚ್ಛೋದ ಸರೋವರಕ್ಕೆ ಹೊರಡಲುದ್ಯುಕ್ತನಾಗಿ ಕಾದಂಬರಿಯ ಹಿಮಗೃಹದಿಂದ ಹೊರಟು, ಇಂದ್ರಾಯುಧದ ಮೇಲೆ ಆರೋಹಿಸುವದಕ್ಕೆ ಹೋಗಲು ಕೇಯೂರಕನು ಹಿಂದಿನಿಂದ ಓಡುತ್ತ ಬಂದು ಕೈಮುಗಿದು—"ಸ್ವಾಮೀ, ಪತ್ರಲೇಖೆಯನ್ನು ತನ್ನ ಬಳಿಯಲ್ಲಿ ನಾಲ್ಕೈದು ಹೊತ್ತು ಇಟ್ಟುಕೊಂಡು, ಹಿಂದಿನಿಂದ ಕಳಿಸುವೆನೆಂದು ಕಾದಂಬರಿಯು ಮದಲೇಖೆಯ ಮುಖದಿಂದ ತಮಗೆ ವಿಜ್ಞಾಪಿಸುತ್ತಾಳೆ. ದೇವರ ಚಿತ್ತಕ್ಕೆ ಬಂದಂತೆ ಮಾಡಬೇಕು" ಎಂದನು. ಕೇಯೂರಕನ ಮುಖದಿಂದ ಮದಲೇಖೆಯ ವಿಜ್ಞಾಪನೆಯನ್ನು ಚಂದ್ರಾಪೀಡನು ಕೇಳಿ "ಎಲೈ ಕೇಯೂರಕಾ, ಕಾದಂಬರೀದೇವಿಯ ಪ್ರೇಮವು ಪತ್ರಲೇಖೆಯ ಮೇಲೆ ಇಷ್ಟುಂಟೋ! ಹಾಗಾದರೆ ನಮ್ಮ ಪತ್ರಲೇಖೆ ಧನ್ಯಳು. ಒಳ್ಳೇಯದು ಅವಳು ಇರಲಿ!" ಎಂದು ಸಂತೋಷದಿಂದ ಹೇಳಿ, ಇಂದ್ರಾಯುಧವನ್ನು ಹತ್ತಿ ಗಮನಕ್ರಮದಿಂದ ತನ್ನ ದಂಡಿಳಿದ ಸ್ಥಳಕ್ಕೆ ಬಂದು ಮುಟ್ಟಿದನು.

ಅಷ್ಟರೊಳಗೆ ತಂದೆ ತಾರಾಪೀಡನ ಕಡೆಯಿಂದ ಒಬ್ಬ ಸೇವಕನು ಬಂದಿದ್ದನು. ಅವನನ್ನು ನೋಡಿ ಕುದುರೆಯನ್ನು ನಿಲ್ಲಿಸಿ, ಮುಂದೆ ಕರೆದು—"ಎಲಾ, ಸರ್ವಪರಿವಾರ ಸಹಿತ ನನ್ನ ತಂದೆಯೂ, ಅಂತಃಪುರ ಸ್ತ್ರೀಯರೊಡನೆ ನನ್ನ ತಾಯಿಯೂ ಸುಖವಾಗಿ ಇರುವರೋ?" ಎಂದು ಕೇಳಲು, ಆ ಸೇವಕನು ಪೊಡಮಟ್ಟು—"ಜೀಯಾ ಕ್ಷೇಮದಲ್ಲಿದ್ದಾರೆ" ಎಂದು ಅರಿಕೆ ಮಾಡಿಕೊಂಡು ಎರಡು ರಾಯಸಗಳನ್ನು ಕೈಯೊಳಗೆ ಕೊಡಲು, ಅವುಗಳನ್ನು ತೆಕ್ಕೊಂಡು ಚಂದ್ರಾಪೀಡನು ಭಕ್ತಿಯಿಂದ ತನ್ನ ಮಸ್ತಕಕ್ಕೆ ಹಚ್ಚಿಕೊಂಡು, ಒಡೆದು ಓದುತ್ತಾನೆ. ಅದರಲ್ಲಿ 'ಸ್ವಸ್ತಿಶ್ರೀ, ಉಜ್ಜಯಿನೀ ಪಟ್ಟಣದಲ್ಲಿರುವಂಥ, ಸಕಲ ರಾಜರಿಂದ ವಂದಿತನಾದಂಥ, ಪರಮೇಶ್ವರನ ಭಕ್ತನಾದ ತಾರಾಪೀಡನು ಅಷ್ಟೈಶ್ವರ್ಯಕ್ಕೆ ತವರಮನೆಯಾದ ಚಂದ್ರಾಪೀಡನಿಗೆ ಮುದ್ದು ಕೊಟ್ಟು ಬರೆದದ್ದೇನಂದರೆ—ಎಲ್ಲ ರೈತರು ಸುಖದಿಂದಿದ್ದಾರೆ; ನಾನೂ ನಿನ್ನ ಹೆತ್ತಾಕೆಯೂ ಸುಕ್ಷೇಮದಲ್ಲಿದ್ದೇವೆ. ಆದರೆ ನಿನ್ನನ್ನು ನೋಡದೆ, ಬಹಳ ದಿವಸಗಳಾದುದರಿಂದ ಎಲ್ಲರೂ ನಿನ್ನನ್ನು ಯಾವಾಗ ನೋಡೇವೆಂದು ಹಾರೈಸಿಕೊಂಡು ಕುಳಿತಿದ್ದೇವೆ. ಈ ಪತ್ರ ಓದಿದ ಬಳಿಕ ಒಂದು ಕ್ಷಣವಾದರೂ ತಡಮಾಡದೆ ಇಲ್ಲಿಗೆ ಹೊರಟು ಬರಬೇಕು" ಎಂಬದಾಗಿ ತಂದೆಯು

ಬರೆದಿದ್ದನು. ಶುಕನಾಸ ಮಂತ್ರಿಯು ಬರೆದ ಮಾನಪತ್ರದೊಳಗೂ ಇದೇ ಸಂಗತಿ ಇತ್ತು. ಅಷ್ಟರೊಳಗೆ ವೈಶಂಪಾಯನನು ಚಂದ್ರಾಪೀಡನ ಬಳಿಗೆ ಅವಸರದಿಂದ ಬಂದು, ತನಗೆ ಬಂದ ಇದೇ ಸಂಗತಿಯ ಪತ್ರವನ್ನು ತೋರಿಸಿ-ದನು. ಆಗ ಚಂದ್ರಾಪೀಡನು ತಂದೆಯ ಆಜ್ಞೆಯೇ ಪ್ರಮಾಣವೆಂದು ಹೇಳಿ, ಹಾಗೆಯೇ ಕುದುರೆಯ ಮೇಲೆ ಕುಳಿತವನು ಪ್ರಯಾಣದ ಭೇರಿಯ ಹೊಯ್ಸಲಪ್ಪಣೆ ಕೊಟ್ಟು, ಮೇಘನಾದನೆಂಬ ದಳಪತಿಯನ್ನು ಕರೆದು, "ನೀನು ಹಿಂದಣಿಂದ ಪತ್ರಲೇಖೆಯನ್ನು ಕರೆದುಕೊಂಡು ಬರಬೇಕು; ಅವಳನ್ನು ಕೇಯೂರಕನು ಕರಕೊಂಡು ಬಂದು ಇಲ್ಲಿಗೆ ಮುಟ್ಟಿಸುವನು. ಮಾರ್ಗದಲ್ಲಿ ಆಕೆಗೆ ಏನೂ ದುಃಖವಾಗದ ಹಾಗೆ ಬಹು ಎಚ್ಚರದಿಂದ ಮೆಲ್ಲಮೆಲ್ಲನೆ ಸಾಗಿಸಿಕೊಂಡು ಬಾ" ಎಂದು ಅಪ್ಪಣೆ ಮಾಡಿ ಯಾವತ್ತು ಸೈನ್ಯವನ್ನು ನೀನು ವ್ಯವಸ್ಥೆಯಿಂದ ಸಾಗಿಸಿಕೊಂಡು ಬರಬೇಕೆಂದು ವೈಶಂಪಾಯನನಿಗೆ ತಿಳಿಸಿ, ತನ್ನ ಮೈಗಾವಲ ರಾಹುತರನ್ನೊಡಗೊಂಡು ಹೊರಟನು. ಆಗ ಚಂದ್ರಾಪೀಡನು ಕಾದಂಬರಿಯ ವಿಯೋಗದಿಂದ ಶೂನ್ಯಾಂತಃಕರಣನಾಗಿದ್ದರೂ ತನ್ನ ಕುದುರೆಯ ಡುಮಚಿಯ ಹಿಡಕೊಂಡು ಸಂಗಡ ಬರುವ ಆ ಲೇಖವಾಹಕನ ಮುಖದಿಂದ ಉಜ್ಜಯಿನಿಯ ಕಡೆಯ ವರ್ತಮಾನವನ್ನು ಕೇಳುತ್ತಲೇ ಮಾರ್ಗಕ್ರಮಣ ಮಾಡಿದನು.

ಈ ಮೇರೆಗೆ ಗಮನಕ್ರಮದಿಂದ ಚಂದ್ರಾಪೀಡನು ಶೂನ್ಯಾರಣ್ಯವನ್ನು ದಾಟಿ ಹೊತ್ತು ಮುಳುಗುವ ಸಮಯಕ್ಕೆ ಒಂದು ಹಾಳು ಪ್ರದೇಶಕ್ಕೆ ಮುಟ್ಟಿದನು. ಅಲ್ಲಿ ದೂರ ಹಳೆಯ ಒಂದು ರಕ್ತಚಂದನ ವೃಕ್ಷದ ಮೇಲೆ ಹಚ್ಚಿದ್ದೊಂದು ಕಾವಿಯರವಿಯ ಪತಾಕೆಯನ್ನು ಕಂಡು, ಅದಕ್ಕೆ ಅಭಿಮುಖನಾಗಿ ಮುಂದೆ ಹೋಗಲು, ಒಂದು ದೊಡ್ಡ ದೇಗುಲ ಹತ್ತಿತು; ಅದರೊಳಗೆ ಚಂಡಿಕೆಯ ಉಗ್ರಮೂರ್ತಿಯಿತ್ತು; ಅದರ ಕೊರಳೊಳಗೆ ರುಂಡಮಾ-ಲೆಯನ್ನು ಹಾಕಿದ್ದರು. ಆ ದೇವಿಗೆ ಬಲಿಕೊಡುವದಕ್ಕಾಗಿ ದೇವಿಯ ಮುಂದೆ ಕೋಣವನ್ನು ಕಡಿದ ರಕ್ತವು ಸೋರಿರುವದು; ಮಾಂಸ ಮಿದುಳು-ಗಳು ಬಿದ್ದಿರುವವು. ದೇಗುಲದ ಅಂಗಳದಲ್ಲಿ ದೇವಿಯ ಎದುರಿಗೆ ಒಂದು ಜಗುಲಿಯ ಮೇಲೆ ಕಬ್ಬಿಣದ ಕೋಣವಿತ್ತು. ಒಬ್ಬ ವೃದ್ಧ ಧಾರ್ಮಿಕ ದ್ರವಿಡನು ಕೊರಳೊಳಗೆ ರುದ್ರಾಕ್ಷಮಾಲೆಗಳನ್ನು ಹಾಕಿಕೊಂಡು, ಹಣೆಗೆ ಭಸ್ಮವನ್ನು ಹಚ್ಚಿಕೊಂಡು ಆ ಚಂಡಿಕೆಯನ್ನು ಆರಾಧಿಸುತ್ತ ಎದುರಿಗೆ

ಕುಳಿತಿದ್ದನು. ದಿನಹೋದವನಾದದರಿಂದ ಅವನ ಮೈಮೇಲಿನ ನರಗಳು ಎದ್ದಿದ್ದವು. ಚಂಡಿಕೆಗೆ ನಮಿಸಿ ನಮಿಸಿ, ಅವನ ತಲೆಗೆ ಬುಗುಟಿಗಳೆದ್ದಿದ್ದವು. ಅವನ ಎರಡೂ ಕಿವಿಯಾಲೆಯ ತೂತುಗಳು ಲಿಂಬೆಯ ಹಣ್ಣು ಹಿಡಿಸುವಷ್ಟು ಅಗಲವಾಗಿದ್ದವು. ಆ ಸ್ಥಳವನ್ನು ನೋಡಿ ಚಂದ್ರಾಪೀಡನು ಅಲ್ಲಿ ಇಳಿಕೊಳ್ಳ ಬೇಕೆಂದು ಕುದುರೆಯಿಳಿದು ಆ ಚಂಡಿಕೆಯ ಗುಡಿಯೊಳಗೆ ಹೊಕ್ಕು, ಭಕ್ತಿಯಿಂದ ದೇವಿಗೆ ಪೊಡಮಟ್ಟು ಪ್ರದಕ್ಷಿಣೆ ಹಾಕಿ ಆ ದೇವಾಲಯದ ಸುತ್ತುಮುತ್ತಿನ ಶಾಂತಪ್ರದೇಶವನ್ನು ಕೌತುಕದಿಂದ ನೋಡುತ್ತ ಪೌಳಿಯಲ್ಲಿ ಅಡ್ಡಾಡ ಹತ್ತಿದನು. ಅಷ್ಟರೊಳಗೆ ಆ ಮುದಿದ್ರವಿಡನು ಈ ಜನರನ್ನು ಕಂಡು ಬಾಯಿಗೆ ಬಂದ ಹಾಗೆ ಬೈಯುತ್ತ ಹೊರಬಿದ್ದನು. ಅವನ ಬೈಗಳನ್ನು ಕೇಳಿ ಚಂದ್ರಾ-ಪೀಡನು ಹತ್ತಿರ ಬಂದು, ಅವನನ್ನು ಸಿಟ್ಟಿಗೆಬ್ಬಿಸಿದ ತನ್ನ ಸೈನಿಕರನ್ನು ನಿವಾರಿಸಿ ಕಾದಂಬರೀವಿರಹವ್ಯಥಿತನಾಗಿದ್ದರೂ ಸೌಮ್ಯಭಾಷಣಗಳಿಂದ ಆ ಮುದುಕನ ಸಿಟ್ಟು ಇಳಿಸಿ, ಅವನನ್ನು ಸಮಾಧಾನಪಡಿಸಿ ಅವನ ಜನ್ಮಭೂಮಿಯನ್ನೂ ವಿದ್ಯೆಯನ್ನೂ ಹೆಂಡಿರುಮಕ್ಕಳನ್ನೂ ವಯಸ್ಸನ್ನೂ ಸಂಪತ್ತನ್ನೂ ವಿರಕ್ತನಾದ ಕಾರಣವನ್ನೂ ವಿಚಾರಿಸುತ್ತಲೂ, ಆ ಪ್ರಶ್ನೆಗಳಿಗೆ ಆ ಮುದಿದ್ರವಿಡನು ವಿಸ್ತಾರಪೂರ್ವಕವಾಗಿ ಉತ್ತರ ಕೊಡುವಾಗ ಹೆಚ್ಚಿದ ಹಾಳುಹರಟೆಯನ್ನು ಕೇಳುತ್ತಲೂ ವಿನೋದದಿಂದ ಎರಡು ಗಳಿಗೆ ಹೊತ್ತು ಕಳೆದು ಆ ಮುದುಕನಿಗೆ ತಾಂಬೂಲ ಕೊಡಿಸಿದನು.

ಅಷ್ಟು ಹೊತ್ತಿಗೆ ಮುಂಗಾವಳು ಕವಿಯಲು, ರಾವುತರು ತಮ್ಮ ತಮ್ಮ ಕುದುರೆಯ ತಡಿಯ ತೆಗೆದು ಗಿಡಗಳ ಟೊಂಗೆಯ ಮೇಲಿಟ್ಟು, ಎದುರಿಗೆ ಈಟಿಯ ಗಣೆಗಳನ್ನು ನಡಿಸಿ, ಅವುಗಳಿಗೆ ಕುದುರೆಗಳನ್ನು ಕಟ್ಟಿ, ಅವುಗಳಿಗೆ ನೀರು ಕುಡಿಸಿ, ದಾಣಿಯ ತಿನಿಸಿ, ಮೇವು ಹಾಕಿ ಅಲ್ಲಲ್ಲಿಗೆ ಕಡುಗಲಿಗಳ ಕಾವಲಿಟ್ಟು, ಹಲವರು ತಮ್ಮ ತಮ್ಮ ಕುದುರೆಗಳ ಹತ್ತಿರ, ಹಲವರು ಗಿಡಗಳ ಕೆಳಗೆ ಮಲಗಿಕೊಂಡರು. ಹಲವರು ಅಲ್ಲಲ್ಲಿಗೇ ಉರಿಯ ಹಚ್ಚಿ ಕಾಯಿಸಿಕೊಳ್ಳುತ್ತ ಕುಳಿತರು. ಅಷ್ಟರೊಳಗೆ ಸೇವಕರು ಇಂದ್ರಾಯುಧವನ್ನು ಕಟ್ಟಿ, ಅದರ ಹತ್ತಿರ ಸಿದ್ಧಮಾಡಿಕೊಟ್ಟ ಶಯನದ ಮೇಲೆ ಚಂದ್ರಾಪೀಡನು ಕುಳಿತುಕೊಂಡು, ಮನೋಗಮನದಿಂದ ಕಿಂಪುರುಷ ದೇಶಕ್ಕೆ ಹೋಗಿ ಹಾಗೇ ಹೇಮಕೂಟ ಪರ್ವತದ ರಮಣೀಯ ಸ್ಥಳಗಳಲ್ಲೆಲ್ಲ ಎಡೆಯಾಡಿ ಮಹಾ-ಶ್ವೇತೆಯ ಅನಿಮಿತ್ತ ಬಂಧುತ್ವವನ್ನು ನೆನಸಿ, ಕಾದಂಬರಿಯ ದರ್ಶನವಾದದ್ದೆ

ತನ್ನ ಜನ್ಮದ ಸಾಫಲ್ಯವೆಂದು ಬಗೆದು, ಮದಲೇಖೆಯ ಮಾತುಗಳನ್ನು ನೆನಪಿಗೆ ತಂದು, ತಮಾಲಿಕೆಯ ತಾರತಮ್ಯಗಳನ್ನು ಸ್ಮರಿಸಿ, ಇನ್ನು ಕೇಯೂರಕನು ಎಂದು ಬಂದಾನೆಂದು ಹಾರೈಸಿ, ಹಿಮಗೃಹದ ನೆನಪಾದುದರಿಂದ ಬಿಸುಸುಯ್ದು, ತನ್ನ ಕೊರಳೊಳಗಿನ ಶೇಷವೆಂಬ ಹಾರದ ಮೇಲೆ ಮೋಹದಿಂದ ಕೈಯಾಡಿಸಿ, ಕಾದಂಬರಿಯ ಬಳಿಯಲ್ಲಿ ಉಳಿದ ಪತ್ರಲೇಖೆಯೇ ಮಹಾಪುಣ್ಯವಂತಳೆಂದು ಭಾವಿಸಿ, ಕಣ್ಣಿಗೆಕಣ್ಣು ಹಚ್ಚದೆ ಹಲುಬಿ ಹಂಬಲಿಸುತ್ತ ಇರುಳು ಕಳೆದನು. ಮೂಡಣಕೆಂಪು ಹರಿದಬಳಿಕ ಚಂದ್ರಾಪೀಡನು ಎದ್ದು, ಆ ಧಾರ್ಮಿಕ ದ್ರವಿಡನಿಗೆ ಬೇಕಾದಷ್ಟು ದ್ರವ್ಯಕೊಟ್ಟು, ಅವನ ಮನಸ್ಸು ತೃಪ್ತಿಪಡಿಸಿ, ಅಲ್ಲಿಂದ ಹೊರಟು, ಅಲ್ಲಲ್ಲಿಗೆ ರಮಣೀಯ ಸ್ಥಳಗಳಲ್ಲಿ ಬಿಡಾರವಿಡುತ್ತ ಪಯಣಗತಿಯಿಂದ ಉಜ್ಜಯಿನೀ ಪಟ್ಟಣಕ್ಕೆ ಬಂದು ಮುಟ್ಟಿದನು.

ಚಂದ್ರಾಪೀಡನು ಬಂದನೆಂಬ ಸುದ್ದಿಯ ಕೇಳಿ ತಾರಾಪೀಡ ಮಹಾರಾಜನು ಪರಮಹರ್ಷಿತನಾಗಿ ಅವಸರದಿಂದ ಕೆಲವು ಪರಿವಾರದವರನ್ನು ಕರಕೊಂಡು, ಕಾಲ್ನಡಿಗೆಯಿಂದ ಎದುರಿಗೆ ಬರಲು, ಚಂದ್ರಾಪೀಡನು ದೂರದಿಂದಲೇ ನೋಡಿ ಕುದುರೆಯನ್ನಿಳಿದು ತಲೆಬಾಗಿ ನೆಲಕ್ಕೆ ಕಿರೀಟ ಹಚ್ಚಿ ತಂದೆಯ ಚರಣಕ್ಕೆ ನಮಿಸಿದನು. ತಾರಾಪೀಡನು ಆನಂದಭರದಿಂದ ಬಾಗಿ 'ಬಾ ಮಗನೆ' ಎಂದು ಎರಡೂ ತೋಳುಗಳಿಂದ ಆತನನ್ನು ಎತ್ತಿ ಎದೆಗೆ ಅಪ್ಪಿಕೊಂಡನು. ತಂದೆಯ ತೆಕ್ಕೆಯೊಳಗಿಂದ ಬಿಡುಗಡೆಯಾಗಿ ಚಂದ್ರಾಪೀಡನು ಉಳಿದ ಮಾಂಡಲಿಕರಿಗೆ ಕ್ರಮದಿಂದ ವಿನಯಪೂರ್ವಕ ವಂದಿಸಿ, ನಿಂತನಿಂತಲ್ಲಿಯೇ ಕೈಮುಗಿಯುವ ಪುರಜನರ ಮುಜುರೆ ತಕ್ಕೊಳ್ಳುತ್ತ, ತಂದೆಯ ಕೂಡ ರಾಣಿವಾಸಕ್ಕೆ ಹೋಗಿ ತಾಯಿಯ ಅಡಿಗಳಿಗೆ ಪೊಡಮಡಲು, ಅವಳು ಅತ್ಯಾನಂದದಿಂದ ಮಗನನ್ನು ಅಪ್ಪಿಕೊಂಡಳು. ಬಳಿಕ ಚಂದ್ರಾಪೀಡನು ದಿಗ್ವಿಜಯದ ಸಂಗತಿಗಳನ್ನು ತಾಯಿತಂದೆಗಳಿಗೆ ಅರುಹುತ್ತ, ಅವರೊಡನೆ ಹೊತ್ತುಗಳೆದು, ಶುಕನಾಸಮಂತ್ರಿಯ ಮನೆಗೆ ಹೋಗಿ, ಆತನಿಗೆ ನಮಿಸಿ, ವೈಶಂಪಾಯನನು ಹಿಂದೆ ದಂಡು ತಕ್ಕೊಂಡು ಬರುತ್ತಾನೆಂದು ಹೇಳಿ, ಮನೋರಮಾತಾಯಿಯ ದರ್ಶನ ತಕ್ಕೊಂಡು, ತಿರುಗಿ ತನ್ನ ತಾಯಿಯ ಮನೆಗೆ ಬಂದು, ಪರಾಧೀನನಂತೆ ಸ್ನಾನ ಮುಂತಾದ ಕೆಲಸಗಳನ್ನು ತೀರಿಸಿಕೊಂಡು ಕುಮಾರಭವನವೆಂಬ ತನ್ನ ಮಂದಿರಕ್ಕೆ ಹೋದನು.

ಚಂದ್ರಾಪೀಡನು ಕಾದಂಬರಿಯನ್ನಗಲಿ ಬಂದುದರಿಂದ ಅವನಿಗೆ ಆ ಕುಮಾರಭವನವಷ್ಟೇ ಹಾಳು ಕಾಣುತ್ತಿತ್ತೆಂಬುವ ಹಾಗಿಲ್ಲ; ಇಡೀ ಉಜ್ಜಯಿನೀ ನಗರವೆಲ್ಲ ಭಣಭಣವೆನಿಸುತ್ತಿರುವದು. ಆದದರಿಂದ ಕಾದಂಬರಿಯ ಕಡೆಯ ಸುದ್ದಿಯು ಯಾವಾಗ ಬಂದೀತೆಂದು ಪತ್ರಲೇಖೆಯ ಮಾರ್ಗವನ್ನು ಪ್ರತೀಕ್ಷಿಸಹತ್ತಿದನು.

ಹೀಗೆ ಕೆಲವು ದಿವಸಗಳು ಹೋದ ತರುವಾಯು, ಮೇಘನಾದನು ಪತ್ರಲೇಖೆಯನ್ನು ಕರಕೊಂಡು ಚಂದ್ರಾಪೀಡನ ಬಳಿಗೆ ಬಂದನು. ಮೊದಲೇ ಪ್ರೀತ್ಯಾಸ್ಪದಳು, ಈಗಂತೂ ಕಾದಂಬರಿಯ ಹತ್ತರ ಹಲವು ದಿನ ನಿಂತು ಆಕೆಯ ಪ್ರಸಾದವೆಂಬ ಎರಡನೆಯ ಸೌಭಾಗ್ಯವನ್ನು ಪಡೆದು, ಆಕೆಯ ಕಡೆಯಿಂದ ತನ್ನ ಬಳಿಗೆ ಬಂದುದರಿಂದ ಅತ್ಯಂತ ಪ್ರೀತಿಗೆ ಪಾತ್ರಳಾದ ಪತ್ರಲೇಖೆಯು ಬಂದು ಚರಣಕ್ಕೆರಗಲು, ಚಂದ್ರಾಪೀಡನು ಆದರಪೂರ್ವಕ ಎದ್ದು, ಕೈಹಿಡಿದು, ಅವಳನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಹಾಗೆಯೇ ನೆಲಕ್ಕೆ ಹಣೆಹಚ್ಚಿ ನಮಿಸಿದ ಮೇಘನಾದನ ಬೆನ್ನು ಚಪ್ಪರಿಸಿ ಸೈ ಸೈ ಎಂದು ಆತನನ್ನು ಚನ್ನಾಗಿ ಪ್ರಶಂಸಿಸಿದನು.

ತರುವಾಯ ಚಂದ್ರಾಪೀಡನು ಪತ್ರಲೇಖೆಯನ್ನು ಕರಕೊಂಡು ಉಪವನದೊಳಗೆ ಹೊಕ್ಕು, ಅಲ್ಲಿ ಲತಾಮಂಟಪದೊಳಗೆ ಇಬ್ಬರೇ ಕುಳಿತುಕೊಂಡು— "ಪತ್ರಲೇಖೇ, ಕಾದಂಬರಿಯ ವೃತ್ತಾಂತವೇನು ಹೇಳು" ಎಂದು ಕೇಳಲು, ಪತ್ರಲೇಖೆಯು— "ಜೀಯಾ, ನೀವು ಅಲ್ಲಿಂದ ಹೊರಟು ಇತ್ತಣ ದಾರಿಯ ಹಿಡಿದ ಬಳಿಕ, ಕೇಯೂರಕನ ಸಂಗಡ ನಾನು ತಿರುಗಿ ಕಾದಂಬರಿಯ ಬಳಿಗೆ ಹೋದಕೂಡಲೆ, ಅವಳು ನನ್ನನ್ನು ತನ್ನ ಹೂವಿನ ಹಾಸಿಗೆಯ ಮೇಲೆ ಕೂಡಿಸಿಕೊಂಡಳು. ನನ್ನ ಮೇಲಿನ ಆಕೆಯ ಪ್ರೀತಿಯನ್ನೆಷ್ಟೆಂದು ಹೇಳಲಿ! ಆಕೆಯ ಕಣ್ಣುಗಳು ನನ್ನ ಮುಖದಲ್ಲಿಯೇ ನಟ್ಟಿರುವವು; ಕೈ ನನ್ನ ಕೈ ಮೇಲೆಯೇ ಬಿದ್ದಿರುವದು; ಮೈ ನನ್ನ ಮೈಗೇ ಹತ್ತಿರುವದು; ನಾಲಿಗೆಯು ನನ್ನ ಹೆಸರಿಗೆ, ಹೃದಯವು ನನ್ನ ಮೇಲಿನ ಪ್ರೀತಿಗೆ ಎಡೆಯಾಗಿರುವವು. ಸಂಜೆಯ ಮುಂದೆ ಅವಳು ಹಿಮಗೃಹ ಬಿಟ್ಟು, ನನ್ನ ಕೈಹಿಡಿದುಕೊಂಡು ಸ್ವಲ್ಪ ಹೊತ್ತು ಅತ್ತಿತ್ತ ಅಡ್ಡಾಡಿ, ಸಂಗಡ ಬಂದ ಸಖಿಯರಿಗೆ ದೂರ ಹೋಗ ಹೇಳಿ, ನನ್ನೊಬ್ಬಳನ್ನೇ ಬಾಲೋದ್ಯಾನದೊಳಗೆ ಕರಕೊಂಡು ಹೋಗಿ, ಅಲ್ಲಿಯ ಪಚ್ಚದ ಸೋಪಾನದ ಪಳುಕಿನ ಜಗುಲಿಯ ಮೇಲೆ ಹತ್ತಿ, ರತ್ನ

ರದಿಂದ ಇದೇ ಈಗ ಇಲ್ಲಿಗೇ ಬಂದನಂತೆ ! ಇನ್ನು ನಾನು ಕಾದಂಬರೀ ದೇವಿಯ ಬಳಿಗೆ ನಿಶ್ಚಯವಾಗಿ ಬರುತ್ತೇನೆ; ನೀನು ಈ ಪತ್ರಲೇಖೆಯನ್ನು ಕರಕೊಂಡು ಈಗಲೇ ಮುಂದೆ ಹೋಗು ! ನಾನು ನಿಮ್ಮ ಬೆನ್ನ ಹಿಂದಿಂದೇ ಬಂದೆನು. ನೀವು ಮಾತ್ರ ತ್ವರೆಮಾಡಿ ಹೋಗಿ, ಬಂದೆನೆಂದು ದೇವಿಗೆ ಹೇಳಿರಿ " ಎಂದು ಕೇಯೂರಕನ ಸಂಗಡ ಪತ್ರಲೇಖೆಯನ್ನು ಕಳುಹಿ, ತಾನೂ ಅಲ್ಲಿಂದ ಹೊರಟು ರಾಜಮಂದಿರಕ್ಕೆ ಬಂದು, ತಂದೆಯ ಅಪ್ಪಣೆ ತಕ್ಕೊಂಡು, ವೈಶಂಪಾಯನನ ದರ್ಶನಕ್ಕೆಂದು ಹಲವು ಪರಿಜನರೊಡಗೊಂಡು ದಶಪುರಕ್ಕೆ ಬಂದನು. ಬಿಡಾರಗೊಂಡ ತನ್ನ ದಂಡಿನೊಳಗೆ ಹೊಕ್ಕು ನೋಡುತ್ತಾನೆ, ದಂಡನಾಯಕರೆಲ್ಲರೂ ಖಿನ್ನಮುಖರಾಗಿ ಅವಸರದಿಂದ ಬಂದು ಚಂದ್ರಾ-ಪೀಡನ ಚರಣಕ್ಕೆರಗಿದರು. ವೈಶಂಪಾಯನನಿಲ್ಲದ್ದರಿಂದಲೂ ಅವರು ದೀನ ಮುಖರಾದದರಿಂದಲೂ ಇವರಿಗೆ ಏನು ಎಡರು ಎಡೆಗೊಂಡಿತೋ ಎಂದು ಚಂದ್ರಾಪೀಡನು ಮನದೊಳಗೆ ಉಮ್ಮಳಗೊಂಡು, " ವೈಶಂಪಾಯನನು ಕಾಣುವದಿಲ್ಲ ! ಎಲ್ಲಿದ್ದಾನೆ ? " ಎಂದು ಆ ದಳಪತಿಗಳನ್ನು ಆತುರತೆಯಿಂದ ಕೇಳಿದನು. ಅವರು ಕೈಮುಗಿದು,— " ಜೀಯಾ, ಅವಧರಿಸಬೇಕು ! ವೈಶಂಪಾಯನನೂ ನಾವೂ ಅಚ್ಛೋದ ಸರೋವರದಲ್ಲಿ ಸ್ನಾನಮಾಡಿ, ಇನ್ನು ಬೇಗನೆ ಸೇನೆಸಹಿತ ಹೊರಡಬೇಕೆಂಬುವಷ್ಟರಲ್ಲಿ ಅವನು ಸರೋವರದ ದಂಡೆಯ ಮೇಲೆ ಏನನ್ನೋ ನೋಡಿ ಭ್ರಾಂತನಾಗಿ— " ನಾನು ನಿಮ್ಮ ಕೂಡ ಊರಿಗೆ ಬರುವದಿಲ್ಲ; ಇಲ್ಲೇ ಇರುತ್ತೇನೆ " ಎಂದು ಮರುಳು ಹಿಡಿದವನ ಹಾಗೆ ಮಾತಾಡಿ, ಅದರ ಬೆನ್ನುಹತ್ತಿ ಹೋದನು; ನಾವು ಬಹು ಪ್ರಕಾರ ಹೇಳಿಕೊಂಡು ಆದಷ್ಟು ಯತ್ನ ಮಾಡಿದೆವು; ಆದರೂ ನಮ್ಮ ಯತ್ನವೇನೂ ಸಾಗಲಿಲ್ಲ; ಹೋದವನು ಹಾಗೇ ಹೋದನು; ಇನ್ನು ಆತನ ಬೆನ್ನು ಹತ್ತು ವದು ಉಚಿತವಲ್ಲೆಂದು ಆತನನ್ನು ಬಿಟ್ಟು ದಂಡು ತಕ್ಕೊಂಡು ಇಲ್ಲಿಗೆ ಬಂದೆವು. ಅವನು ಅಲ್ಲಿ ಜೀವದಿಂದ ಮಾತ್ರ ಇದ್ದಾನೆ" ಎಂದು ಅರಿಕೆಮಾಡಿಕೊಂಡ ಸೇನಾನಿಗಳ ಮಾತು ಕೇಳಿ, ಒಳ್ಳೆಯದು ಅಲ್ಲಿ ಮಹಾಶ್ವೇತೆ ಮುಂತಾದ ತನ್ನ ಆಪ್ತರುಂಟು; ಅವರು ಆತನ ಸಮಾಚಾರ ತಕ್ಕೊಂಡಾರೆಂದು ಸಮಾಧಾನ ತಾಳಿ, ಪಟ್ಟಣಕ್ಕೆ ಬಂದು ಶುಕನಾಸಮಂತ್ರಿಯ ಮನೆಗೆ ಹೋಗುವಷ್ಟರಲ್ಲಿ ಈತನ ತಂದೆ ತಾರಾಪೀಡರಾಜನೂ ಶುಕನಾಸಮಂತ್ರಿಯೂ ವೈಶಂಪಾಯ ನನು ಬಾರದ ಸುದ್ದಿಯನ್ನೇ ಮಾತಾಡುತ್ತ, ಚಿಂತಿಸುತ್ತ ಕುಳಿತಿದ್ದರು.

ಚಂದ್ರಾಪೀಡನನ್ನು ನೋಡಿ, ತಾರಾಪೀಡನು— "ನೀನು ವೈಶಂಪಾಯನನನ್ನು ಬಿಟ್ಟು ಬಂದದ್ದೊಂದು ಹೊಲ್ಲದ ಕೆಲಸ ಮಾಡಿದಿ!" ಎಂದು ಸ್ವಲ್ಪ ಸಿಟ್ಟಿನಿಂದ ಆಡಿದ್ದನ್ನು ಕೇಳಿ ಶುಕನಾಸ ಮಂತ್ರಿಯು— "ಇದರೊಳಗೆ ಚಂದ್ರಾಪೀಡನದೇನೂ ತಪ್ಪು ಇಲ್ಲ. ತಿರ್ಯಗ್ಜಾತಿಯ ಚೇಷ್ಟೆಯುಳ್ಳ ವೈಶಂಪಾಯನನದೇ ತಪ್ಪು. ಆತನ ಮೈಸೊಕ್ಕಿಗೆ ತಕ್ಕ ಫಲವಾಯಿತು!" ಎಂದು ಅಂದನು. ಆಗ ಚಂದ್ರಾಪೀಡನು ತಂದೆಗೆ—"ಸ್ವಾಮಿ, ವೈಶಂಪಾಯನನನ್ನು ಬಿಟ್ಟು ಬಂದುದರಿಂದ ನಾನು ಅಪಕೀರ್ತಿಗೆ ಗುರಿಯಾದೆನು. ಆದಕ್ಕೆ ತಾವು ದಯಮಾಡಿ ನನಗೆ ಅಪ್ಪಣೆ ಕೊಡಬೇಕು! ನಾನು ಮರಳಿ ಅಚ್ಛೋದ ಸರೋವರಕ್ಕೆ ಹೋಗಿ ಆತನನ್ನು ಕರಕೊಂಡು ಬರುವೆನು" ಎಂದು ಶುಕನಾಸ ಮಂತ್ರಿಯ ಮುಖದಿಂದ ತಂದೆಗೆ ಅರಿಕೆ ಮಾಡಿಕೊಳ್ಳಲು, ತಾರಾಪೀಡನು ಮಗನಿಗೆ ಮರಳಿ ಅಚ್ಛೋದ ಸರೋವರಕ್ಕೆ ಹೋಗಲಪ್ಪಣೆ ಕೊಟ್ಟನು.

ಆ ಮೇಲೆ ಚಂದ್ರಾಪೀಡನು, "ಇನ್ನೇನು! ಕಾದಂಬರೀದೇವಿಯು ಕೈವಶವಾದ ಹಾಗೆಯೇ ಸರಿ!" ಎಂದು ಮನದೊಳಗೆ ಹರ್ಷನಿರ್ಭರಿತನಾಗಿ ಮರುದಿನ ಸನ್ನದ್ಧನಾಗಿ ಹೊರಟು, ತಂದೆಯ ಚರಣಕ್ಕೆರಗಿ, ಹೋಗಿ ಬರುತ್ತೇನೆ, ಅಪ್ಪಣೆಕೊಡಬೇಕೆಂದು ವಿನಯದಿಂದ ಕೈ ಜೋಡಿಸಿಕೊಂಡು ನಿಲ್ಲಲು, ತಂದೆಯೂ ತಾಯಿಯೂ ಮಂತ್ರಿಯೂ ಪುನಃ ಸ್ವಲ್ಪ ದಿನದಲ್ಲಿಯೇ ರಾಜಕುಮಾರನಿಗೆ ಪ್ರಯಾಣದ ಪ್ರಸಂಗ ಬಂತೆಂದು ಮನದೊಳಗೆ ಮರಮರನೆ ಮರುಗಿ ಬಹು ಕಷ್ಟದಿಂದ ಅಪ್ಪಣೆ ಕೊಟ್ಟರು.

ತರುವಾಯ ಚಂದ್ರಾಪೀಡನು ಸಂಗಡ ಕೆಲವು ರಾಜಕುಮಾರರನ್ನೂ ಮೈಗಾವಲ ರಾವುತರನ್ನೂ ಕರಕೊಂಡು, ಬಹಳ ತ್ವರೆಮಾಡಿ, ಪಯಣಗತಿಯಿಂದ ಅಚ್ಛೋದ ಸರೋವರಕ್ಕೆ ಹೋಗಿ, ಅಲ್ಲಿ ತನ್ನ ಗೆಳೆಯ ವೈಶಂಪಾಯನನನ್ನು ಹುಡುಕಿದನು. ಎಲ್ಲಿ ನೋಡಿದರೂ ಆತನ ಕುರುಹೇ ಕಾಣಲಿಲ್ಲ; ಮಹಾಶ್ವೇತೆಯ ಆಶ್ರಮಕ್ಕೆ ಹೋಗಿದ್ದಾನೆಂದು ಚಿಂತಿಸುತ್ತ ಅಲ್ಲಿಗೆ ಹೋಗಿ ನೋಡುತ್ತಾನೆ, ಮಹಾಶ್ವೇತೆ ದೀನಮುಖಳಾಗಿ ಕಣ್ಣೀರು ಸುರಿಸುತ್ತ ಕುಳಿತಿದ್ದಾಳೆ; ಆಕೆಯನ್ನು ತರಲಿಕೆಯು ಹಿಡಿದಿದ್ದಾಳೆ. ಇದನ್ನು ಕಂಡು ಚಂದ್ರಾಪೀಡನು ಭಯಚಕಿತನಾಗಿ ಏನು ಅನಿಷ್ಟವಾಯಿತೋ! ಎಂದು ಎಣಿಕೆಗೊಳ್ಳುತ್ತ, ಮೊದಲು ತನಗೆ ಎಷ್ಟೋ ಆದರ ಮಾಡಿದ ಈ ಮಹಾಶ್ವೇತೆಯು ತನ್ನನ್ನು ಕಣ್ಣೆತ್ತಿ ಈಗ ನೋಡಲೊಲ್ಲಳು! ಮಾತಾಡಿಸಲೊಲ್ಲಳು!

ಆದುದರಿಂದ ಇವಳಿಗೆ ಏನೋ ಒಂದು ಅಪಾರ ದುಃಖವಾಗಿರಬಹುದೆಂದು ಬಗೆದು,–"ದೇವೀ, ಅಂಥದೇನು ನಿನಗೆ ಆಯಿತು ?" ಎಂದು ಕೇಳಲು, ಅವಳು ನಿಟ್ಟುಸಿರು ಬಿಟ್ಟು–"ಎಲೈ ರಾಜಪುತ್ರನೇ, ಹೇಳುವದಕ್ಕೂ ಕೇಳುವದಕ್ಕೂ ಅಸದಳವಾದ ಈ ದುಃಖವನ್ನು ನಿನ್ನ ಮುಂದೆ ಏನೆಂದು ಹೇಳಲಿ! ನೀನು ಗಂಧರ್ವ ನಗರದಿಂದ ಉಜ್ಜಯನಿಯ ದಾರಿಯ ಹಿಡಿದ ಬಳಿಕ ಕಾದಂಬರಿಯ ವಿಷಯಕ್ಕೆ ನಾನು ಆಶೆ ದೊರೆದು, ಇಲ್ಲಿಗೆ ಬಂದು ಕಾಯವನ್ನು ಸಣ್ಣೈಸುವದಕ್ಕಾಗಿ ಉಗ್ರ ತಪವನ್ನು ಮಾಡತೊಡಗಿದೆನು. ಅಷ್ಟರಲ್ಲಿ ಒಂದು ದಿನ ನಿನ್ನೋರಿಗೆಯವನೊಬ್ಬ ತರುಣನು ಬಂದು ನನ್ನನ್ನು ನೋಡಿ,–"ಎಲೈ ಸುಂದರೀ, ನೀನು ಯಾರ ಸಲುವಾಗಿ ತಪಶ್ಚರ್ಯ ಮಾಡುತ್ತೀ? ನಿನ್ನ ಕಾಮೇಷ್ಟವನ್ನು ಹೇಳು. ನಿನ್ನ ಸೌಂದರ್ಯಕ್ಕೆ ನಾನು ಮೋಹಿತನಾದೆನು. ನನ್ನನ್ನು ಉಳಿಸಿಕೋ ಎಂದು ವ್ಯಗ್ರಚಿತ್ತನಾಗಿ ಅವಿನಯದ ನುಡಿಗಳನ್ನು ನುಡಿದನು. ಆ ಮಾತು ಕೇಳಿ ನಾನು ಆತನ ದುಷ್ಟಭಾವ ತಿಳಿದು, ಅವನಿಗೆ ಏನೂ ಉತ್ತರ ಕೊಡದೆ, ಇಲ್ಲಿ ನೀನು ನಿಲ್ಲಬಾರದು ಹೋಗೆಂದು ತರಲಿಕೆಯಿಂದ ಹೇಳಿಸಿ, ಆತನನ್ನು ಹೊರಗೆ ಹಾಕಿಸಿದೆನು. ಬಳಿಕ ಅವನು ಇರಳು ಚಂದ್ರೋದಯವಾದ ಕೂಡಲೆ ಏನೋ ಒಂದು ನೆವ ಮಾಡಿಕೊಂಡು ಒಳಗೆ ಬಂದು, ನನ್ನ ಕೈ ಹಿಡಿಯಲು ನಾನು ಕೋಪಿಷ್ಠಳಾಗಿ ತಿರ್ಯಗ್ಜಾತಿ ಚೇಷ್ಟೆಯುಳ್ಳ ನೀನು ಭಸ್ಮೀಭೂತನಾಗೆಂದು ಅವನಿಗೆ ಶಾಪಕೊಟ್ಟೆನು. ಆ ಮೇಲೆ ಅವನು ವಿನಯದಿಂದ ನನಗೆ ಬಹಳ ಪ್ರಕಾರ ಹೇಳಿಕೊಂಡನು. ಅದರಿಂದ ಮುಂದೆ ಶುಕನಾಗಿ ಜನಿಸೆಂದು ನಾನು ನುಡಿದ ಕೂಡಲೆ, ಆತನು ತನ್ನ ಪಾಪದಿಂದ ಅಲ್ಲಿಯೇ ಸುಟ್ಟು ಬೂದಿಯಾಗಿ ಬಿದ್ದನು. ಅವನು ನಿನ್ನ ಮಿತ್ರ ವೈಶಂಪಾಯನನೆಂದು ಹಿಂದಿನಿಂದ ತಿಳಿಯಿತು" ಎಂದು ಹೇಳಿದಳು. ಇದನ್ನು ಕೇಳಿ ಚಂದ್ರಾಪೀಡನು–"ಓಹೋ ಘಾತವಾಯಿತು! ದೇವೀ, ನೀನು ನನಗೆ ಈ ಜನ್ಮದಲ್ಲಿ ಕಾದಂಬರಿಯ ಸೇವೆ ಘಟಿಸದ ಹಾಗೆ ಮಾತ್ರ ಮಾಡಿದಿ! ಇನ್ನು ಮುಂದಿನ ಜನ್ಮದಲ್ಲಿಯಾದರೂ ನನಗೆ ಆಕೆಯ ಸೇವೆಯೊದಗುವಂತೆ ಸಹಾಯ ಮಾಡು" ಎಂದು ಮಹಾಶ್ವೇತೆಗೆ ಹೇಳಿ ಹರಣಹಾರಿ ನೆಲಕ್ಕುರುಳಿದನು. ಅದನ್ನು ಕಂಡು ತರಲಿಕೆಯು ಅಯ್ಯೋ ಘಾತವಾಯಿತೆಂದು ಮಹಾಶ್ವೇತೆಯನ್ನು ಬಿಟ್ಟು ಚಂದ್ರಾಪೀಡನ ದೇಹವನ್ನು ಹಿಡಿದಳು. ಆತನ ಅವಸ್ಥೆಯನ್ನು ಕಂಡು ಮಹಾಶ್ವೇತೆಯು ಶೋಕಮಾಡಿದನಂತೂ ನಾನು ಹೇಳಲಾರೆನು.

ಇತ್ತ, ಪತ್ರಲೇಖೆಯ ಮುಖದಿಂದ, ಚಂದ್ರಾಪೀಡನು ಅಚ್ಛೋದ ಸರೋವರಕ್ಕೆ ಬಂದನೆಂಬ ಸುದ್ದಿಯ ಕೇಳಿ, ಕಾದಂಬರಿಯು ಮಹಾಶ್ವೇತೆಯ ದರ್ಶನದ ನೆವ ಹೇಳಿ, ತಂದೆಯ ಅಪ್ಪಣೆ ತಕ್ಕೊಂಡು, ಸಂಗಡ ಮದಲೇಖೆಯನ್ನೂ ಕೇಯೂರಕನನ್ನೂ ಕರಕೊಂಡು, ಪತ್ರಲೇಖೆಯ ಕೈಹಿಡಕೊಂಡು, ಗಂಧರ್ವನಗರದಿಂದ ಅಚ್ಛೋದಸರೋವರಕ್ಕೆ ಬರಲು ಹೊರಟಳು. ಮಾರ್ಗ ತೋರಿಸುವದಕ್ಕೆ ಕೇಯೂರಕನನ್ನು ಮುಂದೆ ಮಾಡಿಕೊಂಡು ಬರುತ್ತ, ದಾರಿಯಲ್ಲಿ ಆ ಕಾದಂಬರಿಯು—“ ಮದಲೇಖೇ, ಆ ಚಂದ್ರಾಪೀಡನ ಕೂಡ ನಾನೇನೂ ಮಾತಾಡುವದಿಲ್ಲ ಕಂಡೆಯಾ ! ನೀನೇ ಬೇಕಾದರೆ ವಕ್ರೋಕ್ತಿಗಳಿಂದ ಮಾತಾಡು ! ನೋಡು, ಸಂತಪ್ತಳಾಗಿ ಹಿಮಗೃಹದಲ್ಲಿ ಹೂವಿನ ಹಾಸಿಗೆಯ ಮೇಲೆ ಹೊರಳುವವಳನ್ನು ಕಣ್ಣಾರೆ ನೋಡಿ, ಬಿಟ್ಟು ಹೋದ ಶಠನ ಕೂಡ ಇನ್ನೇತರ ಮಾತು ! ಪತ್ರಲೇಖೇ, ನಿಮ್ಮವರ ನಡತೆಯು ನಿನ್ನ ಮನಸ್ಸಿಗಾದರೂ ಬಂತೇನೇ ” ಎಂದು ಅಂತರಂಗದ ಅಕ್ಕರತೆಯಿಂದಲೂ ಬಹಿರಂಗದ ಮುನಿಸಿನಿಂದಲೂ ಸಖಿಯರ ಕೂಡ ಚಂದ್ರಾಪೀಡನ ಸಂಬಂಧದ ಮಾತುಗಳನ್ನೇ ಆಡುತ್ತ, ಯಾವಾಗ ಆತನನ್ನು ನೋಡೇನೆಂಬ ಆತುರತೆಯಿಂದ ಪಥಶ್ರಮವನ್ನು ಗಣನೆಗೆ ತಾರದೆ, ಮಹಾಶ್ವೇತೆಯ ಆಶ್ರಮಕ್ಕೆ ಬಂದು ನೋಡುತ್ತಾಳೆ, ಹೀಗಾಗಿತ್ತು ! ! !

ತನ್ನ ಸಲುವಾಗಿ ಪ್ರಾಣಬಿಟ್ಟ ಪ್ರಾಣದರಸನ ಅವಸ್ಥೆಯನ್ನು ಕಂಡು ಕಾದಂಬರಿಯು ಇದೇನಾಯಿತೆಂದು ಹೌಹಾರಿ, ಪತ್ರಲೇಖೆಯ ಕೈಬಿಟ್ಟು, ಬುಡಕೊಯ್ದ ಎಳೆಬಳ್ಳಿ, ಬಸವಳಿದು ಮುದುಡಿಬೀಳುವಂತೆ ದೊಪ್ಪನೆ ನೆಲಕ್ಕುರುಳಿ, ಎದೆ ಎದೆ ಬಡಕೊಂಡು, “ ಹಾ ನಾಥಾ ! ಹಾ ನಾಥಾ ! ಹಾ ಪ್ರಿಯನೆ ! ನಡು ಮದುವಿನೊಳು ಮಡದಿಯ ಕೈಬಿಡುವದುಚಿತವೆ ? ” ಎಂದು ಬಯಲಿಗೆ ಬಾಯಿಬಿಟ್ಟು ಹಲುಬಿ ಹಂಬಲಿಸಿ ಸತ್ವಗುಂದಿ, ಸೊಡರಿಗೆ ಹಿಡಿದ ಹೂವಿನಂತೆ ಮೊಗಬಾಡಿ, ಮೈಮರೆದು ಮೂರ್ಛೆ ಹೊಂದಿದಳು. ಪತ್ರಲೇಖೆಯಂತೂ ಇದೇನು ಮೋಸ ಬಂತೆಂದು ಭೂಮಿಯ ಬಗಿದು ಪ್ರಳಾಪಿಸ ಹತ್ತಿದಳು. ಮದಲೇಖೆಗೆ ಮುಗಿಲು ಹರಿದು ಬಿದ್ದ ಹಾಗಾಗಿ ಶೋಕಾತಿಶಯದಿಂದ ನಡುಗು ಹುಟ್ಟಿ, ಮಾತುಗಳೇ ಬರಲೊಲ್ಲವು. ಕೇಯೂರಕನು ಘಾತ ವಾಯಿತೆಂದು ಓಡುತ್ತ ಹೋಗಿ ಝರಿಯೊಳಗಿನ ನೀರು ತಂದು, ಕಾದಂಬರಿಯ ಕಣ್ಣಿಗೆ ಹಚ್ಚಿ, ನೆತ್ತಿಗೆ ಬಡಿದು, ಕಿವಿಯೊಳಗೆ ಊದಿ, ಕಾಲಿಗೆ ಬೂದಿಯ

ತಿಕ್ಕಿದನು. ಆಗ ಕಾದಂಬರಿಯು ಚೇತರಿಸಿಕೊಂಡು, ಮರಮರಳಿ ಮನದನ್ನನ-ಗುಣಗಳನ್ನು ನೆನೆನೆನಸಿ ಪುನಃ ಅಳಹತ್ತಿದಳು. ಮದಲೇಖೆಯು ಮೆಲ್ಲನೆ ತನ್ನ ದುಃಖವನ್ನು ಸೈರಿಸಿಕೊಂಡು—“ ದೇವೀ, ಇನ್ನು ಎಷ್ಟು ಪ್ರಲಾಪಿಸಿ-ದರೂ ಫಲವಿಲ್ಲ, ಕುಲವನ್ನು ಕಾಯ್ದುಕೊ. ನಿನ್ನ ಸಂಕಟದ ಸುದ್ದಿ ಹತ್ತಿದರೆ ತಾಯಿತಂದೆಗಳು ನಿಶ್ಚಯವಾಗಿ ಪ್ರಾಣ ಕೊಟ್ಟಾರು ” ಎಂದು ಸಮಾಧಾನ ಹೇಳಹೋಗಲು, ಕಾದಂಬರಿಯು— “ ಮೂಢಳೇ, ಜೀವದಾಶೆಯಿದ್ದವರಿಗೆ ತಾಯಿತಂದೆಗಳ ಆಶೆ ; ನಾನಂತೂ ನನ್ನ ಮನೋವಲ್ಲಭನ ಕೂಡ ಸಾಯು-ವದೇ ಸರಿಯೆಂದು ನಿಶ್ಚಯಿಸಿದ್ದೇನೆ. ನನ್ನ ಎಲ್ಲ ಬದುಕನ್ನು ಯಾಚಕರಿಗೆ ದಾನಕೊಡು, ಮಣಿಗಿರಿಯನ್ನು ಮುನೀಶ್ವರನಿಗೆ ಕೊಡು, ವೀಣೆಯನ್ನು ನೀನು ತೆಗೆದುಕೊ, ನನ್ನ ತಾಯಿತಂದೆಗಳಿಗೆ ದುಃಖವಾಗದ ಹಾಗೆ ಸಮಾಧಾನ ಹೇಳು, ನೀನು ಇನ್ನು ಶೋಕ ಮಾಡಬೇಡ, ಗಂಧರ್ವನಗರಕ್ಕೆ ಹೋಗು ! ! ” ಎಂದು ಮದಲೇಖೆಯನ್ನು ಕಳುಹಿ ಮಹಾಶ್ವೇತೆಯನ್ನು ಅಪ್ಪಿಕೊಂಡು— “ ಅಕ್ಕಾ ಮಹಾಶ್ವೇತೇ, ಇನ್ನು ನಿನ್ನ ಮೇಲಿನ ಆಶೆ ನನಗಿಲ್ಲ, ನನ್ನ ಮೇಲಿನ ಆಶೆ ನಿನಗಿಲ್ಲ, ಜನ್ಮಜನ್ಮದಲ್ಲಿ ದೇವರು ನನ್ನನ್ನೂ ನಿನ್ನನ್ನೂ ಪುನಃ ಕೂಡಿಸಲಿ ! ” ಎಂದು ಅವಳಿಗೆ ಹೇಳಿ, ಚಂದ್ರಾಪೀಡನ ದೇಹವನ್ನು ನಾನಾ-ಪ್ರಕಾರದ ಪುಷ್ಪಗಳಿಂದ ಪೂಜಿಸಿ, ತನ್ನ ಸಲುವಾಗಿ ಉಜ್ಜಯಿನೀ ನಗರದಿಂದ ಇಲ್ಲಿಯವರೆಗೆ ಬಳಲುತ್ತ ಬಂದ ಚರಣಗಳಿವೇ ಎಂದು ಆತನ ಪಾದಗಳನ್ನು ಹಿಡಿದೆತ್ತಿ, ತೊಡೆಯ ಮೇಲಿಟ್ಟುಕೊಂಡು ಸಂವಾಹನ ಮಾಡಹತ್ತಿದಳು. ಕಾದಂಬರಿಯ ಕೈ ಸೋಂಕಿದ ಕೂಡಲೆ ಆ ದೇಹದಿಂದ ಒಂದು ಜ್ಯೋತಿಯು ಹೊರಟು ಆಕಾಶಕ್ಕೆ ಹಾರಿ—“ ಮಹಾಶ್ವೇತೇ, ಪೂರ್ವದಲ್ಲಿ ನಿನಗೆ ಅಭಯ ವಚನ ಕೊಟ್ಟ ಜ್ಯೋತಿಯು ನಾನೇ. ನೀನು ನನ್ನ ಮಾತು ಕೇಳಿ ಜೀವಹಿಡಿದ ಕಾರಣ ನಿನ್ನ ಪ್ರಿಯನಾದ ಪುಂಡರೀಕನ ದೇಹವು ನನ್ನ ಬಳಿಯಲ್ಲಿ ಸುರಕ್ಷಿತ ವಿದೆ. ಶಾಪಾವಸಾನವಾದ ಕೂಡಲೆ ಆ ಪುಂಡರೀಕನು ಮರಳಿ ನಿನ್ನ ಬಳಿಗೆ ಬರುವನು. ಈ ಚಂದ್ರಾಪೀಡನ ಶರೀರವು ನನ್ನ ಶರೀರವು ; ಕಾದಂಬರಿಯ ಕರತಲಸ್ಪರ್ಶದಿಂದ ಈತನಿಗೆ ಪುನಃ ಪ್ರಾಣವು ಬರುವದು. ಇವನಿಗಾದ ಶಾಪವು ತೀರುತ್ತ ಬಂತು, ಇನ್ನು ಸ್ವಲ್ಪ ಕಾಲದಲ್ಲಿಯೇ ಕಾದಂಬರಿಗೆ ಈತನ ಸಮಾಗಮಸುಖವುಂಟಾಗುವದು ; ಈಕೆ ಮಾತ್ರ ಚಂದ್ರಾಪೀಡನ ದೇಹ-ವನ್ನು ಹೀಗೆಯೇ ಹಿಡಿದು ಕಾಯ್ದುಕೊಂಡು ಕುಳಿತಿರಲಿ ” ಎಂದು ನುಡಿದು

ಆ ಜ್ಯೋತಿಯು ಆಕಾಶದಲ್ಲಿ ಅಂತರ್ಧಾನವಾಯಿತು. ಇದನ್ನು ಕಂಡು ಸರ್ವರೂ ವಿಸ್ಮಿತರಾದರು.

ಅಷ್ಟರೊಳಗೆ ಪತ್ರಲೇಖೆಯು "ಇನ್ನು ಉಜ್ಜಯಿನೀ ನಗರಕ್ಕೆ ಹೋಗಿ ತಾಯಿ ವಿಲಾಸವತಿಗೂ ತಂದೆ ತಾರಾಪೀಡನಿಗೂ ಏನು ಹೇಳಲಿ! ಹೇಗೆ ಮೋರೆಯ ತೋರಿಸಲಿ! ಚಂದ್ರಾಪೀಡನಿಗೆ ನಾನು ಒಳಗೆ ಹೃದಯವೂ ಹೊರಗೆ ನೆಳಲೂ ಆದವಳು, ಆತನನ್ನು ಕಳಕೊಂಡು ಇನ್ನು ಭೂಮಿಯ ಮೇಲೆ ಹೇಗೆ ಜೀವಿಸಲಿ!" ಎಂದು ಶೋಕವನ್ನು ತಡೆಯಲಾರದೆ, ಇಂದ್ರಾಯುಧನಿಗೆ ನೀರು ಕುಡಿಸಿಕೊಂಡು ಬರುತ್ತೇನೆಂದು ನೆವ ಹೇಳಿ, ಆ ಕುದುರೆಯನ್ನು ತಕ್ಕೊಂಡು ಹೋಗಿ, ಅದರೊಡನೆ ಅಚ್ಛೋದ ಸರೋವರದೊಳಗೆ ಧುಮುಕಿ ಮುಳುಗಿಹೋದಳು. ಆ ಮೇಲೆ ಎರಡು ಗಳಿಗೆಯ ತರುವಾಯ ಅದೇ ಸರೋವರದೊಳಗಿಂದ ಕಪಿಂಜಲಮುನಿಯು ಬಂದನು. ಆತನನ್ನು ಕಂಡು ಮಹಾಶ್ವೇತೆಯು ಆನಂದಾಶ್ಚರ್ಯಗಳಿಂದ ಆತನ ಚರಣಕ್ಕೆ ನಮಿಸಿ—"ಸ್ವಾಮಿ, ಅಂದು ಪುಂಡರೀಕನ ಶವ ತಕ್ಕೊಂಡು ಆಕಾಶಕ್ಕೆ ಹಾರಿಹೋದ ಆ ದಿವ್ಯಪುರುಷನ ಬೆನ್ನು ಹತ್ತಿ ನೀನು ಉಡ್ಡಾಣ ಮಾಡಿಹೋದವನು ಈಗ ಬಂದಿ! ಅಂದಿನಿಂದ ನಿನ್ನ ಮಾರ್ಗವನ್ನು ಪ್ರತೀಕ್ಷಿಸುತ್ತ ಆಶೆಹಿಡಿದು ಕುಳಿತಿದ್ದೇನೆ, ಅತ್ತಕಡೆಯ ವೃತ್ತಾಂತವೇನು, ನನಗೆ ಹೇಳಬೇಕು," ಎಂದು ಕೈ ಮುಗಿಯಲು ಆ ಕಪಿಂಜಲನು—"ತಾಯಿ, ಆಲಿಸು! ಪುಂಡರೀಕನ ದೇಹ ತಕ್ಕೊಂಡು ಹೋದ ಆ ಪುಣ್ಯಪುರುಷನು ಸಾಕ್ಷಾತ್ ಚಂದ್ರಮನು; ನಾನು ಅವನ ಬೆನ್ನು ಹತ್ತಿ ಆ ಲೋಕಕ್ಕೆ ಹೋಗುತ್ತೇನೆ,—ಆತನು ನನ್ನ ಮಿತ್ರನ ದೇಹವನ್ನು ತನ್ನ ದಿವ್ಯಾಸನದ ಮೇಲೆ ಇಟ್ಟುಕೊಂಡು ಕುಳಿತಿದ್ದನು. ಈತನನ್ನು ಏನು ಕಾರಣ ತಂದೆ? ಎಂದು ನಾನು ವಿಚಾರಿಸಲು, ಆತನು ನಿನ್ನ ಗೆಳೆಯನಾದ ಪುಂಡರೀಕನು ಕಾಮಾರ್ತನಾಗಿ ಬಳಲುತ್ತ ಬಿದ್ದಾಗ, ನಾನು ಉದಯನಾದೆನು; ಅದರಿಂದ ಅವನಿಗೆ ಮತ್ತಿಷ್ಟು ಕಾಮಸಂತಾಪವಾದುದರಿಂದ ಅವನು ಸಿಟ್ಟಿಗೆದ್ದು ನನಗೆ ಜನ್ಮ ಜನ್ಮದಲ್ಲಿ ಮರ್ತ್ಯಭಾವವನ್ನು ತಾಳೆಂದು ಶಾಪ ಕೊಟ್ಟನು; ಅದಕ್ಕೆ ನಾನು—'ಒಳ್ಳೆಯದು, ಭೂಮಿಯಲ್ಲಿ ನಾನು ಹುಟ್ಟಿ ಚಂದ್ರಾಪೀಡನೆಂಬ ಅರಸನಾಗುವೆನು, ನೀನು ಹುಟ್ಟಿ ವೈಶಂಪಾಯನನೆಂಬ ನನ್ನ ಮಂತ್ರಿಯಾಗು; ಮುಂದೆ ನಿನ್ನ ಅವಿನಯದ ಆಚರಣೆಯನ್ನು ಕಂಡು ಮಹಾಶ್ವೇತೆಯು ನಿನಗೆ ಶಾಪ ಕೊಡುವಳು, ಆ ಶಾಪದಿಂದ

ಗಿಳಿಯಾಗಿ ಹುಟ್ಟಿ ನನ್ನಂತೆಯೇ ಕಷ್ಟಗಳನ್ನು ಅನುಭೋಗಿಸು; ನಾನು ಕಾದಂಬರಿಯ ವಿರಹದಿಂದ ಪ್ರಾಣ ಬಿಟ್ಟು ಶೂದ್ರಕರಾಜನಾಗಿ ಹುಟ್ಟುವೆನು; ಆ ಕಾಲಕ್ಕೆ ಒಬ್ಬ ಚಾಂಡಾಲ ಕನ್ನಿಕೆಯು ನಿನ್ನನ್ನು ತಂದು ನನಗೆ ಕಾಣಿಕೆ ಕೊಡುವಳು' ಎಂದು ಪುಂಡರೀಕನಿಗೆ ನಾನು ಪ್ರತಿಶಾಪ ಕೊಟ್ಟೆನು. ಆಗ ಪುಂಡರೀಕನು ಮುಂದೆ ನಮ್ಮ ಗತಿಯೇನೆಂದು ಬಹು ದೀನೋಕ್ತಿಯಿಂದ ಕೇಳಿ ಕೊಂಡದ್ದಕ್ಕೆ ನಾನು—'ನಿನ್ನ ತಂದೆ ಶ್ವೇತಕೇತುಮುನಿಯೂ ನನ್ನ ತಂದೆ ತಾರಾಪೀಡನೂ ಪರಮೇಶ್ವರನನ್ನು ಆರಾಧಿಸಿದರೆ ನಮ್ಮಿಬ್ಬರಿಗೂ ಶಾಪ ವಿಮೋಚನವಾಗಿ, ನೀನು ಶುಕ ಜನ್ಮವನ್ನು ನೀಗಿ, ಮಹಾಶ್ವೇತೆಯನ್ನು ಕೂಡಿಕೊಳ್ಳುವಿ; ನಾನು ಶೂದ್ರಕ ಜನ್ಮವನ್ನು ನೀಗಿ, ಕಾದಂಬರಿಯನ್ನು ಕೂಡಿಕೊಳ್ಳುವೆನು. ಆ ಶಾಪ ಮುಗಿಯುವತನಕ ಪುಂಡರೀಕನ ದೇಹವನ್ನು ನಾನು ಈ ದಿವ್ಯಾಸನದ ಮೇಲೆ ಜತನದಿಂದ ಇಟ್ಟಿರುತ್ತೇನೆ. ನೀನು ಹೋಗಿ ಶ್ವೇತಕೇತುಮುನೀಶ್ವರನಿಗೆ ಪರಮೇಶ್ವರನನ್ನು ಆರಾಧಿಸೆಂದು 'ಸೂಚಿಸು' ಎಂದು ನನಗೆ ಹೇಳಿದನು. ಅದನ್ನು ಕೇಳಿ ನಾನು ಅವಸರದಿಂದ ಬರುವಾಗ, ಮಾರ್ಗದಲ್ಲಿ ಒಬ್ಬ ಮುನೀಶ್ವರನನ್ನು ದಾಟಿದೆನು; ಆತನು ಮುನಿದು ನೀನು ಕುದುರೆಯ ಹಾಗೆ ನನ್ನನ್ನು ದಾಟಿದ್ದರಿಂದ ಕುದುರೆಯಾಗಿ ಭೂಮಿಯ ಮೇಲೆ ಹುಟ್ಟೆಂದು ನನಗೆ ಶಾಪ ಕೊಟ್ಟನು. ಆಗ ನಾನು ಗದಗದನೆ ನಡುಗಿ ಆತನಿಗೆ ನಮಿಸಿ 'ಸ್ವಾಮೀ ನನ್ನ ದುರ್ಗುಣವನ್ನು ನೋಡ ಬಾರದು; ತಮ್ಮ ದಯಾಗುಣವನ್ನು ಬಿಡಬಾರದು, ನನ್ನ ಅಪರಾಧವನ್ನು ಕ್ಷಮಿಸಬೇಕು! ಆದಾಗದಿದ್ದರೆ, ನನ್ನ ಮಿತ್ರನ ಸಂಗಡ ಇರುವಂತೆ ನನಗೆ ಕರುಣಿಸಬೇಕು' ಎಂದು ಬಹಳ ಪ್ರಕಾರ ಬೇಡಿಕೊಂಡದ್ದಕ್ಕೆ ಆ ತಪಸ್ವಿಯು—'ನೀನು ಭೂಮಿಯಲ್ಲಿ ಇಂದ್ರಾಯುಧವೆಂಬ ಕುದುರೆಯಾಗಿ ಚಂದ್ರಾಪೀಡನ ಸೇವೆಯಲ್ಲಿರಬೇಕು, ಆಗ ನಿನ್ನ ಮಿತ್ರನ ಸಹವಾಸವು ನಿನಗೆ ಉಂಟಾಗುವದು. ಮುಂದೆ ಚಂದ್ರಾಪೀಡನು ವಿರಹದಿಂದ ತೀರಿದಾಗ, ನೀನು ಅಚ್ಛೋದ ಸರೋವರದೊಳಗೆ ಮುಳುಗಿ ಶಾಪಮುಕ್ತನಾಗುವಿ;' ಎಂದು ನನಗೆ ಹೇಳಿದ್ದನು. ಅದೇ ಪ್ರಕಾರ ನಾನು ಅಚ್ಛೋದ ಸರೋವರ ದೊಳಗೆ ಮುಳುಗಿ ಆ ದೇಹ ಬಿಟ್ಟು ಬಂದೆನು ಎಂದು ಹೇಳಲು, ಮಹಾ ಶ್ವೇತೆಯೂ ಕಾದಂಬರಿಯೂ ಅತಿ ವಿಸ್ಮಿತರಾಗಿ, ಒಳ್ಳೆಯದು, ಪತ್ರಲೇಖೆಯ ವೃತ್ತಾಂತವೇನೆಂದು ಕೇಳಿದರು. ಆಗ ಆ ಕಪಿಂಜಲನು, ಆಕೆಯದೇನೂ

ನನಗೆ ಗೊತ್ತು ಇಲ್ಲ. ಇನ್ನು ಶ್ವೇತಕೇತು ಮುನಿಯ ಬಳಿಗೆ ಹೋಗುತ್ತೇನೆಂದು ಹೇಳಿ, ಹೊರಟುಹೋದನು.

ಇತ್ತ ಕಾದಂಬರಿಯು ಚಂದ್ರಾಪೀಡನ ದೇಹದ ಮೇಲೆ ಪರಿಮಳ ದ್ರವ್ಯಗಳನ್ನೂ ಪರಿಪರಿಯ ಪುಷ್ಪಗಳನ್ನೂ ಹಾಕಿ ಅತ್ಯಾದರದಿಂದ ಅರ್ಚಿಸುತ್ತಿರಲು, ಮರುದಿವಸದಿಂದ ಚಂದ್ರಾಪೀಡನ ಕಾಯವು ಕಾಂತಿಗೊಳ್ಳಹತ್ತಿತು. ಅದನ್ನು ಕಂಡು ಕಾದಂಬರಿ ಮುಂತಾದವರು ಆನಂದಾಶ್ಚರ್ಯಪಟ್ಟು, ಚಂದ್ರಾಪೀಡನ ಸಂಗಡ ಬಂದ ಮಾಂಡಲಿಕ ರಾಜಕುಮಾರರಿಗೆ ಇದೆಲ್ಲ ವೃತ್ತಾಂತವನ್ನು ಹೇಳಿ, ಆ ದೇಹವನ್ನು ತೋರಿಸಿದರು. ಅವರು ಕಣ್ಮುಟ್ಟ ನೋಡಿ ಪರಮಹರ್ಷಿತರಾಗಿ— "ಕಾದಂಬರೀದೇವೀ, ಈ ಶುಭೋದಯವೆಲ್ಲ ನಿನ್ನಿಂದಲೇ ಸರಿ" ಎಂದು ನುಡಿದು ತಾರಾಪೀಡನ ಕಡೆಯಿಂದ ಬಂದ ಚರರ ಕೂಡ ಚತುರಕನೆಂಬ ಕರ್ಣಿಕನನ್ನು ಈ ವರ್ತಮಾನವನ್ನು ತಿಳಿಸುವದಕ್ಕೆ ಉಜ್ಜಯಿನೀ ನಗರಕ್ಕೆ ಕಳಿಸಿದರು. ಅವರೊಡನೆ ಆ ಕರ್ಣಿಕನು ಉಜ್ಜಯಿನೀ ನಗರಕ್ಕೆ ಹೋಗಿ ಈ ಕಷ್ಟವಿಸ್ಮಯಕಾರಕ ವೃತ್ತಾಂತವನ್ನು ಹೇಳಲು, ವಿಲಾಸವತಿಯೂ ತಾರಾಪೀಡನೂ ಶುಕನಾಸಮಂತ್ರಿಯೂ ಕಡು ತವಕದಿಂದ ಅಚ್ಛೋದ ಸರೋವರಕ್ಕೆ ಬಂದು ನೋಡುತ್ತಾರೆ— ಚಂದ್ರಾಪೀಡನ ದೇಹವು ಪೂರ್ವದಂತೆ ಕಾಂತಿಮಯವಾಗಿತ್ತು. ಈ ಶುಭಚಿಹ್ನವು ಕಾದಂಬರಿಯ ಮಹತ್ವದಿಂದ ಉಂಟಾಗಿರುವದೆಂದು ತಾರಾಪೀಡನು ತಿಳಿದನು. ಅರಸು ಬಂದುದರಿಂದ ಕಾದಂಬರಿಯೂ ಮಹಾಶ್ವೇತೆಯೂ ಮರ್ಯಾದೆಯಿಂದ ಆ ಸ್ಥಳಬಿಟ್ಟು ಒತ್ತಟ್ಟಿಗೆ ಮರೆಯಾದರು. ಮಗನ ಅವಸ್ಥೆಯನ್ನು ಕಂಡು ಶೋಕಿಸುವ ಹೆಂಡತಿಗೆ ಅಳತಕ್ಕದ್ದಲ್ಲೆಂತಲೂ ದುಃಖಿತಳಾದ ಸೊಸೆ ಕಾದಂಬರಿಗೆ ಸಮಾಧಾನ ಹೇಳೆಂತಲೂ ಅರಸನು ಅಂದನು. ಆ ಮಾತು ಕೇಳಿ ವಿಲಾಸವತಿಯು ಕಾದಂಬರಿಯನ್ನು ಅಪ್ಪಿಕೊಂಡು, ಆಕೆಯ ಕಣ್ಣೀರು ಒರೆಸಿ— "ತಾಯಿಾ ಕಾದಂಬರೀ, ಇನ್ನು ಶೋಕಮಾಡಬೇಡ! ದೇವರ ಕೃಪೆಯಿಂದ ನೀನು ಮುತ್ತೈದೆಯಾಗುವಿ" ಎಂದು ಹರಸಲು ಕಾದಂಬರಿಯು ಅತ್ತೆ ಮಾವಂದಿರಿಗೆ ನಮಿಸಿ, ಅತ್ತೆಯ ಹಿಂದೆ ಮರ್ಯಾದೆಯಿಂದ ಹುದುಗಿಕೊಂಡು ಕುಳಿತಳು.

ಅದನ್ನು ಕಂಡು ತಾರಾಪೀಡನು ಪೂರ್ವದಂತೆ ನೀನೇ ಚಂದ್ರಾಪೀಡನ ದೇಹವನ್ನು ಹಿಡಿದುಕೊಂಡು ಕುಳಿತಿರೆಂದು ಕಾದಂಬರಿಗೆ ಹೇಳಿ, ತಾನು

ಹೆಂಡತಿ ಸಹಿತ ತಪಶ್ಚರ್ಯಕ್ಕೆ ಕುಳಿತನು. ಶುಕನಾಸಮಂತ್ರಿಯೂ ತಪಸ್ಸು ಮಾಡತೊಡಗಿದನು.

ಜಾಬಾಲಿ ಋಷಿಯು ಈ ಕಥೆಯನ್ನು ತನ್ನ ಶಿಷ್ಯರಿಗೆ ಹೇಳಿ, ಈಗಲೂ ಆ ಚಂದ್ರಾಪೀಡನ ದೇಹವನ್ನು ಹಿಡಕೊಂಡು ಕಾದಂಬರಿಯು ಆ ಅಚ್ಛೋದ ಸರೋವರದ ತಟದಲ್ಲಿ ಕುಳಿತಿದ್ದಾಳೆ. ಮಹಾಶ್ವೇತೆಯು ಪುಂಡರೀಕನ ಆಶೆಯಿಂದ ಅಲ್ಲಿ ಈಗಲೂ ತಪಸ್ಸು ಮಾಡುತ್ತಾಳೆ; ಮಕ್ಕಳಿಗೆ ತಟ್ಟಿದ ಶಾಪವಿಮೋಚನಾರ್ಥವಾಗಿ ತಾರಾಪೀಡನೂ ಶುಕನಾಸನೂ ತಪಸ್ಸು ಮಾಡುತ್ತ ಈಗಲೂ ಆ ಅಚ್ಛೋದ ಸರೋವರದ ದಂಡೆಯ ಮೇಲೆ ಹಾಗೆಯೇ ಕುಳಿತಿದ್ದಾರೆ; ಅವಿನಯದ ಮೂಲಕ ಮಹಾಶ್ವೇತೆಯ ಶಾಪವು ತಟ್ಟಿ ವೈಶಂಪಾಯನನು ಗಿಳಿಯಾಗಿ ಹುಟ್ಟಿದನೆಂದು ಹೇಳಿದೆನಷ್ಟೇ, ಆ ಗಿಳಿಯು ಇದೇ ಎಂದು ಆ ಮುನಿಗಳಿಗೆ ಬೆರಳಿನಿಂದ ನನ್ನನ್ನು ತೋರಿಸಿ ಬೆಳಗಾಯಿತೆಂದು ಸ್ನಾನಕ್ಕೆ ಹೋದನು.

ಎಲೈ ಶೂದ್ರಕಭೂಪಾ ಕೇಳು, ಆ ಜಾಬಾಲಿ ಋಷೀಶ್ವರನು ನನ್ನ ವೃತ್ತಾಂತವನ್ನು ತನ್ನ ಶಿಷ್ಯರಿಗೆ ಕಥಿಸುವಾಗ, ನನಗೆ ನನ್ನ ಎರಡೂ ಜನ್ಮದ ನೆನಪಾಗಿ ನನ್ನ ವೈಶಂಪಾಯನ ಜನ್ಮದ ಗೆಳೆಯ ಚಂದ್ರಾಪೀಡನನ್ನೂ ಪುಂಡರೀಕ ಜನ್ಮದ ಗೆಳತಿ ಮಹಾಶ್ವೇತೆಯನ್ನೂ ಯಾವಾಗ ನೋಡೇನೆಂದು ಉತ್ಕಂಠಿತನಾಗಿ—"ಸ್ವಾಮಿ, ದಯಮಾಡಿ ನೀನು ನನ್ನನ್ನು ಬಿಟ್ಟರೆ ಈಗಲೇ ನಾನು ಆ ಅಚ್ಛೋದ ಸರೋವರಕ್ಕೆ ಹೋಗಿ ಅವರನ್ನು ಕೂಡಿಕೊಳ್ಳುವೆನು" ಎಂದು ಹಾರೀತಮುನಿಗೆ ದೀನೋಕ್ತಿಯಿಂದ ಹೇಳಿಕೊಂಡೆನು. ಆಗ ಆತನು ಪ್ರಣಯಕುಪಿತನಾಗಿ—"ಇನ್ನೂ ನಿನ್ನ ಚಂಚಲತನವ ಬಿಡಲೊಲ್ಲಿ! ಹಾರಿ ಹೋಗುವ ಸಾಮರ್ಥ್ಯ ನಿನಗೆ ಹುಟ್ಟಿದ ಬಳಿಕ ಹೋಗುವಿಯಂತೆ, ಆ ವರೆಗೂ ಸುಖದಿಂದ ಇಲ್ಲಿ ಇರು" ಎಂದು ನನ್ನನ್ನು ವಲ್ಕಲದ ಹಾಸಿಗೆಯ ಮೇಲೆ ಇಟ್ಟು ಪ್ರಾತಃಸ್ನಾನಕ್ಕೆ ಹೋದನು.

ಆಗ ನಾನು ನನ್ನ ಆಪತ್ತುಗಳನ್ನು ನೆನೆನೆನಸಿಕೊಂಡು ಇನ್ನೇನು ಮಾಡಲೆಂದು ಚಿಂತೆಯಿಂದ ಕುದಿಯುತ್ತ ಕುಳಿತಾಗ ಹಾರೀತಋಷಿಯು ಸ್ನಾನ ಮಾಡಿ ಬಂದು—"ನಿನ್ನನ್ನು ಹುಡುಕುತ್ತ ಕಪಿಂಜಲಋಷಿಯು ಬಂದಿದ್ದಾನೆ" ಎಂದು ನನಗೆ ಹೇಳಿದನು. ಆಗ ನಾನು ಅತ್ಯಾನಂದದಿಂದ ಕಪಿಂಜಲನನ್ನು ಅಪ್ಪಿಕೊಂಡು 'ನಿನ್ನ ದರ್ಶನವಿಲ್ಲದೆ ನನ್ನವೆರಡು ಜನ್ಮಗಳು ಹೋದವು!

ಇಂದಿಗೆ ನನಗೆ ನಿನ್ನ ದರ್ಶನವಾಯಿತು! ವಿಧಿಯು ವಿಮುಖವಾಗಲು ಎಲ್ಲವೂ ವಿಮುಖವೇ ಸರಿ" ಎಂದು ದೀನೋಕ್ತಿಯಿಂದ ಆತನ ಕೂಡ ಮಾತಾಡಲು, ಆತನೂ ನನ್ನ ಚರಣಕ್ಕೆರಗಿ ದೀನಮುಖನಾಗಿ ಕಣ್ಣೀರು ಸುರಿಸಿ—"ನಿನಗೆ ತಟ್ಟಿದ ಶಾಪವಿಮೋಚನಾರ್ಥವಾಗಿ ನಿನ್ನ ತಂದೆ ಶ್ವೇತಕೇತುಋಷಿಯು ತಪಸ್ಸು ಮಾಡಲಾರಂಭಿಸಿದ್ದಾನೆ; ನಿನ್ನ ಪಾಪ ಹಿಂಗಿ ನಿನಗೆ ಇಷ್ಟವಾಗಲೆಂಬ ಇಚ್ಛೆಯಿಂದ ನಿನ್ನ ತಾಯಿ ಲಕ್ಷ್ಮಿಯಾದರೂ ದೇವರನ್ನು ಆರಾಧಿಸುತ್ತಾಳೆ. ಇನ್ನು ಸ್ವಲ್ಪ ಕಾಲದಲ್ಲಿಯೇ ನಿನಗೆ ಕಲ್ಯಾಣವಾದೀತು; ಆ ವರೆಗೆ ಚಾಂಚಲ್ಯಕ್ಕೆ ಎಡೆಯಾಗದೆ ಸ್ವಸ್ಥ ಇರು; ನಾನು ನಿನ್ನ ತಂದೆಯ ಬಳಿಗೆ ಹೋಗುತ್ತೇನೆ" ಎಂದು ಹೇಳಿ ಹೋದನು.

ಆ ಮೇಲೆ ನಾನು ಕೆಲವು ದಿವಸ ಜಾಬಾಲಿಋಷೀಶ್ವರನ ಆಶ್ರಮದಲ್ಲಿ ಸುಖದಿಂದ ಕಾಲಕಳೆದು ಒಂದು ದಿನ ಇನ್ನು ಹಾರುವ ಸಾಮರ್ಥ್ಯವುಂಟಾಯಿತೆಂದು ತಿಳಕೊಂಡು ಆಕಾಶಕ್ಕೆ ಹಾರಿದೆನು. ಮುಂದೆ ಹಾರಿ ಹೋದ ಹೋದ ಹಾಗೆ ದಣಿದು, ಒಂದಾನೊಂದು ಅಡವಿಯೊಳಗೆ ಒಂದು ಗಿಡದ ಬುಡಕ್ಕೆ ಬಿದ್ದೆನು. ಅಲ್ಲಿಗೆ ಒಬ್ಬ ಅಂತ್ಯಜನು ಅಕಸ್ಮಾತ್ತಾಗಿ ಬಂದು ಬಲೆ ಹಾಕಿ ನನ್ನನ್ನು ಹಿಡಿದನು. ಆಗ ನಾನು ಅವನಿಗೆ— "ಮಹಾರಾಯಾ, ನಾನು ಮುನಿಪುತ್ರನು, ನನ್ನ ಹೆಸರು ವೈಶಂಪಾಯನ, ನನಗೆ ಪೂರ್ವಜನ್ಮ ಸ್ಮೃತಿಯುಂಟು, ನಾನು ಸಕಲ ಶಾಸ್ತ್ರಜ್ಞನು, ದಯಮಾಡಿ ನನ್ನನ್ನು ಜೀವದಿಂದ ಬಿಡು! ನಿನಗೆ ಈ ಕಾನನದೊಳಗೆ ಬೇರೆ ಅನೇಕ ಪಕ್ಷಿಗಳುಂಟು" ಎಂದು ಪರಿಪರಿಯಿಂದ ಬೇಡಿಕೊಂಡೆನು. ನನ್ನ ಮಾತು ಕೇಳಿ ಅವನು ವಿಸ್ಮಿತನಾಗಿ ಅತ್ಯಾನಂದದಿಂದ ಗಹಗಹಿಸಿ ನಕ್ಕು—"ಎಲೈ ಭದ್ರನೆ, ನನ್ನ ದೈವ ತೆರೆಯಿತು! ಹೇಳುತ್ತೇನೆ ಕೇಳು, ಸ್ವಲ್ಪ ದಿವಸಗಳ ಮುಂಚೆ ಯಾವನೋ ಒಬ್ಬನು ಬಂದು, ನಮ್ಮ ಯಜಮಾನನ ಮಗಳಿಗೆ ಜಾಬಾಲಿಋಷಿಯ ಆಶ್ರಮದಲ್ಲಿ ವೈಶಂಪಾಯನವೆಂಬದೊಂದು ಗಿಳಿಯಿದೆ, ಅದಕ್ಕೆ ವೇದಶಾಸ್ತ್ರ ಜ್ಞಾನವುಂಟೆಂದು ಹೇಳಿದನು. ಅಂದಿನಿಂದ ಆಕೆ ಅದನ್ನು ಯಾರು ತಂದುಕೊಟ್ಟಾರೆಂದು ಕುತೂಹಲಚಿತ್ತಳಾಗಿ, ತಂದವರಿಗೆ ಸಾವಿರ ಹೊನ್ನು ಕೊಡುವನೆಂದು ಹೇಳಿ ನನ್ನಂಥ ನೂರಾರು ಮಂದಿ ಚರರನ್ನು ದಿಕ್ಕುದಿಕ್ಕಿಗೆ ಕಳಿಸಿದ್ದಾಳೆ. ಇಂಥದರೊಳಗೆ ದೈವಯೋಗದಿಂದ, ಔಷಧದ ಸಲುವಾಗಿ ಅಡವಿಯೊಳಗೆ ತೊಳಲುತ್ತ, ಹುಡುಕುವ ಬಳ್ಳಿ ಕಾಲ್ತೊಡಕಿದಂತೆ ನೀನೇ ನನಗೆ ದೊರಕಿದಿ.

ನಿನ್ನ ಮಾತು ಕೇಳಲು ಜಾಬಾಲಿ ಋಷಿಯ ಆಶ್ರಮದಲ್ಲಿದ್ದ ವೈಶಂಪಾಯನ ನೆಂಬ ಗಿಳಿಯು ನೀನೇ ಎಂದು ನನಗೆ ಪೂರ್ಣ ಮನವರಿಕೆಯಾಯಿತು. ಇನ್ನು ಮೇಲೆ ನಿನ್ನನ್ನು ಬಿಡುವ ಮಾತೆಲ್ಲಿ? ನಾನು ನಿನ್ನನ್ನು ಒಯ್ದು ಆಕೆಗೆ ಕೊಡುವದೇ ನಿಶ್ಚಯ; ಮುಂದೆ ನಿನ್ನನ್ನು ಬಿಡುವದೂ ಬಂಧಿಸುವದೂ ಆಕೆಯ ಕೈಯೊಳಗುಂಟು." ಎಂದು ಹಿರ್ರನೆ ಹಿಗ್ಗಿ ನನ್ನನ್ನು ಒಯ್ದು ಆಕೆಯ ಮುಂದೆ ಇಟ್ಟು, ನಾನು ಆಡಿದ್ದನ್ನೆಲ್ಲ ಆಕೆಗೆ ಹೇಳಿದನು.

ಆಕೆ ನನ್ನನ್ನು ನೋಡಿ—"ಮಗನೇ, ಇನ್ನೂ ಎಲ್ಲಿಗೆ ಹೋಗಬೇಕೆಂದು ಮಾಡಿದ್ದೀ? ಪುಂಡರೀಕ ಜನ್ಮವನ್ನು ನೀಗಿ ಈ ಅವಸ್ಥೆ ಹೊಂದಿ, ಈಗ ಚಾಂಡಾಲರ ಕೈವಶವಾದದ್ದು ಸಾಕಾಗಲಿಲ್ಲವೇ? ಮೂಢಾ ಇದು ನಿನ್ನ ಅವಿನಯಕ್ಕೆ ತಕ್ಕ ಫಲವಾಯಿತು!" ಎಂದು ನನ್ನನ್ನು ಬಗೆಬಗೆಯಿಂದ ಹಳಿದು ಪಂಜರದೊಳಗೆ ಹಾಕಿದಳು. ಆ ಮಾತು ಕೇಳಿ ನಾನು ಬಹು ಚಿಂತಾಕ್ರಾಂತನಾಗಿ ಇನ್ನೇನೆಂದು ಈ ನಿಂದ್ಯ ಜನ್ಮಪಿಡಬೇಕು! ಇನ್ನು ಕೂಳೂ ನೀರೂ ಬಿಟ್ಟು ಸಾಯುವದೇ ಲೇಸೆಂದು ಮನದೊಳಗೆ ನಿಶ್ಚಯಿಸಿ ಆಕೆಯ ಕೂಡ ಮಾತಾಡದೆ ಸುಮ್ಮನೆ ಕುಳಿತೆನು.

ಅಷ್ಟರೊಳಗೆ ಆಕೆ ಹಣ್ಣುನೀರುಗಳನ್ನು ತಂದು ನನ್ನ ಮುಂದೆ ಇಟ್ಟು 'ತಿನ್ನು' ಎನ್ನಲು ನಾನು ಆ ಹಣ್ಣು ಮುಟ್ಟದೆ, ನೀರು ಕುಡಿಯದೆ, ಸುಮ್ಮನೆ ಕುಳಿತೆನು. ಅದನ್ನು ನೋಡಿ ಏನು ಕಾರಣ ತಿನ್ನಲೊಲ್ಲಿ? ಎಂದು ನನ್ನ ಮೇಲೆ ಸಿಟ್ಟಿಗೆದ್ದಳು. ಆಗ ನಾನು ಚಾಂಡಾಲರ ಕೈಯೊಳಗಿನ ಹಣ್ಣು-ನೀರುಗಳನ್ನು ಋಷಿಕುಮಾರರು ಸೇವಿಸುವದುಂಟೆ? ಎಂದು ಆಕೆಯನ್ನು ಕೇಳಿದೆನು. ಅದಕ್ಕೆ ಅವಳು, "ಇಷ್ಟು ಜಾಣತನವುಳ್ಳವನು ಅಂಥ ಪಾಪ ಕರ್ಮಕ್ಕೆ ಮನಸ್ಸು ಹಾಕಿ ಈ ಗತಿಗೆ ಯಾಕೆ ಬಂದಿ? ಪಶ್ಚಾತ್ತಾಪವಾಗುವ ಕೆಲಸಗಳನ್ನು ಜಾಣರು ಬಹುತರ ಮಾಡುವದಿಲ್ಲ;" ಎಂದು ಅಂದಳು. ಆ ಮಾತು ನನ್ನ ಮನಸ್ಸಿಗೆ ಬಹಳ ಹತ್ತಿದ್ದರಿಂದ ಆ ಹಣ್ಣು ತಿಂದು ನೀರು ಕುಡಿದೆನು.

ಈ ಮೇರೆಗೆ ದುರ್ದೈವದ ಕಾಲವು ಹೋಗಿ ಮುಂದೆ ನನಗೆ ಸುದೈವದ ಕಾಲವು ಒದಗಿತು. ಮರುದಿನ ಮುಂಜಾನೆ ನೋಡುತ್ತೇನೆ, ಆ ಚಾಂಡಾಲ ಗೃಹವು ಇಂದ್ರಭವನದಂತೆ ಶೋಭಿಸುತ್ತಿರುವದು; ಆ ಸ್ತ್ರೀಯು ಲಕ್ಷ್ಮೀದೇವಿ ಯಂತೆ ಕಾಣುತ್ತಿರುವಳು; ನನ್ನನ್ನು ಹಾಕಿದ ಪಂಜರವು ರತ್ನಮಯವಾಗಿ

ಹೊಳೆಯುತ್ತಿರುವದು. ಇದನ್ನೆಲ್ಲ ಕಂಡು ನನ್ನೊಳಗೆ ನಾನೇ ವಿಸ್ಮಿತನಾಗಿ ಇದೇನು ಕೌತುಕವೆಂದು ಬೆರಗಾಗಿ ಆಲೋಚಿಸುತ್ತ ಕುಳಿತುಕೊಂಡಾಗ ಆಕೆ ಬಂದು ತನ್ನ ಸೇವಕರ ಕೈಯಿಂದ ಪಂಜರ ಹಿಡಿಸಿಕೊಂಡು ನನ್ನನ್ನು ನಿನ್ನ ಬಳಿಗೆ ತಂದಳು. ಇನ್ನು ಮುಂದಿನ ಸಂಗತಿಗಳನ್ನು ಆಕೆಯನ್ನೇ ವಿಚಾರಿಸು! ಎಂದು ವೈಶಂಪಾಯನ ಗಿಳಿಯು ಶೂದ್ರಕರಾಜನಿಗೆ ತನ್ನ ವೃತ್ತಾಂತವನ್ನು ಹೇಳಿತು.

ಆ ಮೇಲೆ ಶೂದ್ರಕರಾಜನು ಆ ಚಾಂಡಾಲ ಕನ್ನಿಕೆಯನ್ನು ಕರಿಸಿ ಮುಂದಿನ ವೃತ್ತಾಂತವನ್ನು ನೀನು ಹೇಳೆಂದು ಆಕೆಗೆ ಅಪ್ಪಣೆ ಮಾಡಲು, ಅವಳು— "ಜೀಯಾ, ನಿನ್ನ ನಿಜರೂಪವನ್ನು ನೆನವು ಮಾಡಿಕೋ! ನೀನು ಲೋಕಾನಂದಕರನಾದ ಚಂದ್ರನು; ಪುಂಡರೀಕ ಶಾಪದಿಂದ ಭೂಮಿಯ ಮೇಲೆ ಚಂದ್ರಾಪೀಡನಾಗಿ ಹುಟ್ಟಿ ಕಾದಂಬರೀ ವಿರಹದಿಂದ ಆ ದೇಹವ ತೊರೆದು ಶೂದ್ರಕರಾಜನಾಗಿದ್ದೀ. ನಿನ್ನ ದೇಹವನ್ನು ಹಿಡಕೊಂಡು ಈಗ್ಯೂ ಕಾದಂಬರಿಯು ಅಚ್ಛೋದ ಸರೋವರದ ತಟದ ಮೇಲೆ ಕುಳಿತಿದ್ದಾಳೆ; ಈ ಗಿಳಿಯು ನಿನ್ನ ಮಿತ್ರನಾದ ವೈಶಂಪಾಯನನು; ನಾನು ಪುಂಡರೀಕನ ತಾಯಿ ಲಕ್ಷ್ಮಿಯು. ಶಾಪ ಮುಗಿಯುವತನಕ ಈ ವೈಶಂಪಾಯನ ಗಿಳಿಯು ಶೂದ್ರಕನ ಸ್ವಾಧೀನವಿರುವಂತೆ ಮಾಡೆಂದು ಶ್ವೇತಕೇತು ಋಷಿಯು ನನಗೆ ಸೂಚಿಸಿದ ಮೂಲಕ ನಾನು ಇದನ್ನು ನಿನ್ನ ಸ್ವಾಧೀನ ಮಾಡಬಂದೆನು; ನಿಮ್ಮ ಶಾಪಗಳು ತೀರುತ್ತ ಬಂದವು; ಇನ್ನು ಮೇಲೆ ನೀವಿಬ್ಬರೂ ಈ ನಿಂದ್ಯ ಕಾಯಗಳನ್ನು ಬಿಟ್ಟು ನಿಮ್ಮ ನಿಮ್ಮ ಪೂರ್ವದ ಕಾಯಗಳನ್ನು ಧರಿಸಿ, ಸುಖಗಳನ್ನು ಉಪಭೋಗಿಸುತ್ತ ಕೂಡಿಯೇ ಇರುವಿರಿ" ಎಂದು ಹೇಳಿದ ಕೂಡಲೇ ಶೂದ್ರಕರಾಜನು ಕಾದಂಬರಿಯನ್ನು ನೆನಸಿ ಪ್ರಾಣಬಿಟ್ಟನು; ಅವನ ಅವಸ್ಥೆಯನ್ನು ಕಂಡು ಆ ಗಿಳಿಯೂ ಜೀವ ಬಿಟ್ಟಿತು. ಇದನ್ನು ನೋಡಿ ಸರ್ವರೂ ವಿಸ್ಮಿತರಾದರು.

ಇತ್ತ ಮಧುಮಾಸದಲ್ಲಿ ಒಂದು ದಿನ ಕಾದಂಬರಿಯು ಚಂದ್ರಾಪೀಡನ ಪಾದಸೇವೆಯನ್ನು ಮಾಡುತ್ತ ಕುಳಿತಿರಲು, ಚಂದ್ರಾಪೀಡನು ಸಪ್ರಾಣನಾಗಿ ನಿದ್ರೆಯಿಂದ ಎದ್ದವನಂತೆ ಪರಮೇಶ್ವರನನ್ನು ಧ್ಯಾನಿಸುತ್ತ ಎದ್ದು ಕುಳಿತನು; ಒಮ್ಮಿಂದೊಮ್ಮೆ ಎದ್ದವನನ್ನು ನೋಡಿ ಕಾದಂಬರಿಯು ಅಂಜಲು. ಚಂದ್ರಾಪೀಡನು— "ಕಾಂತೇ, ನೀನು ಹೆದರಬೇಡ? ಅಗೋ ನೋಡು!

ಮಹಾಶ್ವೇತೆಯ ಪ್ರಿಯನಾದ ಪುಂಡರೀಕನು ಚಂದ್ರಲೋಕದಿಂದ ಹೇಗೆ ಬರುತ್ತಾನೆ" ಎಂದು ಹೇಳಿದನು. ಆಗ ಆಕೆ ಗಕ್ಕನೆ ತಿರುಗಿ ನೋಡುತ್ತಾಳೆ, ಪುಂಡರೀಕನು ಆಕಾಶದಿಂದ ಕೆಳಗಿಳಿದು ಬಂದು ಮಹಾಶ್ವೇತೆಯ ಪಾಣಿ-ಗ್ರಹಣ ಮಾಡಿದನು. ಅದನ್ನು ನೋಡಿ ಕಾದಂಬರಿಯು ತನ್ನ ಪ್ರತಿಜ್ಞೆ ಕೊನೆಗಂಡಿತೆಂದು ಆನಂದಪಟ್ಟು, ತಾನೂ ಚಂದ್ರಾಪೀಡನ ಪಾಣಿಗ್ರಹಣ ಮಾಡಿದಳು.

ಆ ಮೇಲೆ ಚಂದ್ರಾಪೀಡನು ತನ್ನ ಹೆಂಡತಿಯಾದ ಕಾದಂಬರಿಯೊಡನೆ ಬಂದು ತಂದೆತಾಯಿಗಳ ಚರಣಕ್ಕೆ ನಮಿಸಲು, ಅವರು ಪರಮೇಶ್ವರನ ಕೃಪೆಯಿಂದ ಮಗನಿಗೂ ಸೊಸೆಗೂ ಕಲ್ಯಾಣವಾಯಿತೆಂದು ಪರಮ ಹರ್ಷಿತರಾಗಿ ಇಬ್ಬರನ್ನೂ ಅಪ್ಪಿಕೊಂಡು ಹರಸಿದರು.

ಅನಂತರ ಪುಂಡರೀಕನು ತನ್ನ ಹೆಂಡತಿ ಮಹಾಶ್ವೇತೆ ಸಹಿತ ಬಂದು ಶುಕನಾಸನ ಪಾದಕ್ಕೆ ವಂದಿಸಿ— "ಶಾಪವಿಮೋಚನವಾಗಿ ಪುಂಡರೀಕನಾದೆನು. ಆದರೆ ನಾನು ನಿನ್ನ ಮಗ ವೈಶಂಪಾಯನನು" ಎಂದು ಅರಿಕೆ ಮಾಡಿದನು. ಅದನ್ನು ಕೇಳಿ ಶುಕನಾಸನು— "ಎಲೈ ಮುನಿಪುತ್ರನೇ, ನೀನು ನನ್ನ ಮಗನಾಗಿ ಹುಟ್ಟಿ, ಬಳಿಕ ಶಾಪವಿಮುಕ್ತನಾಗಿ, ನಿನ್ನ ನಿಜ ರೂಪವನ್ನು ತಾಳಿದಿ; ದೇವರ ದಯೆಯಿಂದ ನಿನಗೂ ಮಹಾಶ್ವೇತೆಗೂ ಕಲ್ಯಾಣವಾಯಿತು. ಇದನ್ನು ಕಣ್ಣಾರೆ ನೋಡಿದುದರಿಂದಲೂ ಮನಮುಟ್ಟಿ ಅರಿತುದರಿಂದಲೂ ನಾನು ಕೃತಾರ್ಥನಾದೆನು." ಎಂದು ಅವರಿಬ್ಬರನ್ನೂ ಅಪ್ಪಿಕೊಂಡು ಹರಸಿದನು.

ಅಷ್ಟರೊಳಗೆ ಕೇಯೂರಕನ ಮುಖದಿಂದ ಈ ಸುವಾರ್ತೆಯನ್ನು ಕೇಳಿ, ಚಿತ್ರರಥ ಗಂಧರ್ವರಾಜನೂ ಹಂಸರಾಜನೂ ಹೆಂಡಿರು ಸಹಿತ ಅಲ್ಲಿಗೆ ಬಂದು, ಅಳಿಯರನ್ನೂ ಹೆಣ್ಣುಮಕ್ಕಳನ್ನೂ ಅಪ್ಪಿಕೊಂಡು ಹರಸಿ, ಬೀಗರಿಗೆ ಆದರದಿಂದ ಸನ್ಮಾನ ಮಾಡಿ, ಕೈಮುಗಿದು ವಿನಯದಿಂದ ಅವರಿಗೆ ಹೇಳಿಕೊಂಡು, ಅವರೆಲ್ಲರನ್ನು ಗಂಧರ್ವನಗರಕ್ಕೆ ಆನಂದೋತ್ಸಾಹಗಳಿಂದ ಕರಕೊಂಡು ಹೋಗಿ, ತಮ್ಮ ತಮ್ಮ ರಾಜ್ಯಗಳನ್ನು ಅಳಿಯರಿಗೆ ಕೊಟ್ಟು ಪಟ್ಟ ಗಟ್ಟಿದರು.

ಈ ಮೇರೆಗೆ ದಂಪತಿಗಳು ಸುಖವನ್ನು ಅನುಭೋಗಿಸುತ್ತ, ಗಂಧರ್ವ ನಗರದಲ್ಲಿದ್ದಾಗ, ಒಂದು ದಿನ ಕಾದಂಬರಿಯು ಪತ್ರಲೇಖೆಯ ವೃತ್ತಾಂತ

ವೇನೂ ತಿಳಿಯಲಿಲ್ಲೆಂದು ಚಂದ್ರಾಪೀಡನನ್ನು ಕೇಳಿದಳು. ಆಗ ಆತನು "ಆ ಪತ್ರಲೇಖೆ ಯಾರೆಂದರೆ, ನನ್ನ ಹೆಂಡತಿ ರೋಹಿಣಿಯು. ಶಾಪ ತಟ್ಟಿ ಮರ್ತ್ಯಶರೀರ ತಾಳಿ ನಾನು ದಿವ್ಯಲೋಕದಿಂದ ಭೂಮಿಗೆ ಬಂದುದರಿಂದ ಆಕೆ ನನ್ನನ್ನು ಅಗಲಿ ಇರಲಾರದೆ ಪತ್ರಲೇಖೆಯಾಗಿ ಹುಟ್ಟಿ ನನ್ನ ತಾಂಬೂಲದ ಕರಡಿಗೆ ಹಿಡಿಯುವ ತೊತ್ತಾಗಿದ್ದಳು. ಆಕೆಯು ಸಲುವಾಗಿ ಚಂದ್ರ ಲೋಕದಲ್ಲಿ, ನಿನ್ನ ಸಲುವಾಗಿ ಗಂಧರ್ವ ನಗರದಲ್ಲಿ, ತಾಯಿತಂದೆಗಳ ಸಲುವಾಗಿ ಉಜ್ಜಯನೀ ನಗರದಲ್ಲಿ ಇರುವೆನು. ನಿನಗೆ ಪತ್ರಲೇಖೆಯ ದರ್ಶನವು ಚಂದ್ರ ಲೋಕದಲ್ಲಿ ಆಗುವದು" ಎಂದು ಹೇಳಿದನು.

— ಸಂಪೂರ್ಣ

# ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಮಾರಲಿಕ್ಕೆ ದೊರೆಯುವ

# ಪುಸ್ತಕಗಳು

| | | | ರೂ. ಆ. |
|---|---|---|---|
| ೧ | ನರಗುಂದದ ಬಂಡಾಯ | ಪಂಡಿತ ಭೀ. ಬಿ. ಹುಲಿಕವಿ | ೧—೦ |
| ೨ | ಸತ್ಯರಾಜಾ ಪೂರ್ವದೇಶದ ಯಾತ್ರೆಗಳು | ರಾಮರಾವ ಬೆನಗಲ್ | ೦—೮ |
| ೩ | ಕರ್ನಾಟಕ ಕಥಾಸರಿತ್ಸಾಗರದಲ್ಲಿ | ಬ್ರ॥ ಸಿದ್ಧಾಂತಿ ಶಿವಶಂಕರಶಾಸ್ತ್ರಿ | ೦—೬ |
| ೪ | ಕೌಸಲ್ಯಾ ಪರಿಣಯಂ | ಕೆ. ರಾಮಸ್ವಾಮಿ ಅಯ್ಯಂಗಾರ | ೦—೩ |
| ೫ | ಹಜರತ ಮಹ್ಮದ ಪಯಗಂಬರರು | ಎಂ. ಪಿ. ಪೂಜಾರ | ೦—೬ |
| ೬ | ರಾ. ನರಸಿಂಹಾಚಾರ್ಯರವರು | ನಾರಾಯಣ | ೦—೧ |
| ೭ | ಕವಿಕಾರ್ಯ ಪ್ರಶಂಸೆ | ಎಂ. ಆ. ರಾಮಾನುಜಯ್ಯಂಗಾರ | ೦—೩ |
| ೮ | ಬೇಗಮ ಸಮರು | ಎಸ್. ಎ. ಕುಲಕರ್ಣಿ | ೦—೬ |
| ೯ | ಕರ್ನಾಟಕ ಸ್ವಪ್ನವಾಸವದತ್ತಂ | ಪಂಡಿತ ಭೀ. ಬಿ. ಹುಲಿಕವಿ | ೦—೬ |
| ೧೦ | ಹರೀಶನ ಪ್ರೇಮ | | ೦—೪ |
| ೧೧ | ಜೈನಧರ್ಮ ಪರಿಭಾಷೆ | ಮ. ಪ್ರ. ಪೂಜಾರ | ೧—೪ |
| ೧೨ | ರಘುವಂಶ | ಕಲಮಡಿ ನರಹರಿರಾಯರು | ೩—೦ |
| ೧೩ | ಉತ್ತರರಾಮ ಚರಿತ್ರ ನಾಟಕವು | ಧೋ. ನ. ಮುಳಬಾಗಲ | ೦—೧೨ |
| ೧೪ | ಪಂಡಿತರಾಜ | ಶೇ. ರಂ. ಜೋಶಿ | ೦—೪ |
| ೧೫ | ಭೀಷ್ಮಾಚಾರ್ಯ | ಮ. ಪ್ರ. ಪೂಜಾರ | ೦—೫ |
| ೧೬ | ಕರ್ನಾಟಕ ನರಕಾಸುರ ವಿಜಯ ವ್ಯಾಯೋಗಂ | ಸಿದ್ಧಾಂತಿ ಶಿವಶಂಕರಶಾಸ್ತ್ರಿ | ೦—೩ |
| ೧೭ | ಇಸೋಪನ ಚರಿತ್ರ | ಶ. ನಾ. ಅಮ್ಮಿನಭಾವಿ | ೦—೩ |

| | | ರೂ. ಆ. |
|---|---|---|
| ೧೮ ವಿದ್ಯಾರಣ್ಯ ಸ್ವಾಮಿಗಳು | ಪಂಡಿತ ಫ. ಬಿ. ಜುಲಿಕಟ್ಟಿ | ೧-೦ |
| ೧೯ ಶ್ರೇಯಃಸಾಧನ | ,, | ೦-೧೨ |
| ೨೦ ಪಾರ್ವತಿ ಪರಿಣಯು | ಸ. ದಾ. ಜಸವಂತಿ | ೦-೧೨ |
| ೨೧ ಅಭಿಷೇಕ ನಾಟಕ | ಪಾಳ್ಯದ ಕುಂದದ ಶಾಸ್ತ್ರಿಗಳು | ೦-೬ |
| ೨೨ ಕಾಲಿದಾಸ ಚರಿತ್ರೆ | ಗು. ಹೆಂ. ಕಿತ್ತೂರ | ೦-೬ |
| ೨೩ ಕನ್ನಡ ಮಾತು ತಲೆಯೆತ್ತುವ ಬಗೆ | ಬಿ. ಎಂ. ಶ್ರೀಕಂಠಯ್ಯಾ | ೦-೧ |
| ೨೪ ಸುಭದ್ರಾಪೂರಣಂ | | ೦-೨ |
| ೨೫ ವೇಣುಪುರಿಯ ವರ್ಣಕ | ಪಂಡಿತ ಫ. ಬಿ. ಜುಲಿಕಟ್ಟಿ | ೦-೮ |
| ೨೬ ಅಮೇರಿಕೆಯೊಳಗಿನ ಬಡ ವಿದ್ಯಾರ್ಥಿಗಳು | ಶ್ರೀ. ನಾ. ಕೋಟಿ | ೦-೫ |
| ೨೭ ನೀತಿದರ್ಪಣ | ಫ. ಶ್ರೀ. ಅರಬಟ್ಟಿ | ೦-೨ |
| ೨೮ ಮೋಹಿನಿ ಅಥವಾ ಸಿಂದಕರ ನಡಾವಳಿ | ಗ. ಶು. ಮೊನ್ನಾಪ್ಪರವರ | ೦-೮ |
| ೨೯ ಆರ್ಯರ ಶಿಕ್ಷಣಪದ್ಧತಿ | ಎಸ್. ಎಸ್. ನರಹರಯ್ಯಾ | ೦-೪ |
| ೩೦ ಕನ್ನಡ ಕಾರ್ಯಸಾಗರ | ಗೂ. ಕೊ. ಅರಳಿ | ೦-೫ |
| ೩೧ ಗೃಹವೈದ್ಯಕವು | | ೦-೮ |
| ೩೨ ಶ್ರೀ. ದಿವಾಣ ಬಹಾದ್ದೂರ ಶ್ರೀನಿವಾಸರಾವ ರೊದ್ದ ಸಿ. ಆಯ್. ಇ. ಈ ಮಹನೀಯರ ಚರಿತ್ರೆಯು | ಕೃ. ಹೆಂ. ಕುಲಕರ್ಣಿ | ೦-೧ |
| ೩೩ ಪತಿವ್ರತೆಯರಾದ ಸತಿಯೂ ಸುನೀತಿಯೂ | | ೦-೪ |
| ೩೪ ಸುಪ್ರಸಿದ್ಧ ಪಹಾಣಿವೀರನಾದ ಕೀರಕಡ | ಮ. ಶ್ರೀ. ಪೂಜಾರ | ೦-೪ |
| ೩೫ ಒಳ್ಳೆಗನ್ನಡಿ ಎಂಬ ನೀತಿ ಶತಕವು | ಕೆ. ರಾಮಸ್ವಾಮಿಯ್ಯಂಗಾರ್ಯ | ೦-೧ |

| | | ರೂ. ಆ. |
|---|---|---|
| ೩೬ ಕರ್ನಾಟಕ ಯಯಾತಿ ನಾಟಕಂ | ರಾ. ವೆಂಕಟರಮಣಯ್ಯಾ | ೦—೪ |
| ೩೭ ವೇಣೀ ಬಂಧನ | ತ. ಸಾ. ಅಮ್ಮಿನಭಾವಿ | ೦—೪ |
| ೩೮ ಕನ್ನಡಿಗರ ಜನ್ಮಸಾರ್ಥಕತೆ | ವ. ಮ. ತಟ್ಟಿ | ೦—೩ |
| ೩೯ ಮಾನಸಶಾಸ್ತ್ರವು | ಗು. ಮು. ಉದಗಟ್ಟಿ | ೦—೮ |
| ೪೦ ಮದುವೆ | ಮ. ಪ್ರ. ಪೂಜಾರ | ೦—೨ |
| ೪೧ ಕಥಾ ಪಂಚಕ | ಭೀ. ಜಿ. ಹುಲಿಕವಿ | ೦—೧೦ |
| ೪೨ ಶುದ್ಧಿ ಸಂಘಟನೆ | ,, | ೧—೦ |
| ೪೩ ಸುವರ್ಣ ಸಂಪುಟ | | ೦—೮ |

( ಮೇಲಿನ ಪುಸ್ತಕಗಳಿಗೆ ೧೦೦ಕ್ಕೆ ೫೦ ರಷ್ಟು ಕಮಿಶನ್ ಕೊಡಲಾಗುವದು )

| | | |
|---|---|---|
| ೪೪ ಕರ್ನಾಟಕ ಶಬ್ದಾನುಶಾಸನಂ | ಸಂ. ಪ್ರೊ. ಎಸ್. ಎಸ್. ಬಸವನಾಳ | ೬—೦ |
| ೪೫ ಕಾವ್ಯಾವಲೋಕನಂ | ,, | ೩—೦ |
| ೪೬ ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ | ಎಸ್. ಎಸ್. ಮಾಳವಾಡ | ೧—೮ |
| ೪೭ ಕರ್ನಾಟಕ ಜನಜೀವನ | ಬೆಟಗೇರಿ ಕೃಷ್ಣಶರ್ಮ | ೧—೮ |
| ೪೮ **The Haridasas of Karnatak** | Karmarkar & Kalamadani | **1—8** |
| ೪೯ ಪಂಪ ಮಹಾಕವಿ | | ೩—೮ |

( ಮೇಲಿನ ಪುಸ್ತಕಗಳಿಗೆ ೧೦೦ಕ್ಕೆ ೧೨½ ಯಂತೆ ಕಮಿಶನ್ ಕೊಡಲಾಗುವದು )

**ಭಾ. ಗೋ. ಗೋಖಲೆ**
**ಗೌರವ ಪ್ರಧಾನ ಕಾರ್ಯದರ್ಶಿ**